## ಸತ್ತು ಬದುಕಿದ, ಬದುಕಿ ಉಳಿದ ನಿರಂಜನ • • •

'ಸತ್ತು ನೋಡು'* ಎಂದು ಸಾವನ್ನು ಸ್ವಾಗತಿಸಿ ಸವಾಲೆಸೆದ ನಿರಂಜನ ಮಾರ್ಚಿ 13, 1992ರಂದು ನಿಧನರಾದರು ; ಬದುಕಿ ಉಳಿದರು ; ಕೀರ್ತಿಶೇಷರಾದರು. ಸನಾತನ ನಿತ್ಯನೂತನ ಮಾನವಭವಿತವ್ಯಕ್ಕೆ ತಮ್ಮ ಬದುಕಿನ ಅವಧಿಯಲ್ಲಿ ಹೊಸ ಹೊಸ ಆಯಾಮಗಳನ್ನು ಕಂಡುಂಡು ತೆರದು ತೋರಿದರು.

ಬದುಕಿನುದ್ದಕ್ಕೂ ಅದೆಷ್ಟು ತುಮುಲ ತುಯ್ಯಾಟಗಳು, ಸಂಘರ್ಷಗಳು ! ಅದೆಷ್ಟೇ ಪ್ರತಿಬಂಧಕಗಳಿರಲಿ, ಮಾನವೀಯ ಮೌಲ್ಯಗಳನ್ನು ಬದುಕಿ ಬಾಳುವ ಛಲ ಹೊತ್ತು ಸಾಗಿದ ಬಾಳ್ವೆ ಅದೆಷ್ಟು ಅರ್ಥಪೂರ್ಣ ಭಾವಪೂರ್ಣ! ಅನುಕಂಪದ ಆಮಿಷಕ್ಕೆಡಗದ ಆತ್ಮಪ್ರತ್ಯಯ ಆತ್ಮವಿಶ್ವಾಸಗಳ ಹೆಜ್ಜೆಗಳನ್ನಿಡುತ್ತ ಸಾಗಿದ ಆ ದಿನಗಳು ಅದೆಷ್ಟು ಚರಿತ್ರಾರ್ಹ !

ಹೃನ್ಮನಗಳ ಮಾನವೀಯ ಮಿಲನವೆಂಬಂತೆ ಬಾಳ ಸಂಗಾತಿ ಅನುಪಮಾರೊಂದಿಗಿನ ವಿವಾಹಕೂಡ ವೈಯಕ್ತಿಕ ನೆಲೆ ಮೀರಿ ಲೋಕಕ್ಕೆ ಬೆಳಕಾಗಿ ಮೂಡಿಬಂದದ್ದಾದರೂ ಅದೆಷ್ಟು ಹೃದಯಸ್ಪರ್ಶಿ !

ಬಾಳಿನುದ್ದಕ್ಕೂ ಅಂಶಾಂಶಿಕವಾಗಿ ಸತ್ಯವನ್ನು ಕಂಡುಕೊಳ್ಳುತ್ತ ಸಾಗಿದ ಉತ್ಕಂಠೆಯ ಅನುಭವ-ಅನುಭಾವಗಳ ಪಲುಕುಗಳು ಅದೆಷ್ಟು ಧ್ವನಿಪೂರ್ಣ !

Remarkable restless invincible creative spirit with seminal aesthetic sensibilities....

'ಮೃತ್ಯುಂಜಯ', 'ಚಿರಸ್ಮರಣೆ'—ನಿಜಕ್ಕೂ ನಿರಂಜನರ ಅದಮ್ಯ ಅವಿನಾಶಿ ಚೇತನಕ್ಕೆಷ್ಟು ಅನ್ವರ್ಥ!

— ಡಿ.ವಿ.ಕೆ.

ಮೈಸೂರು
ಅಕ್ಟೋಬರ್ 25, 2002

---

*ನೋಡಿ : ಪುಟ 237

*CHIRASMARANE* : A Novel in Kannda by Niranjana. Twelfth Edition 2013. Published by D.V.K. Murthy Prakashana, Opp. Sri Raghavendraswamy Matha, Krishnamurthipuram, Mysore-570 004.
☎ : 2331484

ಮೊದಲನೆಯ ಮುದ್ರಣ : ೧೯೫೫
ಎರಡನೆಯ ಮುದ್ರಣ : ೧೯೭೫
ಮೂರನೆಯ ಮುದ್ರಣ : ೧೯೮೧
ನಾಲ್ಕನೆಯ ಮುದ್ರಣ : ೧೯೮೩
ಐದನೆಯ ಮುದ್ರಣ : ೧೯೯೭
ಆರನೆಯ ಮುದ್ರಣ : ೨೦೦೧
ಏಳನೆಯ ಮುದ್ರಣ : ೨೦೦೨
ಎಂಟನೆಯ ಮುದ್ರಣ : ೨೦೦೩
ಒಂಭತ್ತನೆಯ ಮುದ್ರಣ : ೨೦೦೪
ಹತ್ತನೆಯ ಮುದ್ರಣ : ೨೦೦೫
ಹನ್ನೊಂದನೆಯ ಮುದ್ರಣ: ೨೦೧೧
ಹನ್ನೆರಡನೆಯ ಮುದ್ರಣ : ೨೦೧೩



ಪುಸ್ತಕದ ಆಕಾರ : 1/8 ಕ್ರೌನ್
ಬಳಸಿರುವ ಕಾಗದ : 11.2 ಡೆಲ್ಟಾ

ಬೆಲೆ : ರೂ. **80**

ವಿತರಕರು : ಮೆ॥ ಡಿ.ವಿ.ಕೆ.ಮೂರ್ತಿ
ನಂ.1498/1, ರಾಮಯ್ಯರ್ ರಸ್ತೆ, ಕೃಷ್ಣಮೂರ್ತಿಪುರಂ, ಮೈಸೂರು-570004
ದೂ : 0821-2331484 ಮೊ. : 9342121484

ಮುಖಚಿತ್ರ : ವೆಂಕಟೇಶ್

ಮುದ್ರಕರು : ಎ. ಜಿ. ಸುವ್ರತೀಂದ್ರ
ವಾಣೀ ಪ್ರೆಸ್, ಗೀತಾ ರಸ್ತೆ, ಚಾಮರಾಜಪುರಂ, ಮೈಸೂರು-೫೭೦ ೦೦೫
© : ೨೩೩೦೯೬೫, ೪೨೫೩೯೬೫ ದೂರಶ್ರಾವಣ : ೯೮೮೬೭ ೮೫೧೯೬೫

ಕಯ್ಯೂರು ರೈತರ ಪ್ರೀತಿಪಾತ್ರ ನಾಯಕರು

ಮಾಧವನ್

ಗಣಪತಿ ಕಾಮತ್

ವಿ.ವಿ.

ಇವರಿಗೆ ಅರ್ಪಣೆ

'ಚಿರಸ್ಮರಣೆ'ಯನ್ನು ನಾನು ಅರ್ಪಿಸಿರುವ ಮೂವರು ಮಹಾನುಭಾವರಲ್ಲಿ ಇಬ್ಬರು ಈಗ ಇಲ್ಲ. ಅವಿಭಾಜ್ಯ ಕಮ್ಯೂನಿಸ್ಟ್ ಪಕ್ಷದ ನಿಷ್ಠಾವಂತ ಕಾರ್ಯಕರ್ತ ಗಣಪತಿ ಕಾಮತ್ ನಡುವಯಸ್ಸಿನಲ್ಲೇ ತೀರಿಕೊಂಡರು. ಕೇರಳ ವಿಧಾನ ಸಭೆಯಲ್ಲಿ ಕಮ್ಯೂನಿಸ್ಟ್ (ಮಾರ್ಕ್ಸ್‌ವಾದಿ) ಸದಸ್ಯರಾಗಿದ್ದ ವಿ. ವಿ. ಕುಂಞಂಬುರವರೂ ಮುಪ್ಪಿಗೆ ಮುನ್ನವೇ ನಿಧನರಾದರು.

# ಮುನ್ನುಡಿ

೧

ಒಬ್ಬ ಹುಡುಗ, ಹೆಸರು ಶಿವ (ರಾಯ). ಕುಳುಕುಂದ ಎಂಬ ಕುಗ್ರಾಮದಲ್ಲಿ ಹುಟ್ಟಿ, ಕಾಪು ಎಂಬ ಪುಟ್ಟ ಊರಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸಿ, ಸುಳ್ಯದ ಹಯರ್ ಎಲಿಮೆಂಟರಿ ಶಾಲೆ ಸೇರಿದ—ಮುಂದಿನ ಶಿಕ್ಷಣಕ್ಕಾಗಿ. ಅಲ್ಲಿ ಅಕ್ಷರಗಳೊಡನೆ ಆಟವಾಡುವ ಚಟ ಅಂಟಿತು. ಮೈಸೂರಿನಿಂದ ಹೊರಟು ಮಡಿಕೇರಿಯನ್ನು ದಾಟಿ ಮಂಗಳೂರಿಗೆ ಹೋಗುವ ಹೆದ್ದಾರಿ ಸುಳ್ಯವನ್ನು ಸೀಳುತ್ತಿತ್ತು. ಒಮ್ಮೆ ಗಾಂಧೀ (ಮಹಾತ್ಮ) ಆ ದಾರಿಯಾಗಿ ಬಂದರು. ಅಲ್ಲಿನ, ಆಸುಪಾಸಿನ, ಸಹಸ್ರಾರು ಜನರನ್ನು ಕಾಡಿತು 'ಗಾಂಧೀ ಹುಚ್ಚು'. ಕಿರಿಯ ಶಿವನೂ ಅದಕ್ಕೆ ಹೊರತಾಗಲಿಲ್ಲ. ಆ ತನಕ ಪುಸ್ತಕಗಳಿಗೇ ಅಂಟಿಕೊಂಡಿದ್ದವನು ಅತ್ತಿತ್ತ ನೋಡತೊಡಗಿದ. ಶಾಲೆಯ ಮುಖ್ಯೋಪಾಧ್ಯಾಯ ರಾಮಪ್ಪಯ್ಯನವರು ಸ್ವಾತಂತ್ರ್ಯ ಹೋರಾಟದಿಂದ ಪ್ರಭಾವಿತರಾದವರು; ಕನ್ನಡದ ಪುನರುದಯಕ್ಕೆ ಮಾರುಹೋದವರು. ವೆಂಕಪ್ಪಯ್ಯ (ಭಟ್) ಮಾಸ್ತರು ಅಕ್ಷರಗಳಿಂದ ಆಕಾರ ಬಿಡಿಸಿದರು. ಬಿ. ಶಂಕರನಾರಾಯಣರಾಯರು ಆ ಆಕಾರಕ್ಕೆ ಉಸಿರು ತುಂಬಿದರು. ಮಹಾತ್ಮರ ಬಳಿಕ ಜವಾಹರರ ಆಗಮನ. ಗಾಂಧಿ-ನೆಹರೂ ಇಬ್ಬರೂ ಶಿವನಿಗೆ ಆತ್ಮೀಯರಾದರು. ರಾಜಕೀಯವೊ? ಸಾಹಿತ್ಯವೊ? ಹುಡುಗನಿಗೆ ಅವೆರಡೂ ಇಷ್ಟವಾದುವು. ಆ ವಾತಾವರಣದಲ್ಲಿ ದೇಶಪ್ರೇಮ ಸಾಹಿತ್ಯಪ್ರೇಮ ಬೇರೆಬೇರೆಯಾಗಿರಲಿಲ್ಲ.

"ಭಾರತ್ ಮಾತಾಕಿ—ಜೈ!" ಎಂದ ಶಿವ 1937ರಲ್ಲಿ ತನ್ನ ಮೊದಲ ಕಥೆಯನ್ನೂ ಬರೆದ. 1938ರ ಬೇಸಗೆಯಲ್ಲಿ ಸುಳ್ಯ ಶಾಲೆಯ ಎಂಟನೆಯ ತರಗತಿಯ (ದೊಡ್ಡ) ಪರೀಕ್ಷೆಗೆ ಕುಳಿತ. ಆ ಹೊತ್ತಿಗಾಗಲೇ ಅವನು ಅಚ್ಚಾಗಿದ್ದ ಹತ್ತು ಹನ್ನೆರಡು ಕಥೆಗಳ ಕರ್ತೃ.

ಪರೀಕ್ಷೆಯಲ್ಲಿ ಮೊದಲಿಗನಾದ. ತನ್ನ ರೆಕ್ಕೆ ಪುಕ್ಕ ಬಲಿಯಬೇಕು ಎಂಬ ಆಸೆ. ಅದಕ್ಕೆ ಓದಿನ ಹಾಲು ಬೇಕು. ಎಲ್ಲಿದೆ ಕಾಸು? "ಓದಿದ್ದು ಸಾಕು!" ಸುತ್ತುಮುತ್ತಲಿನವರ ಹಸು ಎಮ್ಮೆಗಳನ್ನು ಮೇಯಿಸಲು ಒಯ್ದು. ಒಳಗೆ ಕೊರಗು ಹೆಪ್ಪುಗಟ್ಟಿತು. ಅದನ್ನು ಕರಗಿಸಿ ಆತ ಮತ್ತೆ ಮುಗುಳುನಗುವಂತೆ ಮಾಡಿದವರು ರಾಮಪ್ಪಯ್ಯ ಮಾಸ್ತರು. ಅವರು ದಕ್ಷಿಣ ಕನ್ನಡದ ದಕ್ಷಿಣ ತುದಿಯಲ್ಲಿದ್ದ ನೀಲೇಶ್ವರದತ್ತ ಬೊಟ್ಟುಮಾಡಿದರು. ಒಳ್ಳೆಯ ಹೈಸ್ಕೂಲು.... ಖರ್ಚು ಕಮ್ಮಿ.

ಮೂರು ವರ್ಷಗಳ ವ್ಯಾಸಂಗಕ್ಕಾಗಿ ನೀಲೇಶ್ವರ ಸೇರಿದ ಹದಿಹರೆಯದ

ಬರಹಗಾರನಿಗೆ ಆ ಊರು ಇಷ್ಟವಾಯಿತು. ಬೋಧನ ಮಾಧ್ಯಮ ಇಂಗ್ಲಿಷ್, ಎರಡನೆಯ ಭಾಷೆ ಮಲಯಾಳಂ ಅಥವಾ ಕನ್ನಡ. ಕೇರಳೀಯರ ಆ ಊರು ಆಗ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇದ್ದುದರಿಂದ, ಹೈಸ್ಕೂಲಿನಲ್ಲಿ ಕನ್ನಡ ಕಲಿಸುತ್ತಿದ್ದರು. ಊರೂರುಗಳಿಂದ ಕನ್ನಡ ವಟುಗಳು ಅಲ್ಲಿಗೆ ಬರುತ್ತಿದ್ದುದು ಆ ಕಾರಣದಿಂದ. ರಾಜಕೀಯ ಪ್ರಜ್ಞೆಯ ವಿಷಯದಲ್ಲಿ ಮಲಯಾಳಿಗಳು ಕನ್ನಡಿಗರಿಗಿಂತ ಭಿನ್ನ. ಅವರ ಜತೆ ಓಡಾಡುತ್ತ ಶಿವರಾವ್ ಪ್ರಬುದ್ಧನಾದ. ಅವನು ಅಲ್ಲಿ ಮೊದಲ ಬಾರಿಗೆ ಕೇಳಿದ ಘೋಷ: 'ಇಂಕ್ವಿಲಾಬ್ ಜಿಂದಾಬಾದ್.' ಸಾಮ್ರಾಜ್ಯಶಾಹಿಗಿದಿರು, ಸ್ಥಳೀಯ ಶೋಷಕರಿಗಿದಿರು ರೈತರನ್ನೂ ಕಾರ್ಮಿಕರನ್ನೂ ವಿದ್ಯಾರ್ಥಿಗಳನ್ನೂ ಸಂಘಟಿಸುವುದು ಅವನಿಗೆ ಹೊಸದು. ಗಾಂಧೀಭ್ರಮೆ ನಿಧಾನವಾಗಿ ಕರಗಿತು. ಮುಂದಿದ್ದುದು ದ್ವಿಮುಖ ಹೋರಾಟ. ಬ್ರಿಟಿಷರ ಉಚ್ಚಾಟನೆಯೊಂದಿಗೆ ಸ್ವತಂತ್ರಭಾರತದಲ್ಲಿ ಸಮಾನತೆಯ ತಳಹದಿಯ ಮೇಲೆ ಹೊಸ ಸಮಾಜವನ್ನು ಸ್ಥಾಪಿಸುವ ಗುರಿ ಆಕರ್ಷಕವಾಗಿತ್ತು. ಗಾಂಧೀವಾದ, ನೆಹರೂವಾದಗಳಷ್ಟೇ ದೇಶೀಯವೆನಿಸಿದುವು ಮಾರ್ಕ್ಸ್‌ವಾದ, ಕಮ್ಯೂನಿಸಂ.

ನನ್ನ ಪ್ರಾಮಾಣಿಕತೆ, ವಾಕ್ಪಟುತ್ವ ಕ್ರಾಂತಿಕಾರಿಗಳ ಗಮನ ಸೆಳೆದಿರಬೇಕು. ಹಾಗೆಯೇ ತಮ್ಮ ಪ್ರಾಮಾಣಿಕತೆ, ನಿಸ್ಪೃಹತೆಗಳಿಂದ ನನಗೆ ಹತ್ತಿರವಾದವರು ಗಣಪತಿ ಕಾಮತ್ ಮತ್ತು ಅವರ ಮೂಲಕ ಕಾಞಂಗಾಡ್ ಮಾಧವನ್. ಮಾಧವನ್ ದ್ವಿಪಾತ್ರಧಾರಿ: ಪೋಲೀಸರ ಕಣ್ಣಿಗೆ ಮಣ್ಣೆರಚಲೆಂದು ಹಗಲು ಹಿಂದೀ ಮಾಸ್ತರು. ರಾತ್ರಿ ಗ್ರಾಮಾಂತರ ಪ್ರದೇಶದಲ್ಲಿ ಸುತ್ತಾಡಿ ರೈತರನ್ನು ಸಂಘಟಿಸುತ್ತಿದ್ದ ಸಂಗಾತಿ. ನನ್ನ ಗೌರವಕ್ಕೆ ಪಾತ್ರರಾದ ಮೂರನೆಯವರು ಕರಿವೆಳ್ಳೂರಿನ ಎ.ವಿ. ಕುಞಂಬು—ಅಧ್ಯಾಪಕ ವೃತ್ತಿಯನ್ನು ಬಿಟ್ಟು ಸ್ವಾತಂತ್ರ್ಯಯೋಧನಾದ ವ್ಯಕ್ತಿ. ಮುಂದೆ ಪರಿಚಯವಾದವರು ಸರಕಾರದ ಕಣ್ಣಿಗೆ ಬೀಳದೆ ತಿರುಗಾಡುತ್ತಿದ್ದ ಕೇರಳೀಯನ್ ಚಂದ್ರೋತ್, ನಾಯನಾರ್ ಮತ್ತಿತರರು.

ನೀಲೇಶ್ವರ ವಾಸ್ತವ್ಯದ ಕೊನೆಯ ವರ್ಷ ಬಂತು. 1941ರಲ್ಲಿ 'ದೊಡ್ಡ ಪರೀಕ್ಷೆ'ಗೆ ನಾನು ಅಣಿಯಾಗುತ್ತಿದ್ದಂತೆ, ಹತ್ತಿರದ ಕುಗ್ರಾಮ ಕಯ್ಯೂರಿನಲ್ಲಿ ಜನತೆಯ ಸತ್ವಪರೀಕ್ಷೆಗಾಗಿ ಅಗ್ನಿಕುಂಡ ಸಿದ್ಧವಾಗುತ್ತಿತ್ತು. ನೀಲೇಶ್ವರವನ್ನು ಹಗಲಿರುಳೂ ತಟ್ಟುತ್ತಿತ್ತು ಆ ಧಗೆ. ಕಯ್ಯೂರು ಒಮ್ಮೆಲೆ ಭುಗಿಲೆಂದಿತು. ಹೊಗೆಮೋಡ ಆಕಾಶವನ್ನು ಮುಸುಕಿತು.

ಹೊಗೆ ತುಂಬಿದಾಗ ಕಣ್ಣುಗಳು ಹನಿಯಾಡುತ್ತವೆ. ಆಗಲೇ ಒಂದು ನಿರ್ಧಾರಕ್ಕೆ ಬಂದಿದ್ದೆ. "ಇನ್ನು ಶಿಕ್ಷಣ ಸಾಕು. ನನ್ನ ಲೇಖನಿಯನ್ನು ಅವಲಂಬಿಸಿ ನಾನು

ಬದುಕಬೇಕು, ನನ್ನ ಬಾಳನ್ನು ರೂಪಿಸಬೇಕು." ನನ್ನ ಪರೀಕ್ಷೆಯ ಫಲಿತಾಂಶಕ್ಕಾಗಿ ಕಾಯಲಿಲ್ಲ. ಮಂಗಳೂರಿಗೆ ಹೊರಟುಬಿಟ್ಟೆ, ಪ್ರತಿಕೋದ್ಯೋಗಿಯಾಗಲು (ಮುಂದೆ ಬಿಂಕದ ಪ್ರಮಾಣಪತ್ರ ಬಂದಾಗ ಅದನ್ನು ದೃಢವಾಗಿ ನಿರಾಕರಿಸಿದೆ. ನಾನು ಹೀಗೆ ಮಾಡಿದೆನೆಂದು ಮುಖ್ಯೋಪಾಧ್ಯಾಯ ರಾಮಕೃಷ್ಣರಾಯರಿಗೆ ಬಹಳ ಬೇಸರವಾಯಿತಂತೆ. 'ವಿಚಿತ್ರ ಹುಡುಗ' ಎಂದು ಅರಿತಿದ್ದರೂ, ಪ್ರತಿಭಾವಂತ ಶಿಷ್ಯ ಎಂದು ನನ್ನ ಮೇಲೆ ಅವರಿಗೆ ವಾತ್ಸಲ್ಯವಿತ್ತು.*)

ಖಚಿತವಾಗಿ ಹೇಳಬಲ್ಲೆ: ಮಂಗಳೂರಿಗೆ ಹೊರಟ ನನ್ನ ಗಂಟುಗದಡಿಗಳಲ್ಲಿ ಕಯ್ಯೂರಿನ ಅಗ್ನಿಕುಂಡದ ಒಂದು ಕಿಡಿ ಇತ್ತು—ಆರದ ಕಿಡಿ.

ಹದಿಮೂರು ವರ್ಷಗಳ ಅನಂತರ 'ಚಿರಸ್ಮರಣೆ' ಕಾದಂಬರಿಯನ್ನು ಬರೆಯಲು ಅದು ಕಾರಣವಾಯಿತು.

೨

ನಾನು ಉದ್ಯೋಗಿಯಾದದ್ದು 'ರಾಷ್ಟ್ರಬಂಧು'ವಿನಲ್ಲಿ (ಖ್ಯಾತ ಸಾಹಿತಿ ಕಡೆಂಗೋಡ್ಲು ಶಂಕರಭಟ್ಟರ ಸಂಪಾದಕತ್ವ; ಪ್ರಸಿದ್ಧ ರಾಜಕಾರಣಿ ಕೆ. ಆರ್. ಆಚಾರ್ಯರ ಒಡೆತನ).

ಕಯ್ಯೂರು ಹೋರಾಟಕ್ಕೆ ಸಂಬಂಧಿಸಿದಂತೆ 60 ಜನರನ್ನು ಬಂಧಿಸಿ ಮಂಗಳೂರಿಗೆ ತಂದಿದ್ದರು ವಿಚಾರಣೆಗಾಗಿ. ನಾನು ಪತ್ರಕರ್ತ ಎಂದು ಜೈಲರು ಕಣ್ಣುಮಿಟುಕಿಸಿದರು. ಸೆರೆಮನೆಯಲ್ಲಿ ಆ ಕೈದಿಗಳನ್ನು ಭೇಟಿಯಾದೆ. ದೀರ್ಘ ವಿಚಾರಣೆಯ ವೇಳೆ ವರದಿಗಾರನಾಗಿ ಪ್ರತಿದಿನವೂ ಅವರ ಸಾಮಿಪ್ಯದ ಸವಿಯುಂಡೆ.

ಆ ವಿಚಾರಣೆ ಭಾರೀ ನಾಟಕ. ಅದರ ಭೀಕರತೆ ಸ್ಪಷ್ಟವಾದದ್ದು ನ್ಯಾಯಮೂರ್ತಿ ತೀರ್ಪು ನೀಡಿದ ದಿನ. ನಾಲ್ವರಿಗೆ ಮರಣದಂಡನೆ. ಒಟ್ಟು ಎರಡು ವರ್ಷ ಸಂದುವು ಅಪೀಲು ಇತ್ಯಾದಿ ಮುಗಿದಾಗ.

ಕಯ್ಯೂರಿನ ನಾಲ್ವರು ರೈತಮಕ್ಕಳು ಹುತಾತ್ಮರಾದುದಕ್ಕೆ ತುಸು ಮುನ್ನ ನಾನು ಕಯ್ಯೂರಿಗೆ ಹೋಗಿದ್ದೆ—ಜನತೆಯ ಸಮರದಲ್ಲಿ ದೇಶದ ನಾನಾ ಕಡೆ ಜೀವ ತೇದವರ ಜತೆ. ಒಂದು ವರ್ಷದ ಬಳಿಕ ಮತ್ತೊಮ್ಮೆ ಹೋದೆ, ಕಯ್ಯೂರು

---

*ಮುಂದೆ 1947ರ ಅಂತ್ಯದಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ಕಾಸರಗೋಡಿನಲ್ಲಿ ಜರಗಿದಾಗ ರಾಮಕೃಷ್ಣರಾಯರನ್ನು ಅಲ್ಲಿ ಕಂಡೆ. 23ಜವ್ವನಿಗೆ ಕುಳುಕುಂದ ಶಿವರಾಯನನ್ನು ('ಜನಶಕ್ತಿ'ಯ ಸಂಪಾದಕ) ಮಾಜಿ ಶಿಷ್ಯನನ್ನು ಪ್ರೀತಿಯಿಂದ ಅವರು ಮಾತನಾಡಿಸಿದರು. ನಾನು ಮುಟ್ಟದೇಹೋದ ಸರ್ಟಿಫಿಕೇಟಿನ ಬಗ್ಗೆ ಏನನ್ನೂ ಹೇಳಲಿಲ್ಲ!

ದಿನಾಚರಣೆಯಲ್ಲಿ ಭಾಗವಹಿಸಲು. ಈ ಎರಡು ಭೇಟಿಗಳ ವೇಳೆಯಲ್ಲೂ ನಾನಿದ್ದುದು ರಂಗದ ಮೇಲೆ. ಅದರೊಂದಿಗೆ, ವಿಶಿಷ್ಟವಾದ ಇನ್ನೊಂದು ಪಾತ್ರವೂ ಇತ್ತು. ಅದು ರಂಗದ ಮೇಲಿದ್ದಾಗಲೂ ಬರಹಗಾರನಾಗಿ ತುಸು ದೂರವಿರುವುದು, ನಡೆಯುತ್ತಿದ್ದುದನ್ನು ವಸ್ತುನಿಷ್ಠವಾಗಿ ಈಕ್ಷಿಸಿ ಅರ್ಥೈಸುವುದು, ಅದನ್ನೆಲ್ಲ ನನ್ನ ಆಳಕ್ಕೆ ಇಂಗಿಸಿಕೊಳ್ಳುವುದು....

ನಾನು ನೋಡನೋಡುತ್ತಿದ್ದಂತೆಯೇ ಕಯ್ಯೂರಿನ ಶೋಷಿತರು ಇತಿಹಾಸ ರಚಿಸಿದ್ದರು, ಕತೆಯಾಗಿದ್ದರು, ದಂತಕಥೆಯಾಗಿದ್ದರು....

ಕಯ್ಯೂರಿಗೆ ಭೇಟಿ ನೀಡಿದಾಗ ನಾನಿದ್ದುದು ರಂಗದ ಮೇಲೆ ಎಂದೆನಲ್ಲ? ಆ ಹೊತ್ತಿಗಾಗಲೇ ನಾನು ಕಮ್ಯೂನಿಸ್ಟ್ ಪಕ್ಷ ಸೇರಿದ್ದೆ. ಅದು ಭೂಗತ ಅವಸ್ಥೆಯಿಂದ ಹೊರಬಂದು ಬೆಳೆಯತೊಡಗಿದ್ದ ಪಕ್ಷ. ನನ್ನ ರಾಜಕೀಯಪ್ರಜ್ಞೆ ಪ್ರಖರಗೊಂಡ ರೀತಿಯ ಹಿನ್ನಲೆಯಲ್ಲಿ ಆ ಹೆಜ್ಜೆಯನ್ನು ನಾನಿಟ್ಟುದು ತರ್ಕಬದ್ಧವಾಗಿಯೇ ಇತ್ತು. ಅದು ಸಂಭವಿಸಿದ್ದು ಹೀಗೆ:

ಮಂಗಳೂರಿಗೂ ಮುಂಬಯಿಗೂ ಉದ್ಯೋಗದ ನಂಟು. ಆ ಮಹಾನಗರದ ಬಾಣಲೆಯಲ್ಲಿ ಕಮ್ಯೂನಿಸ್ಟರಾಗಿ ಅರಳಿದ 'ಕನ್ನಡಿಗರು' ಬಹಳ ಜನ. ಅವರಲ್ಲಿ ಪ್ರಮುಖರು: 1920ರ ದಶಕದಲ್ಲಿ ಎಸ್. ವಿ. ಘಾಟೆ; 1930ರ ದಶಕದಲ್ಲಿ ಎಂ. ಬಿ. ರಾವ್, ಉಪಾಧ್ಯಾಯ ಸೋದರರು ಮತ್ತು ಶಾಂತಾರಾಮ್ ಪೈ; 1940 ದಶಕದಲ್ಲಿ ತೋನ್ಸೆ ಸಂಜೀವ ಹೆಗ್ಡೆ.... ನಾಜಿ ಪಡೆಗಳು ಸೋವಿಯತ್ ಒಕ್ಕೂಟಕ್ಕೆ ನುಗ್ಗಿದ ಅನಂತರ ಭಾರತ ಕಮ್ಯೂನಿಸ್ಟ್ ಪಕ್ಷದ ಮೇಲಿನ ನಿಷೇಧವನ್ನು ಬ್ರಿಟಿಷ್ ಸರಕಾರ ಹಿಂತೆಗೆದುಕೊಂಡಿತು. ನೂರಾರು ಸೆರೆಮನೆಗಳಿಂದ ಸಹಸ್ರಾರು ಕಮ್ಯೂನಿಸ್ಟ್ ಮುಖಂಡರು ಹೊರಬಿದ್ದರು. ಅವರಲ್ಲಿ ಕರ್ನಾಟಕದಲ್ಲಿ ಪಕ್ಷವನ್ನು ಸಂಘಟಿಸಲು ನಿಯೋಜಿತರಾದವರು ಉಪಾಧ್ಯಾಯ ಸೋದರರು. ಅವರು ಮಂಗಳೂರಿಗೆ ಬಂದರು. ಮೊದಲು ಅಣ್ಣ, ಬಳಿಕ ತಮ್ಮ. ಆ ತನಕ ಅಲ್ಲಿ ಕಾರ್ಮಿಕಕ್ಷೇತ್ರದಲ್ಲಿ ದುಡಿಯುತ್ತಿದ್ದ ಸೋನ್ಸ್ ಮತ್ತಿತರರನ್ನು, ವಿದ್ಯಾರ್ಥಿರಂಗದ ಹರಿದಾಸ ಆಚಾರ್, ಶಿವಶಂಕರರಾವ್, ಕಕ್ಕಿಲ್ಲಾಯಾದಿ ಮುಖಂಡರನ್ನು ಕಂಡರು. ನನ್ನ ಮೇಲೂ ಕಣ್ಣುಹಾಯಿಸಿದರು. ನನ್ನ ಬಾಂಧವ್ಯ ಕಾಸರಗೋಡಿನ ದಕ್ಷಿಣಕ್ಕಿದ್ದ ಜನರ ಜತೆ. ಅವರಲ್ಲೊಬ್ಬರು—1930ರ ದಶಕದಲ್ಲಿ ಹೈಸ್ಕೂಲಿನ ಅಧ್ಯಾಪಕ ವೃತ್ತಿ ಬಿಟ್ಟು 'ಕ್ರಾಂತಿಯಾರಿ'ಯಾದ ಸಿ. ಎಂ. ಕುಂಞರಾಮನ್ ನಾಯರ್—ಮಂಗಳೂರಿನಲ್ಲಿ ಒಂದು ಮುದ್ರಣಾಲಯ ಇಟ್ಟುಕೊಂಡಿದ್ದರು. ಅವರು ನನ್ನ ಹಿರಿಯ ಗೆಳೆಯರಾದರು. ಒಟ್ಟು ಪರಿಣಾಮ—ನಾನು ಪಕ್ಷದ ಸದಸ್ಯನಾದದ್ದು.

1945 ರಲ್ಲಿ ಬೆಂಗಳೂರಿಗೆ ಬಂದು 'ಪ್ರಜಾಮತ' ದ ಸಹಾಯಕ ಸಂಪಾದಕನಾದೆ. 1946ರಲ್ಲಿ ಹುಬ್ಬಳ್ಳಿ ಸೇರಿದೆ. ಕನ್ನಡ ಮುಖಪತ್ರ ಆರಂಭಿಸಲು ಪಕ್ಷ ಯೋಚಿಸಿತ್ತು. ಹಣವಿರಲಿಲ್ಲವೆಂದು ಯೋಜನೆ ಮುಂದೆ ಬಿತ್ತು. ಇದ್ದುದರಲ್ಲೇ ಜನತಾ ಸಾಹಿತ್ಯ ಎಂಬ ಪ್ರಕಾಶನ ಸಂಸ್ಥೆ ರೂಪಿಸಿ ಸಾಮಯಿಕವೆನಿಸುವ ಇಪ್ಪತ್ತೇಳು ಪುಸ್ತಿಕೆಗಳನ್ನು ಹೊರತಂದೆವು. 1947ರ ಮೇ ದಿನದಿಂದ 'ಜನಶಕ್ತಿ' ಸಾಪ್ತಾಹಿಕದ ಪ್ರಸಾರ ಸಂಭ್ರಮ. (ಅದರಲ್ಲಿದ್ದ ಒಂದು ಅಂಕಣ—'ಸಂಗಾತಿ ಸಂಚಯ.' ಅದರಲ್ಲಿನ ಮೂರು ಅಂಕಣಗಳ ಬರವಣಿಗೆ ಆಕ್ಷೇಪಾರ್ಹವೆಂದು ಮೊರಾರ್ಜಿ ಗೃಹಮಂತ್ರಿಯಾಗಿದ್ದ ಮುಂಬಯಿ ಸರಕಾರ ನನ್ನನ್ನು ಮುಂಬಯಿಗೆ ಕರೆಯಿತು. 'ಪರಿಣಾಮ ಅನುಭವಿಸಲು ಸಿದ್ಧನಾಗು' ಎಂದಿತು) ದಮನಕಾಂಡ ಆರಂಭವಾದಾಗ ಭೂಗತನಾಗಿ ಪತ್ರಿಕೆ ನಡೆಸಿದೆ. ಸರಕಾರ ಪತ್ರಿಕೆಯನ್ನು ನಿಷೇಧಿಸಿತು. ಭೂಗತ ಬದುಕನ್ನು ಮುಂದುವರಿಸಿ, ಪಕ್ಷ ನಿರ್ಧರಿಸಿದ್ದ ಕ್ರಾಂತಿಕಾರಿ ಚಟುವಟಿಕೆಗಳಲ್ಲಿ ನಿರತನಾದೆ. ಐದು ವರ್ಷ ಸಾಮಾನ್ಯ ಸದಸ್ಯತ್ವ, ಮೂರು ವರ್ಷಗಳ ಭೂಗತ ಜೀವನವೂ ಸೇರಿ ಐದು ವರ್ಷ ಸಕ್ರಿಯ ಸದಸ್ಯತ್ವ—ಹೀಗೆ ಹತ್ತು ವರ್ಷ ಉರುಳಿದ್ದುವು.

ಕಮ್ಯೂನಿಸ್ಟ್ ಪಕ್ಷ ತನ್ನ ಧೋರಣೆಯನ್ನು ಮತ್ತೊಮ್ಮೆ ಬದಲಿಸಿ, ಸರಕಾರದೊಡನೆ ಹೊಸ ಆಟ ಆಡಲು ಒಪ್ಪಿತು. ಅದಕ್ಕೆ ಹಿನ್ನೆಲೆಯಾಗಿ ನಡೆದಿತ್ತು ಒಂದು ಸೈದ್ಧಾಂತಿಕ ತಾಕಲಾಟ. ಇದರಲ್ಲಿ ಉರಿದು ಹೋಗುತ್ತಿದ್ದೇನೆ ಎನಿಸಿದಾಗ, ನಾನು ಪಕ್ಷದಿಂದ ಬೇರೆಯಾದೆ. ಮಾಜಿ ಸಂಗಾತಿಗಳು ಸಾರ್ವತ್ರಿಕ ಚುನಾವಣೆಗೆ ಅಣಿಯಾಗುತ್ತಿದ್ದಂತೆ, ನಾನು ಒಂಟಿ ಜೀವನದ ಹೊಸ ಅಧ್ಯಾಯ ಬರೆಯತೊಡಗಿದೆ. (ಹಳೆಯ ದಾಖಲೆಗಳೊಡನೆ ಪೊಲೀಸರು ಬಂದರು. ಬಂಧಿಸಿ 'ಹಾತ್ ಬೇಡಿ' ತೊಡಿಸಿದರು. ಇಲ್ಲಿ ಅಲ್ಲಿ ಲಾಕಪ್ಪುಗಳಲ್ಲಿರಿಸಿ, ನ್ಯಾಯಸ್ಥಾನದ ಕಟ್ಟೆ ಹತ್ತಿಸಿದರು. ವಿಚಾರಣೆಯನ್ನು ಸುದೀರ್ಘಗೊಳಿಸಿ ಸಾಕಷ್ಟು ಹಿಂಸೆ ನೀಡಿದ ಬಳಿಕ, ಒಂದಿಷ್ಟು ದಂಡ ವಸೂಲಿ ಮಾಡಿ ನನ್ನ ರಟ್ಟೆಯನ್ನು ಬಿಟ್ಟರು.)

ಅಂತೂ ಕೊನೆಗೊಮ್ಮೆ, ಹಲವು ಚಟುವಟಿಕೆಗಳ ಕುಂಟಕುಂದ ಶಿವರಾಯ ಸಾಹಿತಿ ನಿರಂಜನನಾದ.

ಕನ್ನಡ ಸಾಹಿತ್ಯದ ದೊಡ್ಡಕೆರೆಯಲ್ಲಿ ಕಾದಂಬರಿಯ ತೆಪ್ಪೋತ್ಸವ ನಡೆದಿತ್ತು. ಬರಿಗೈಯವನು ಆ ಸಂತೆಗೆ ಹೋದೆ. ನನ್ನಲ್ಲಿದ್ದುದು ವಿಶಿಷ್ಟವೆನ್ನಬಹುದಾದ ದಟ್ಟ ಅನುಭವದ ಬಂಡವಾಳ ಮಾತ್ರ. ಕಾದಂಬರಿಯ ಕಾಣಿಕೆಯೊಡನೆ ವಾಚಕಲೋಕದ ಬಳಿಸಾರಲು ಮುಂದಾದೆ.

'ವಿಮೋಚನೆ'ಯಿಂದ ಮೊದಲುಗೊಂಡ ನನ್ನ ಕಾದಂಬರಿ ರಚನೆ 'ಬನಶಂಕರಿ' 'ರಂಗಮ್ಮನ ವಠಾರ'ಗಳಲ್ಲಿ ಕಲಾವಂತಿಕೆಯ ಒಂದು ಹಂತವನ್ನು ಮುಟ್ಟಿತು. ಅದು ಶೀಘ್ರಪ್ರಯಣ. ಹಣಕಾಸಿನ ಗಳಿಕೆ ಅಷ್ಟಕ್ಕಷ್ಟೇ ಇದ್ದರೂ ಓದುಗರ ಒಲವನ್ನು ಹೇರಳವಾಗಿ ಸಂಪಾದಿಸಿದ್ದೆ.

ಒಂದು ವಸ್ತು ಒಳಗಿನಿಂದ ನನ್ನನ್ನು ಕುಟುಕುತ್ತಲೇ ಇತ್ತು. ಕಯ್ಯೂರು ರೈತರ ಸಾವು ಬದುಕಿನ ಹೋರಾಟ. ಕೆಲ ಗೆಳೆಯರೊಡನೆ ಆ ವಿಷಯ ಹೇಳಿಯೂ ಇದ್ದೆ. ಐದಾರು ಕಾದಂಬರಿಗಳನ್ನು ಬರೆದು 'ಪ್ರಸಿದ್ಧ'ನಾಗಿದ್ದೆನಲ್ಲ? ಕಯ್ಯೂರಿನ ಕಥೆಯನ್ನು ಬರೆಯಲು ಇದು ಸಕಾಲ ಎನಿಸಿತು. "ಬರೆದುಬಿಡಿ" ಎಂದರು, ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್‌ನ ಜಿ. ಎಚ್. ರಾಮರಾಯರು (ಪ್ರಗತಿಪರ ಕಾರ್ಯಕ್ರಮಗಳಿಗೆ ಮೊದಲಿನಿಂದಲೂ ಅವರು ಆಸರೆ). ಪ್ರಕಾಶಕರಾಗಲು ಮೈಸೂರಿನ ಭಾರತೀ ಪ್ರಕಾಶನದ ಬಿ. ನರಸಿಂಗರಾಯರು ಮುಂದೆ ಬಂದರು.

ಆಗ (1957) ನಾನು ವಾಸವಾಗಿದ್ದುದು ಬೆಂಗಳೂರಿನ ವಿಲ್ಸನ್ ಗಾರ್ಡನಿನಲ್ಲಿ. 'ವೈವಾಹಿಕ ಬಂಧನ'ಕ್ಕೆ ಇನ್ನೂ ಒಳಗಾಗಿರಲಿಲ್ಲ. ಬರೆಯತೊಡಗಿದೆ. ಹದಿನೆಂಟನೆಯ ದಿನ 'ಚಿರಸ್ಮರಣೆ ಮುಗಿಯಿತು.

೨

'ಚಿರಸ್ಮರಣೆ' ಒಂದು ಕಾದಂಬರಿ. ಚರಿತ್ರೆಯಲ್ಲ. ಈ ಕೃತಿಯಲ್ಲಿ ನಾನು ಮಾಡಿರುವುದು, ಕಯ್ಯೂರಿನ ಹೋರಾಟದ ಅಂತಸ್ಸತ್ವವನ್ನು—ಆ ಕಾಲಾವಧಿಯ ಚೇತನವನ್ನು—ಕಲೆಯನ್ನು ಸೆರೆಹಿಡಿಯುವ ಯತ್ನ.

'ಚಿರಸ್ಮರಣೆ'ಯ ಅನೇಕ ಪಾತ್ರಗಳು ನಿಜಜೀವನದಿಂದಲೇ ಕಾದಂಬರಿಯ ಪುಟಗಳಿಗೆ ನಡೆದುಬಂದಿವೆ. ಆದರೆ ಇಲ್ಲಿನ ಪಾತ್ರನಿರ್ವಹಣೆಗಾಗಿ ರಂಗಸಜ್ಜಿಕೆಯ ವೇಷಭೂಷಣಗಳನ್ನು ಅವು ನಿರಾಕರಿಸಿಲ್ಲ. ಇನ್ನು ಕೆಲಪಾತ್ರಗಳನ್ನು ನಾನು ಕಡೆದದ್ದು ನನ್ನ ಕಲ್ಪನೆಯ ಮೂಸೆಯಲ್ಲಿ.

ರಚಿತವಾಗಿ ಇಪ್ಪತ್ತು ವರ್ಷಗಳಾದಮೇಲೆ 'ಚಿರಸ್ಮರಣೆ' ಮಲಯಾಳಂ ಭಾಷೆಯಲ್ಲಿ ಮರುಹುಟ್ಟು ಪಡೆಯಿತು. ಕೇರಳದಲ್ಲಿ ಅದಕ್ಕೆ ದೊರೆತ ಸ್ವಾಗತದ ವಿವರ ತಿಳಿದಾಗ 'ಧನ್ಯನಾದೆ' ಎನಿಸಿತು. ಸ್ವಲ್ಪ ಸಮಯದ ಅನಂತರ ಕನ್ನಡದಲ್ಲಿ ಎರಡನೆಯ ಮುದ್ರಣ ಬಂತು. ಮುಂದೆ ತಮಿಳು, ತೆಲುಗು, ಮರಾಠಿ, ಬಂಗಾಳಿ, ತುಳು ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಅನುವಾದಗಳು ಬರತೊಡಗಿದುವು.

ಚಿತ್ರೀಕರಣದ ಹಕ್ಕು ಪಡೆಯಲು ಬಂದವರು ಪ್ರಶ್ನೆ ಕೇಳಿದರು:

"ನಿಮ್ಮ ಕಾದಂಬರಿಯ ನಂಬೂದಿರಿ-ನಂಬಿಯಾರ್ ಯಾರು?"

ಉತ್ತರ : "ಪಾಳೆಗಾರಿಕೆಯ ಪ್ರತಿನಿಧಿಗಳು."

ಪ್ರಶ್ನೆ: "ದೇವಕಿ ಎಲ್ಲಿದ್ದಾಳೆ?"

ಉತ್ತರ : "ನನ್ನ ಕಾದಂಬರಿಯಲ್ಲಿ."

ಪ್ರಶ್ನೆ : "ಕಣ್ಣ...."

ಉತ್ತರ: " ಜನತೆಯ ಚಳವಳಿಯಲ್ಲಿ ಸಿರಿಕಂಠದ ಹಾಡುಗಾರ ಇರಲೇಬೇಕು, ಅಲ್ಲ?"

ಸಾಕ್ಷ್ಯಚಿತ್ರವೊ? ಕಥಾ ಚಿತ್ರವೊ?

ಚರಿತ್ರೆಯೊ? ಕಾದಂಬರಿಯೊ?

ಅವರು ಗೊಂದಲಕ್ಕೀಡಾಗಿದ್ದರು. ನಾನು ತಲೆಕೆಡಿಸಿಕೊಳ್ಳಲಿಲ್ಲ.

1925ರಲ್ಲಿ ಸೋವಿಯತ್ ಚಲಚ್ಚಿತ್ರ ನಿರ್ದೇಶಕ ಐಸೆನ್‌ಸ್ಟೀನ್ 'ಯುದ್ಧ ನೌಕೆ ಪೊಟೆಮ್‌ಕಿನ್' ಎಂಬ ಕಥಾಚಿತ್ರವನ್ನು ನಿರ್ಮಿಸಿದರು. ಅದು ಅಪಾರ ಮೆಚ್ಚುಗೆ ಗಳಿಸಿತು. ಆದರೆ ನಿಂದಕರೂ ಕೆಲವರಿದ್ದರು. ಅವರೆಂದರು: "ಇದು ಇತಿಹಾಸದ ಯಥಾವತ್ ಚಿತ್ರಣವಲ್ಲ."

ಆ 'ಟೀಕೆ'ಗೆ ಉತ್ತರವಾಯಿತು, ಅದಕ್ಕೂ 150 ವರ್ಷ ಹಿಂದೆ ಜರ್ಮನ್ ಮಹಾಕವಿ ಗಯಟೆ ಹೇಳಿದ್ದ ಒಂದು ಮಾತು: 'ಸಮ್ಯಕ್ ಸತ್ಯದ ದರ್ಶನಕ್ಕಾಗಿ ಸಣ್ಣಪುಟ್ಟ ಸತ್ಯಾಂಶಗಳು ಅಮುಖ್ಯವಾಗುತ್ತವೆ.' ಅದೇ ಮಾತನ್ನು 'ಚಿರಸ್ಮರಣೆ' ಕಾದಂಬರಿಗೆ ಸಂಬಂಧಿಸಿ ನಾನು ಆಡಿದರೆ ತಪ್ಪಾದೀತೆ?

## ಆಭಾರ ಮನ್ನಣೆ

### ನಾಲ್ಕನೆಯ ಮುದ್ರಣ

'ಚಿರಸ್ಮರಣೆ'ಯ ಎರಡನೆಯ ಮತ್ತು ಮೂರನೆಯ ಆವೃತ್ತಿಗಳನ್ನು ಹೊರತಂದವರು ಬೆಂಗಳೂರಿನ ನವಕರ್ನಾಟಕ ಪ್ರಕಾಶನದವರು. ಈಗ ನಾಲ್ಕನೆಯ ಜನಪ್ರಿಯ ಆವೃತ್ತಿಯಾಗಿ 'ಚಿರಸ್ಮರಣೆ'ಯನ್ನು ಮೈಸೂರಿನ ಸನ್ಮಿತ್ರ ಶ್ರೀ ಡಿ.ವಿ.ಕೆ. ಮೂರ್ತಿಯವರು ಪ್ರಕಟಿಸುತ್ತಿದ್ದಾರೆ. ಹೀಗೆ ಚತುರ್ಥ ಮುದ್ರಣವನ್ನು ಹೊರತರುತ್ತಿರುವ ಅವರಿಗೆ ಕರ್ತೃವಾದ ನಾನೂ ಕೃತಿಯ ಜಂಟಿ ಒಡತಿಯರಾದ ತೇಜಸ್ವಿನಿ-ಸೀಮಂತಿನಿಯರೂ ಕೃತಜ್ಞರಾಗಿದ್ದೇವೆ. ಈ ಆವೃತ್ತಿಗೆ ಮುಖಚಿತ್ರ

ರಚಿಸಿಕೊಟ್ಟಿರುವ ಕಲಾವಿದ ವೆಂಕಟೇಶ್ ಅವರಿಗೂ ಮುದ್ರಣ ನಿರ್ವಹಿಸಿರುವ ವಾಣೀ ಪ್ರೆಸ್‌ನ ಶ್ರೀ ಎ. ಜಿ. ಸುವ್ರತೀಂದ್ರ ಅವರಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

25 ಆಗಸ್ಟ್ 1983 ನಿರಂಜನ
ಬೆಂಗಳೂರು

# ಮೊದಲ ಅಧ್ಯಾಯಕ್ಕೆ ಮುನ್ನ

ಬೆಂಗಳೂರಿನಿಂದ ಮಂಗಳೂರಿಗೆ ಮಂಗಳೂರಿನಿಂದ ಚೆರ್ವತ್ತೂರಿಗೆ....

ಬನ್ನಿ. ರೈಲುಗಾಡಿ ಇಲ್ಲಿಂದ ಹೊರಡುವುದು ಇನ್ನೂ ತಡ. ಊರು ಇರುವುದು ಆ ಭಾಗದಲ್ಲಿ. ಹಿಂದಕ್ಕೆ ಸಾಗಿ, ರೈಲುಕಂಬಿಯನ್ನು ದಾಟಿ, ಹೊರಟುಹೋಗೋಣ. ಇಷ್ಟು ಜನ ಯಾಕೆ ಬರಬೇಕಿತ್ತು ಎಂದಿರಾ? ಒಳ್ಳೆ ಪ್ರಶ್ನೆ! ಈ ದಿನದ ಮಹೋತ್ಸವಕ್ಕೆ ಇಷ್ಟೊಂದು ದೂರದಿಂದ ಬಂದ ಪ್ರೇಕ್ಷಕರನ್ನು ಸರಿಯಾಗಿ ನೋಡಿಕೊಳ್ಳದೇ ಇದ್ದರೆ ಊರವರು ಏನೆಂದಾರು?

ಯಾಕೆ ಅತ್ತ ನೋಡ್ತಿದ್ದೀರಿ? ಟಿಕೆಟ್ ಕಲೆಕ್ಟರು ಕರೆಯಬಹುದೆಂದೆ? ಇಲ್ಲಿ ಕೊಡಿ ಟಿಕೆಟ್. ಆತನಿಗೆ ಕಳುಹಿಸಿಕೊಡ್ತೇವೆ. ಅವನಾಗಿ ನಮ್ಮನ್ನೆಂದೂ ಕರೆಯಲಾರ. ಇಲ್ಲಿ ಇಳಿದು ನಮ್ಮ ಹಳ್ಳಿಗೆ ಹೋಗುವವರಲ್ಲಿ ಮೋಸಗಾರರು ಯಾರೂ ಇಲ್ಲ ಎಂಬುದು ಆತನಿಗೆ ಗೊತ್ತಿದೆ.

ಎಚ್ಚರದಿಂದ ದಾಟಿ, ಕೈಕಂಬದ ಸಾಲು ತಂತಿ ಕೆಳಗಿದೆ. ಎಡವಿ ಬಿದ್ದೀರಿ.

ಬನ್ನಿ ಹೀಗೆ. ನಿಂತು, ರೈಲುಗಾಡಿಯತ್ತ ಯಾಕೆ ದಿಟ್ಟಿಸಿದಿರಿ? ಅದೊಂದು ವಿಚಿತ್ರ ಅನುಭವ, ಅಲ್ಲ? ಸಹಸ್ರ ಸಹಸ್ರ ಜನರನ್ನು ಹೊತ್ತು, ನಿಮ್ಮೊಬ್ಬರನ್ನೇ ಇಳಿಯಬಿಟ್ಟು, ಮುಂದೆ ಸಾಗುವ ಉಗಿ ಶಕಟ. ಸಮುದ್ರದಂಡೆಯುದ್ದಕ್ಕೂ ದಕ್ಷಿಣಾಭಿಮುಖವಾಗಿ, ಮುಂದಕ್ಕೆ.

ಹೊಲಗಳ ನಡುವೆ ನಡೆದೇ ನಿಮಗೆ ಅಭ್ಯಾಸವಿದೆಯೊ ಇಲ್ಲವೊ. ಏನಂದಿರಿ? ನೀವೂ ಹಳ್ಳಿಯಲ್ಲೆ ಹುಟ್ಟಿದವರೆಂದೆ? ಮಣ್ಣಿನ ಮಗುವೆಂದೆ? ಸಂತೋಷ. ನಾನೂ ಹಾಗೆಯೇ ಊಹಿಸಿದ್ದೆ.

ಈ ಹೊಲದ ಅಂಚುಗಳ ಮೇಲೆ ಒಬ್ಬೊಬ್ಬರೇ ನಡೆಯಬೇಕು. ಒಬ್ಬರ ಹಿಂದೊಬ್ಬರು, ಸಾಲುಸಾಲಾಗಿ. ಮುಂದಿನವರು ನಿಂತರೆ ಹಿಂದಿನವರೂ ನಿಲ್ಲಬೇಕು. ನಗರದಲ್ಲಿ ಮೋಟಾರು ವಾಹನಗಳು ಒಂದರ ಹಿಂದೊಂದು ಹೋಗುವುದಿಲ್ಲವೇ? ಹಾಗೆ.

ಬಿಸಿಲು ರಣಗುಡುತ್ತಿದ್ದರೂ ವಿಶಾಲವಾದ ಭೂಮಿ ಹಸುರಾಗಿದೆ, ನೋಡಿದಿರಾ? ಇದಕ್ಕೆ ಕಾರಣ ನದಿ. ಅದೋ, ದೂರದಲ್ಲಿ ಹರಿಯುತ್ತಿದೆಯಲ್ಲ, ಕಂಡೂ ಕಾಣಿಸದ ಹಾಗೆ? ತೇಜಸ್ವಿನಿ. ಹೆಸರು ಚೆನ್ನಾಗಿದೆ, ಎಂದಿರಾ? ಇಲ್ಲದೆ! ನಾಮಕರಣ ಮಾಡಿದವರು ನಮ್ಮ ಜನ.

ಈ ದಿನ ಹೊಲಗಳಲ್ಲಿ ಯಾರೂ ಇಲ್ಲವೆಂದು ಬೆರಗಾದಿರೇನು? ಸಂತೋ
ಸಂಭ್ರಮದ ಈ ದಿವಸ ಯಾರು ದುಡಿದಾರು ಹೇಳಿ? ನೇಗಿಲುಗಳು ನಿದ್ರಿಸುತ್ತಿ
ಹೋರಿಗಳು ಮೇವು ತಿಂದು ಮೆಲುಕುಹಾಕುತ್ತ ಮಲಗಿವೆ. ಮಕ್ಕಳು ಮುದುಕ
ಗಂಡಸರು ಎಲ್ಲರೂ ಉತ್ಸವದ ಕೆಲಸ ಕಾರ್ಯಗಳಲ್ಲಿ ಮಗ್ನರಾಗಿದ್ದಾರೆ.

ಆ ಕಾಲುಹಾದಿ ಕಂಡಿರಾ? ಅದರಾಚೆಗಿರುವುದೇ ನಮ್ಮ ಗ್ರಾಮ. ಅ
ಕಯ್ಯೂರು. ಕಯ್ಯೂರಿನ ಗಡಿ ಮೊದಲಾಗುವಲ್ಲೇ ಮಾವಿನತಳಿರಿನ ಕಮಾ
ಕಟ್ಟಿ, 'ಸುಸ್ವಾಗತ' ಎಂದು ಬರೆದಿದ್ದಾರೆ. ಇದು ಮಲೆಯಾಳ ಭಾಷೆ. ನಿಮ
ತಿಳಿಯದು, ಅಲ್ಲವೆ? ಆ ಕಮಾನಿನ ಮೇಲೆ ಅಲಂಕಾರವಾಗಿ ನಿಂತಿರುವ ದೊ
ಕುಡುಗೋಲು; ಅದಕ್ಕೆ ಅಡ್ಡವಾಗಿ ಭತ್ತದ ತೆನೆಯ ತುಂಬಿದ ಗೊಂಚಲು. ಇ
ಇಲ್ಲಿಂದ ಮೊದಲಾಗಿ ನೀವು ನೋಡುವುದೆಲ್ಲ, ಕಯ್ಯೂರಿನ ಕಲಾವಿದರ ಕ
ಕೌಶಲ. ಆ ಚೀಲ ಕೊಡಿ. ಕೈ ಬೀಸಿ ನಡೆಯುವಿರಂತೆ....

....ಅಳತೆಗೋಲಿನ ಅಂದಾಜಿನಂತೆ ಈ ದೂರ ಮೂರು ಮೈಲಿ. ಆದ
ದೂರವೆನ್ನುವ ಅನುಭವವಾಗದೆಯೇ ನಾವು ನಡೆದು ಬರುತ್ತಿದ್ದೇವಲ್ಲವೇ?

ಸಿಂಗರಿಸಿದ ಆ ಹೊಲ ನೋಡಿದಿರಾ? ಅದು ಸಂಘದ್ದು. ಅರ್ಥವಾಯ್ತ
ಅದು ಸಂಘದ ಆಸ್ತಿ, ಹಳ್ಳಿಯ ರೈತರೆಲ್ಲ ಅಲ್ಲಿ ಉಚಿತವಾಗಿ ದುಡಿಯುತ್ತಾ
ಆ ಹೊಲದ ಉತ್ಪತ್ತಿ ಸಂಘದ ಸಂಪತ್ತು.

ಯಾವುದು ಈ ಸದ್ದು ಎಂದಿರಾ? ಹೊಲದಿಂದ ಹೊಲಕ್ಕೆ ಹರಿಯುವ ನೀ
ಜುಳು ಜುಳು ನಿನಾದ.... ಅದಲ್ಲವೆಂದಿರಾ? ಓ, ತಿಳಿಯಿತು!

ಕಾಡು ಗುಡ್ಡ ದಾಟಿ ಒಂದು ಊರು ಸೇರಿದ ಹಾಗೆ; ನಗರದ ನಡುವೆ ಸ
ಬೀದಿಯನ್ನು ಸಮೀಪಿಸಿದ ಹಾಗೆ. ಈ ಹಳ್ಳಿಯಲ್ಲಿ ಇಷ್ಟೊಂದು ಜನವೇ—ಎಂ
ಆಶ್ಚರ್ಯವಾಯ್ತೆ? ಗುಜುಗುಜು ಎಂದು ಸಹಸ್ರಕಂಠಗಳಿಂದ ಸಹಸ್ರ ಮಾತುಗ
ಹೊರಟು ಒಂದೇ ಸ್ವರವಾಗಿ ಆಕಾಶಕ್ಕೇರುವ ಘಟನೆ. ಇಂತಹ ಜಾಗದ ಬಳಿ
ಬರುತ್ತ, ಏಕಾಂಗಿಯಾದ ಮನುಷ್ಯ ಒಮ್ಮೊಮ್ಮೆ ಮೂಕನಾಗುತ್ತಾನಲ್ಲವ
ಒಬ್ಬರಿಂದೊಬ್ಬರು ಭಿನ್ನರಾದ ಸಹಸ್ರ ಸಹಸ್ರ ಜನ. ಆದರೆ ಬದುಕಿನತ್ತ ನಡೆ
ಬರುವ ಒಂಟಿಜೀವದ ಪಾಲಿಗೆ ಕಾಣಿಸುವುದು ಭಿನ್ನತೆಯಲ್ಲ, ಐಕ್ಯ.

ನಿಮ್ಮ ಊಹೆ ನಿಜ. ಇವರೆಲ್ಲ ಉತ್ಸವಕ್ಕಾಗಿ ಸುತ್ತಮುತ್ತಲಿನ ಹತ್ತಾ
ಹಳ್ಳಿಗಳಿಂದ ಬಂದಿರುವ ರೈತಾಬಾಂಧವರು. ನಮ್ಮ ಅತಿಥಿಗಳು. ನಮ್ಮೂರ
ಜನಸಂಖ್ಯೆ ಎರಡು ಸಾವಿರ. ಆದರೆ ಈ ದಿನ ಹತ್ತು ಸಾವಿರ ಮುಖಗಳನ್ನಾದರ
ನೀವು ಕಾಣುವಿರಿ. ಅದೋ, ನದಿಯ ಆಚೆ ದಡ ಕಾಣಿಸುತ್ತಿದೆಯೇನು? ಅ

ಜನರನ್ನು ಹೊತ್ತು ತಂದ ಎತ್ತಿನ ಗಾಡಿಗಳು ಸಾಲುಸಾಲಾಗಿ ಬೀಡು ಬಿಟ್ಟಿವೆ. ಮೇಲಿನಿಂದ ದೋಣಿಗಳಲ್ಲೇ ತೇಲಿ ಬಂದವರು ಅದೆಷ್ಟೋ ಜನ. ನಮ್ಮ ಹಳ್ಳಿಗೆ ಈ ನದಿಯೇ ಒಂದು ಬದಿ. ಇನ್ನೊಂದು, ನಾವು ನಡೆದು ಬರುತ್ತಿರುವ ಬಯಲು. ಉಳಿದೆರಡು ಕಡೆಗಳಲ್ಲೂ ಕೆಲವು ಮೈಲುಗಳ ವಿಸ್ತಾರಕ್ಕೆ ಹರಡಿರುವ ಕಡಿದಾದ ಬೆಟ್ಟ, ದಟ್ಟಡವಿ. ಆ ಹಾದಿಯಲ್ಲೂ ಕಲ್ಲು ಮುಳ್ಳು ತುಳಿದು ಜನ ಈ ದಿನ ಬಂದಿದ್ದಾರೆ. ಇನ್ನಷ್ಟು ಜನ ನಡುರಾತ್ರಿಯವರೆಗೂ ಬರುತ್ತಲೇ ಇರುತ್ತಾರೆ.

ಈ ಹೆಸರುಗಳನ್ನೆಲ್ಲ ನೀವು ಬಲ್ಲಿರಿ, ಅಲ್ಲವೆ? ಮಠದ ಅಪ್ಪು, ಕೋಯಿ ತಟ್ಟಿನ ಚಿರುಕಂಡ, ಪೊಡವರ ಕುಂಇಂಬು, ಅಬೂಬಕರ್.... ಹಿಂದೆ ಹಸುಗೂಸುಗಳಿಗೆ ತಾಯಿ ತಂದೆಯರು ಹಾಗೆ ಹೆಸರಿಟ್ಟಾಗ, ಮುಂದೆಯೊಂದು ದಿನ ಹೀಗಾಗಬಹುದೆಂದು ಯಾರಾದರೂ ಭಾವಿಸಿದ್ದರೆ? ಆ ನಾಲ್ಕು ಹೆಸರುಗಳು ಲೋಕದ ನಾಲ್ಕು ಮೂಲೆಗಳಿಗೆ ಸಂಚಾರ ಮಾಡುವುವೆಂದು, ಯಾವುದೋ ಆಸೆ ಆಕಾಂಕ್ಷೆಗಳಿಗೆ ಸಂಕೇತವಾಗುವುದೆಂದು ಯಾರಾದರೂ ಊಹಿಸಿದ್ದರೆ?

ಅಪ್ಪು—ಚಿರುಕಂಡ—ಕುಂಇಂಬು ಮತ್ತು ಅಬೂಬಕರ್...

ಆ ನೆನಪು ಒಡಮೂಡಿಸುವ ಭಾವನೆ ಯಾವುದು?—ಸಂತೋಷವೆ? ದುಃಖವೆ? ನಾವು ತೋರುವ ಪ್ರತಿಕ್ರಿಯೆ ಯಾವುದು?—ಬಾಹುಸ್ಫುರಣವೆ? ಕಂಬನಿ ತುಂಬಿದ ಕಣ್ಣೆ?

ನೀವು ಮೌನವಾಗಿದ್ದೀರಿ. ಮೌನಕ್ಕೂ ಅರ್ಥವಿದೆ, ನಾನು ಬಲ್ಲೆ. ಭಾವನೆಗಳು ಒತ್ತರಿಸಿದಾಗ ಎಷ್ಟೋ ಸಾರೆ ನಾವು ಮೌನ ತಳೆಯುತ್ತೇವೆ. ಕಯ್ಯೂರಿನ ನಮಗೆಲ್ಲ ಈ ಅನುಭವ ಹೊಸದಲ್ಲ. ಈ ಹಲವು ವರ್ಷಗಳ ಕಾಲ ಆಡಬೇಕೆನಿಸಿದ್ದನ್ನೆಲ್ಲ ನಾವು ಆಡಿದ್ದರೆ, ಆ ಮಾತುಗಳು ಬೆಟ್ಟದಷ್ಟು ಎತ್ತರವಾಗುತ್ತಿದ್ದುವು. ಅಳಬೇಕು ಎನಿಸಿದಾಗಲೆಲ್ಲ ನಾವು ಅತ್ತಿದ್ದರೆ, ತೇಜಸ್ವಿನಿ ಹೊಳೆಯಲ್ಲಿ ಎಂದಿಗೂ ಬತ್ತದ ಮಹಾಪೂರ ಬರುತ್ತಿತ್ತು. ಆದರೆ ಮನಸ್ಸಿನಲ್ಲಿದ್ದುದನ್ನೆಲ್ಲ ಯಾವಾಗಲೂ ನಾವು ಮಾಡುವುದಿಲ್ಲ. ತೋಚಿದ್ದನ್ನೆಲ್ಲ ಎಂದೂ ಆಡುವುದಿಲ್ಲ.

ಇನ್ನು ಹತ್ತು ಹೆಜ್ಜೆ ದಾಟಿದೊಡನೆಯೇ ಹಳ್ಳಿ.

ತೆಂಗು-ಕಂಗು, ಬಾಳೆ, ತರಕಾರಿ, ಗಿಡ-ಬಳ್ಳಿ....ಇದೆಲ್ಲಾ ತಾಯ್ನೆಲದಲ್ಲಿ ನಾವು ಸಾಕಿ ಬೆಳೆಸಿದ ಫಲಸಂಪತ್ತು. ವಾತಾವರಣದ ವಾಸನೆಯೆ ಬದಲಾಯಿತಲ್ಲವೆ? ಆಳವಾಗಿ ಉಸಿರೆಳೆದುಕೊಳ್ಳುವ ಆಸೆ.... ಈ ತಂಗಾಳಿ.. ತಣ್ಣೀರು, ನಮ್ಮವರೇ ಆದ ಮಾನವರು....

ಕಯ್ಯೂರಿನಲ್ಲೇ ಅತಿ ಎತ್ತರದ್ದಾದ ಎರಡು ಕಂಗಿನ ಮರಗಳನ್ನು ನಾವು

ಕಂಡಿದ್ದೇವೆ. ಇಲ್ಲಿಂದಲೇ- ಕಾಣುತ್ತಿವೆಯಲ್ಲವೆ ಆ ಧ್ವಜಸ್ತಂಭಗಳು, ಬಾವುಟಗಳೆರಡು? ಒಂದು, ಮೂರು ಬಣ್ಣಗಳ ರಾಷ್ಟ್ರಧ್ವಜ; ಇನ್ನೊಂದ ಶ್ರಮಜೀವಿಗಳ ಹೋರಾಟದ ಗುರಿಯನ್ನು ಸೂಚಿಸುವ ನಿಶಾನೆ. ಅಗೋ, ಬಳಿಕ ಸ್ವಲ್ಪ ತಗ್ಗಿನಲ್ಲಿ ಬೇರೆ ನಾಲ್ಕು ಬಾವುಟಗಳು. ಕಯ್ಯೂರಿನ ನಾಲ್ವರು ವೀ ನಾಲ್ಕು ಮನೆಗಳ ಮೇಲೆ ಅವು ಹಾರಾಡುತ್ತಿವೆ.

.....ಅಂತೂ ಕಯ್ಯೂರು ಸೇರಿದಿರಿ! ದೇಶದ ನಕಾಶೆಯಲ್ಲಿ ಇದೊಂ ಕುಗ್ರಾಮ. ಭಾರತ ಭೂಮಿಯ ಸಹಸ್ರ ಸಹಸ್ರ ಹಳ್ಳಿಗಳಲ್ಲೊಂದು. ಆದರೆ ನ ಪಾಲಿಗಿದೇ ಊರು, ಇದೇ ಮಹಾನಗರ.

.....ಬನ್ನಿ, ಹೀಗೆ ಬನ್ನಿ. ಇದು ಕಯ್ಯೂರಿನ ಸಂಘದ ಕಟ್ಟಡ. ಬೇರೆ ಬೆ ಪ್ರಾಂತಗಳಿಂದ ಬಂದಿರುವ ಅತಿಥಿಗಳೆಲ್ಲ ಇಲ್ಲಿ ನೆರೆದಿದ್ದಾರೆ ನಿಮ್ಮ ಹಾಗೆ ಬರಹಗಾರರು ಕೆಲವರು, ಇತರ ಕ್ಷೇತ್ರಗಳ ಪ್ರತಿಷ್ಠಿತ ಪ್ರಮುಖರು, ಆಯುಸ್ ಬಹುಭಾಗವನ್ನೆಲ್ಲ ಕಾರಾಗಾರದಲ್ಲಿ ಕಳೆದಿರುವ ವೃದ್ಧನಾಯಕರು. ಬನ್ನಿ, ಪರಿಚ ಮಾಡಿಕೊಳ್ಳಿ.

"ಏ ಸಂಗಾತಿ!"

..... ಅದೋ, ಕಾರ್ಯದರ್ಶಿ ಗದರಿಸುತ್ತಿದ್ದಾರೆ. ಮೊದಲು ನಿಮ್ಮ ಊ ವಸತಿಯ ಏರ್ಪಾಟು ಮಾಡಬೇಕಂತೆ. ಈ ಗಡಿಬಿಡಿಯಲ್ಲಿ ಅಷ್ಟು ನನ ಹೊಳೆಯಬೇಡವೆ? ದೂರದಿಂದ ಪ್ರವಾಸ ಮಾಡಿ ಬಂದಿರುವ ನಿಮಗೆ ವಿಶ್ರಾ ಅಗತ್ಯ ಎನ್ನುವುದರ ಅರಿವಾದರೂ ನನಗಿರಬೇಡವೆ?

ಬನ್ನಿ, ತೇಜಸ್ವಿನಿ ನದಿಯಲ್ಲಿ ಸ್ನಾನ ಮಾಡುವಿರಂತೆ. ಆ ಬಳಿಕ ಒಂದಿ ಆಹಾರ. ಆದಾದ ಮೇಲೆ ವಿಶ್ರಾಂತಿ.

* * *

ಎದ್ದಿರಾ? ಆಗಲೇ ಎರಡು ಸಾರೆ ನೋಡಿ ಹೋದೆ, ಮುಗುಳ್ನಗು ಮಲಗಿದ್ದಿರಿ. ಯಾವ ಕನಸು ಕಾಣುತ್ತಿದ್ದಿರೋ! ಎಬ್ಬಿಸಲು ಮನಸ್ಸಾಗಲಿಲ್ಲ.

ನೋಡಿ, ಆಗಲೇ ಬಿಸಿಲು ಮಾಯವಾಗಿದೆ. ಇನ್ನೊಂದು ಘಳಿಗೆಯಲ್ ಕತ್ತಲು.

ಮುಖಕ್ಕಿಷ್ಟು ನೀರು ಹನಿಸಿಕೊಳ್ಳಿ, ಏನು ತರಿಸಲಿ? ಕಾಫಿಯೆ? ಕಾಫಿ ಊರಿನವರು ನೀವು.... 'ನಿಮ್ಮೂರಿಗೆ ಬಂದಾಗ ನಿಮ್ಮೂರಿನ ಪಾನೀಯ' ಎಂದಿರ ಜನರೊಡನೆ ಸಮರಸವಾಗಬಯಸುವ ಈ ಮನೋವೃತ್ತಿ ನನಗೆ ತಿಳಿಯದ

ನಮ್ಮೂರಿನ ಚಹಾ ಕುಡಿದು ನೋಡಿ, ಚೆನ್ನಾಗಿದೆ.

ಹೋಗೋಣವಿನ್ನು, ಇರುಳು ಹಗಲನ್ನು ತನ್ನೆಡೆಗೆ ಬರಸೆಳೆದು ತನ್ನೊಳಗೆ ಲೀನಗೊಳಿಸುವ ದೃಶ್ಯವನ್ನು ನಮ್ಮೂರಲ್ಲಿ ನೀವು ನೋಡಬೇಕು. ಈ ಸೊಬಗು ಅದ್ವಿತೀಯ. 'ಎಲ್ಲ ಊರವರೂ ಹೀಗೆಯೇ ಹೇಳ್ತಾರೆ' ಎಂದಿರಾ? ಹಹ್ಹ....! ನಿಮ್ಮೊಡನೆ ಮಾತನಾಡುವುದೇ ಕಷ್ಟ, ನನಗೆ ಗೊತ್ತು.

....ಕಣ್ಣು ಕೋರೈಸುವ ಹಾಗೆ ದೀಪಮಾಲೆ. ದೀಪಾವಳಿಯ ನೆನಪು ಬಂತೆ? ಹಗಲು ಕಂಡ ಹಳ್ಳಿಯೇ ಬೇರೆ, ಈ ಮಾಯಾನಗರಿಯೇ ಬೇರೆ, ಎನ್ನುವ ಹಾಗಿದೆಯಲ್ಲವೆ? ನಮ್ಮೂರಿಗೆ ವಿದ್ಯುಚ್ಛಕ್ತಿ ಇನ್ನೂ ಬಂದಿಲ್ಲ. (ಆದರೆ ವಿಚಾರದ ಹೊಸಬೆಳಕು ಧಾರಾಳವಾಗಿದೆ, ಧಾರಾಳವಾಗಿ...!) ಇಲ್ಲಿರುವುದೆಲ್ಲ ಎಣ್ಣೆಯ ದೀಪಗಳು, ಕಂದೀಲುಗಳು, ಚರ್ವತ್ತೂರು, ತ್ರಿಕರಪುರ, ನೀಲೇಶ್ವರ, ಹೊಸದುರ್ಗಗಳಿಂದ ಹೇರಳವಾಗಿ ತಂದಿರುವ ಪೆಟ್ರೋಮ್ಯಾಕ್ಸುಗಳು....

ಎಡಕ್ಕೆ ತೇಜಸ್ವಿನಿ ನದಿಯತ್ತ ಒಮ್ಮೆ ನೋಡಿ. ಕತ್ತಲೆಯಲ್ಲಿ ಆ ನೀರು ಕಾಣಿಸುವುದೇ ಇಲ್ಲ, ಅಲ್ಲವೆ? ಆದರೆ ಆ ಚಲಿಸುವ ಕಂದೀಲು? ನೀರ ಮೇಲಿನ ಬೆಳಕು?.... ಜನರಿನ್ನೂ ದೋಣಿಗಳಲ್ಲಿ ನದಿಯನ್ನು ದಾಟಿ ಬರುತ್ತಿದ್ದಾರೆ. ತಿಳಿಯಿತೆ? ಬಲಕ್ಕೆ ಬೆಟ್ಟಗಳತ್ತ ನೋಡಿ. ಒಣಗಿದ ತಾಳೆಯ ಗರಿಯನ್ನು ಹಿಡಿಯಾಗಿ ಕಟ್ಟಿ, ಉರಿಯುವ ದೀಪವಾಗಿ ಮಾಡಿ, ಕಯ್ಯೂರಿಗೆ ಇಳಿದು ಬರುತ್ತಿದ್ದಾರೆ. ಕೊಳ್ಳಿದೆವ್ವಗಳು! ನಾನು ಎಳೆಯ ಮಗುವಾಗಿದ್ದಾಗ ನಿದ್ದೆಹೋಗದೆ ಹಟಮಾಡಿದರೆ ನಮ್ಮಜ್ಜಿ ಹೆದರಿಸುವುದಿತ್ತು: "ಕೊಳ್ಳಿದೆವ್ವ ಬರ್ತದೆ. ಹಾಂ" ಅಂತ. ಸುಳ್ಳು ಸುಳ್ಳೇ!.... ದೊಡ್ಡವನಾದ ಮೇಲೆ ನನಗೆ ತಿಳಿಯಿತು! ದೆವ್ವ ಯಾವುದು, ಮನುಷ್ಯರು ಯಾರು, ಎನ್ನುವುದೆಲ್ಲ ಚೆನ್ನಾಗಿ ತಿಳಿಯಿತು.

ವಿಶೇಷ ಸಂಭ್ರಮಕ್ಕೆಂದು ಧ್ವನಿವರ್ಧಕ ಯಂತ್ರವನ್ನು ತಂದಿದ್ದಾರೆ. ತಲಚೇರಿಯಿಂದ. ಹೀಗೆ ಹೇಳಿದೆನೆಂದು, ನಮ್ಮೂರವರಿಗೆ ಬಲಶಾಲಿ ಗಂಟಲಿಲ್ಲ—ಎಂದು ತಿಳಿಯಬೇಡಿ! ನದಿಯ ಆ ದಡದಿಂದ 'ಕೂ' ಎಂದರೆ ಸಾಕು, ಅರ್ಧ ಮೈಲಿ ಈಚೆಯ ಈ ದಡಕ್ಕೆ ಕೂಗು ಕೇಳಿಸುತ್ತದೆ. ಕಾಡಿನ ನಡುವಿನಿಂದ ಕರೆಕೊಟ್ಟರೆ ಸಾಕು, ಈ ಬೀಡಿಗೆ ಅದು ಬಂದು ತಲುಪುತ್ತದೆ. ಆದರೂ ಸಭೆ, ಭಾಷಣ, ಹಾಡುಗಾರಿಕೆ, ನಾಟಕ ಎಂದಮೇಲೆ ಧ್ವನಿವರ್ಧಕ ಯಂತ್ರ ಒಂದಿರುವುದೇ ಸೊಗಸು ಅಲ್ಲವೆ?

ಬನ್ನಿ. ಉತ್ಸವ ಏರ್ಪಾಟಾಗಿರುವ ಬಯಲಿನತ್ತ ಹೋಗೋಣ. ಸಿಂಗರಿಸಿದ ಸಭಾಂಗಣ. ತಂತಮ್ಮ ಚಾಪೆಗಳನ್ನು ಅವರವರೇ ಹೊತ್ತು ತಂದು

ಸುಖಾಸೀನರಾಗುತ್ತಿದ್ದಾರೆ. ಬೆಳಕು ಹರಿಯುವವರೆಗೂ ಇಲ್ಲಿಯೇ ಇರಲು ಇದು ಸಿದ್ಧತೆ. ನಿಮ್ಮ ನಾಡಿನಲ್ಲೂ ಬಯಲಾಟಗಳಿಗೆ ಜನ ಹೀಗೆಯೇ ಬರುತ್ತಾರೆ, ಅಲ್ಲವೆ?

....'ಕಾರ್ಯಕ್ರಮವೇನು?' ಎಂದಿರಾ? ಅದೋ, ವೇದಿಕೆಯ ಮೇಲಿನಿಂದ ಜಾಹೀರು ಮಾಡುತ್ತಿದ್ದಾರೆ. ಇನ್ನು ಸಮೂಹ ಭೋಜನಕ್ಕೆ ಆರಂಭ. ರಾತ್ರಿ ಒಂಭತ್ತರವರೆಗೂ. ಒಂದೊಂದು ಸಲ ಸಾವಿರ ಜನ ಕುಳಿತುಕೊಳ್ಳುವಂತೆ ವ್ಯವಸ್ಥೆ ಮಾಡಿದ್ದೇವೆ. ಇದು ನಮ್ಮೂರಿನ ಆತಿಥ್ಯ. ಭೋಜನವಾದ ಮೇಲೆ ಈ ಉತ್ಸವದ ಹಿರಿತನ ವಹಿಸಲು ಬಂದಿರುವ ನಮ್ಮ ನಾಡಿನ ವೃದ್ಧ ನಾಯಕರ ಆರಂಭ ಭಾಷಣ. ಅದಾದಮೇಲೆ ಬೆಳಗು ಮುಂಜಾವದವರೆಗೂ ಹಾಡಿನ ಹಿನ್ನೆಲೆಯಲ್ಲಿ ನೃತ್ಯ, ನಾಟಕ —'ಕಯ್ಯೂರು ವೀರಗಾಥಾ.' ಆ ಬಳಿಕ ಸೂರ್ಯೋದಯಕ್ಕೆ ಸರಿಯಾಗಿ, ಕೊನೆಯದಾಗಿ...

ಆ ವಾಚನಾಲಯ, ಅಮೃತಶಿಲೆಯ ಸ್ತೂಪ, ಕಾಣಿಸುತ್ತಿವೆ ಅಲ್ಲವೆ?

'ಕಯ್ಯೂರು ವೀರಗಾಥಾ' ಮತ್ತೆ ಆ ನೆನಪು....

ಅದೋ, ಅಲ್ಲಿ ನೋಡಿ. ಸ್ವಯಂಸೇವಕರ ಪೋಷಾಕು ಧರಿಸಿ ನಿಂತಿರುವ ರೈತ ಯುವಕರಿಬ್ಬರನ್ನು ಕಂಡಿರಾ? ಅವರು ಮಠದ ಅಪ್ಪುವಿನ ತಮ್ಮಂದಿರು. ವೇದಿಕೆಯ ಮೇಲೆ ಬಲಭಾಗದಲ್ಲಿ ಕುಳಿತಿರುವ ವೃದ್ಧ ದಂಪತಿಗಳನ್ನು ನೋಡಿ. ಅವರು ಅಪ್ಪುವಿನ ತಾಯಿ ತಂದೆ, ಅವರ ಬಳಿಯಲ್ಲಿರುವ ಹೆಂಗಸೇ ಅಪ್ಪುವಿನ ಹೆಂಡತಿ. ಇನ್ನೂ ಎಳೆಯ ಮಗುವೇನೋ ಎಂಬಂತೆ, ತುಂಬು ಮುಖದ ತನ್ನ ಮಗನನ್ನು ಬಳಿಯಲ್ಲೇ ಕುಳ್ಳಿರಿಸಿಕೊಂಡಿದ್ದಾಳೆ ಆ ತಾಯಿ.

ಆ ಸಂಸಾರದ ಆಚೆಗಿರುವ ವೃದ್ಧ ಮತ್ತು ವೃದ್ಧೆ ಅವರೇ ಕೋಯಿತಟ್ಟಿನ ಚಿರುಕಂಡನ ತಾಯಿ ತಂದೆ. ಅವರ ಒಬ್ಬನೇ ಮಗ ಚಿರುಕಂಡ. ಬಳಿಯಲ್ಲಿ ಕುಳಿತಿರುವಾಕೆಯೇ ಆ ದಂಪತಿಯ ಸೊಸೆ.

ಮೂರನೆಯ ಕುಟುಂಬ ಸ್ವಲ್ಪ ದೊಡ್ಡದು. ವೇದಿಕೆಯ ಮೇಲೆ ಎಡಭಾಗದಲ್ಲಿರುವ ವಯಸ್ಸಾದ ಗಂಡಹೆಂಡತಿಯೇ ಪೊಡವರ ಕುಂಞಂಬುವನ್ನು ಹೆತ್ತವರು. ಕುಂಞಂಬು ಎಂದರೆ ನಿಮ್ಮ ಭಾಷೆಯಲ್ಲಿ ಪುಟ್ಟಣ್ಣ ಎಂದಹಾಗೆ. ಅವರಣ್ಣ ಕೇಳು ನಾಯರ್ ಕೆಳಗೆ ನಿಂತಿದ್ದಾನೆ. ತಮ್ಮ ರಾಯನ್ ನಾಯರ್. ಆ ಸೋದರರಲ್ಲಿ ಕೊನೆಯವನು ನಾರಾಯಣನ್ ನಾಯರ್. ಇವನೇ ನಮ್ಮೂರಿನ ಮೊದಲ ಪದವೀಧರ. ಮುಂದಿನ ಜೂನ್ ತಿಂಗಳಲ್ಲಿ ತಲಚೇರಿಯ ಕಾಲೇಜಿನಲ್ಲಿ ಆತ ಅಧ್ಯಾಪಕನಾಗುತ್ತಾನೆ. ನಾವು ಕೇರಳ ನಾಡಿಗೆ ಕೊಡುವ ಕಯ್ಯೂರಿನ ಪ್ರಥಮ

ಪ್ರೊಫೆಸರ್ ಈ ನಾರಾಯಣನ್ ನಾಯರ್. ಹೆಂಗಸರ ಜನಸಂದಣಿಯಿರುವ ಆ ಭಾಗದಲ್ಲಿ ಬಿಳಿಯ ಸೀರೆಯುಟ್ಟು ಸ್ವಯಂ ಸೇವಕರಿಗೆಲ್ಲ ನಿರ್ದೇಶನ ನೀಡುತ್ತಿರುವ ಆ ಸೋದರಿಯನ್ನ ಕಂಡಿರಾ? ಆಕೆಯೇ ಶ್ರೀದೇವಿಯಮ್ಮ, ಕುಂಞಂಬುವಿನ ಕೈಹಿಡಿದಾಕೆ.

ಉತ್ಸವಕ್ಕೋಸ್ಕರ ಹಾಕಿರುವ ಸಾಲು ಅಂಗಡಿಗಳಾಚೆ ಸಂಘದ ನೇತೃತ್ವದಲ್ಲಿ ಉಚಿತ ಪಾನೀಯದ ಉಸ್ತುವಾರಿ ನೋಡುತ್ತಿರುವ ಆ ಯುವಕ. ಆತನೇ ಅಬೂಬಕರನ ತಮ್ಮ. ಎಷ್ಟೊಂದು ಚುರುಕಾಗಿದ್ದಾನೆ, ಅಲ್ಲವೆ? ಆತನ ಬಳಿಯಲ್ಲೇ ತಲೆಯ ಮೇಲೆ ಸೆರಗು ಹಾಯಿಸಿ ಊರುಗೋಲನ್ನೂರಿ ನಿಂತಿರುವ ಆಕೆಯೇ ಅಬೂಬಕರನ ತಾಯಿ....

ಬನ್ನಿರಿನ್ನು. ನೀವು ವೀರರ ಕುಟುಂಬಗಳ ಪರಿಚಯ ಮಾಡಿಕೊಂಡುದಾಯಿತು. ಭೋಜನದ ಕಾರ್ಯಕ್ರಮ ಮುಗಿಸೋಣ, ಹೀಗೆ ಬನ್ನಿ.

ಹಬ್ಬದ ಅಡುಗೆ, ಭಕ್ಷಭೋಜ್ಯಗಳು. ಸಿಹಿ, ಸಾಗರದ ನದಿಯ ಮೀನು. ಈ ಉತ್ಸವಕ್ಕಾಗಿಯೇ ಸಾಕಿ ಬೆಳೆಸಿದ ಕೋಳಿಗಳು. ಸುತ್ತಮುತ್ತಲಿನ ಹಳ್ಳಿಗಳಿಂದೆಲ್ಲ ಕಾಣಿಕೆಯಾಗಿ ಬಂದ ಆಡುಗಳು. ಬಗೆಬಗೆಯ ತರಕಾರಿ. ಹಣ್ಣು ಹಂಪಲು. ನೀವು ಸಸ್ಯಾಹಾರಿಯೋ ಏನೋ! ಹೇಗೆ ಬೇಕೋ ಹಾಗೆ. ಬನ್ನಿ....

'ಈ ದೃಶ್ಯ ನೋಡಿಯೇ ಹೊಟ್ಟೆ ತುಂಬಿತು' ಎಂದಿರಾ? ಹಾಗಾಗುತ್ತದೆ ಎಷ್ಟೋ ಸಾರೆ. ಆದರೆ ಇಲ್ಲಿ ಈ ದಿನ 'ಬೇಡ' ಎನ್ನುವ ಹಾಗೆಯೇ ಇಲ್ಲ. ಬಂದ ಅತಿಥಿಗಳು ಒಂದು ತುತ್ತು ಹೆಚ್ಚಾಗಿಯೇ ಉಣ್ಣಬೇಕು. ಇಲ್ಲದೆ ಹೋದರೆ ಊರಿಗೇ ಅವಮಾನ.

* * *

ಎಲ್ಲಿ ಕುಳಿತುಕೊಳ್ಳೋಣ? ವೇದಿಕೆಯ ಬಳಿಗೆ ಹೋಗೋಣವೆ? ಇಲ್ಲಿಯೇ ದೂರದಲ್ಲಿ ಕುಳಿತು ತನ್ಮಯರಾಗೋಣವೆಂದೆ? ಹಾಗೆಯೇ ಆಗಲಿ.

ಮಂಪರು ಬರುತ್ತಿದೆ, ಅಲ್ಲ?

ಇನ್ನೆರಡೇ ನಿಮಿಷ.

ಭಾಷಣ ಮುಗಿಯಿತು.

ಅದೋ, ಘೋಷ:

"ಇಂಕ್ವಿಲಾಬ್ ಜಿಂದಾಬಾದ್!"

"ಕ್ರಾಂತಿಗೆ ಜಯವಾಗಲಿ!"

"ಕಯ್ಯೂರು ವೀರರು ಅಮರರಾಗಲಿ!"

ಹಿಮ್ಮೇಳ ಸಿದ್ಧವಾಗುತ್ತಿದೆ. ನಟರು ರಂಗಭೂಮಿಗೆ ಪ್ರವೇಶ ಮಾಡಿದ್ದಾರೆ. ಅವರಿಗಡ್ಡವಾಗಿ ತೆರೆ....

ಠಣಂ ಠಣಕ್ ಠಣಂ...

ನೃತ್ಯವನ್ನು ನೋಡುತ್ತಿರಿ; ಹಾಡಿನ ಅರ್ಥ ನಾನು ಹೇಳುವೆ.

"ಕಯ್ಯೂರು ವೀರಗಾಥಾ!"

೧

ಪರತಂತ್ರ ಭಾರತದ ಕರಿನಾಡು ಕೇರಳ. ಆ ಭೂಮಿಯಲ್ಲೊಂದು ಕಿರು ಗ್ರಾಮ ಕಯ್ಯೂರು. ಇದು ಹಿಂದಿನ ಕಥೆ; ಎಷ್ಟೋ ವರ್ಷಗಳಿಗೆ ಹಿಂದಿನ ಕಥೆ.

ಆಗಲೇ ಸೂರ್ಯೋದಯವಾಗಿದೆ ಗಂಡಸರೆಲ್ಲ ನೊಗಗಳನ್ನು ಹೆಗಲಿಗೇರಿಸಿ ಹೋರಿಗಳನ್ನು ಮುಂದಕ್ಕೆ ನಡೆಸುತ್ತ, ಹೊಲಗಳತ್ತ ಸಾಗಿದ್ದಾರೆ. ಕತ್ತಲೆ ಕರಗಿ ಮಬ್ಬು ಬೆಳಕು ಮೆಲ್ಲಮೆಲ್ಲನೆ ಶುಭ್ರವಾಗುತ್ತಿದೆ.

ಆ ಹಟ್ಟಿಯ ಹೊರಗೊಬ್ಬ ಹದಿನಾಲ್ಕರ ಹುಡುಗ ಬಿದಿರು ತಡಿಕೆಯ ತೂತಿನೊಳಗಿಂದ ಒಳಗಿಣಿಕಿ ನೋಡುತ್ತ ಪಿಸುದನಿಯಲ್ಲಿ ಕರೆಯುತ್ತಿದ್ದಾನೆ;

"ಶ್... ಏಯ್...ಶೂ.... ಅಪ್ಪು....."

ಒಳಗೆ ತನಗೆ ತಿಳಿದೊಂದೇ ಹಾಡನ್ನು ಅಪ್ಪುವಿನ ತಾಯಿ ಕೋಮಲವೂ ಅಲ್ಲದ, ಗಡಸೂ ಅಲ್ಲದ , ಗಡಸೂ ಅಲ್ಲದ ಸ್ವರದಲ್ಲಿ ಹಾಡುತ್ತಿದ್ದಾಳೆ:

"ಓಮನ ಕಿಡಾವೇ...."

"ಓ ಮುದ್ದು ಕಂದಾ...."

ಆದರೆ ಆ ಹಾಡಿನ ಆಲಾಪನೆಗೆ ಭಂಗ ತರುವಂತೆ ಆ ಕರೆ :

"ಶ್.... ಅಪ್ಪೂ ಏಳೋ.....!"

ಆ ತಾಯಿ ತಿರುಗಿ ನೋಡಿದಳು. ಬರೀ ಚಾಪೆಯ ಮೇಲೆ ತೆಳ್ಳಗಿನದೊಂದು ಕಂಬಳಿ ಹೊದೆದು ಮಲಗಿದ್ದ ಆಕೆಯ ಮಗನಿಗೆ ಆಗಲೇ ಹದಿನೈದು ತುಂಬಿತ್ತು. ಎಳೆಯ ಕಂದಮ್ಮನಲ್ಲ! ಆದರೂ ಮಲಗಿದ್ದ ಮಗನನ್ನು ಪರಕೀಯರು ಯಾರೋ ಕರೆದು ನಿದ್ದೆಗೆ ಭಂಗತರುವುದು ತಾಯಿಗೆ ಸಹನೆಯಾಗದು.

ಹಾಡು ನಿಲ್ಲಿಸಿ, ಧ್ವನಿಯನ್ನು ಗಡಸುಗೊಳಿಸಿ ತಾಯಿ ಕೇಳಿದಳು:

"ಯಾರೋ ಅದು? ಅಪ್ಪು ಮಲಗಿದ್ದಾನೆ."

ಆ ತಾಯಿಯ ಸ್ವರ ಕೇಳಿ ಅಲ್ಲಿಂದ ಓಡಬೇಕೆನಿಸಿತು ಹೊರಗಿದ್ದ ಹುಡುಗನಿಗೆ. ಮರುಕ್ಷಣವೇ 'ಕುಂಭಕರ್ಣನ ನಿದ್ದೆ. ಈ ಮಹಾರಾಯನಿಗೊಮ್ಮೆ ಎಚ್ಚರವಾದರೂ

ಆಗಿದ್ದರೆ—ಎನಿಸಿತು. 'ಒಳಗಿನಿಂದ ಅಪ್ಪುವಿನ ತಾಯಿ ಕೇಳಿದ್ದಳು: 'ಯಾರೋ ಅದು?' ಆ ಪ್ರಶ್ನೆಗೆ ತಾನು ಉತ್ತರ ಕೊಡಬೇಕೋ ಬಾರದೋ....

ವಿಚಾರ ತಡವರಿಸಿತು, ಗಂಟಲೊಣಗಿತು.

ಉತ್ತರ ಬರಲಿಲ್ಲವೆಂದು ಒಳಗಿದ್ದ ತಾಯಿ ಹಟ್ಟಿಯ ಬಾಗಿಲಿಗೆ ನಡೆದಳು. ಹೊರಗೆ ಹುಡುಗ ಏನು ಮಾಡಬೇಕೆಂದು ತಿಳಿಯದೆ ನಿಂತಿದ್ದಾಗಲೇ, ಬಾಗಿಲು ಕಿರ್ರೆಂದಿತು.

"ಓ ನೀನೇನೋ?"

ಬೆಚ್ಚಿಬಿದ್ದ ಹುಡುಗ ಹಲ್ಲು ಕಿಸಿದ. ಉಟ್ಟಿದ್ದುದು ಮೊಣಕಾಲವರೆಗಿನ ಒಂದು ಅಂಗವಸ್ತ್ರ ಮೈಮೇಲಿದ್ದುದೊಂದು ಹರಕು ಅಂಗಿ. ಆ ವಸನದ ಹೊರಗೆ ಕಾಣುತ್ತಿದ್ದುದೆಲ್ಲ ಕರಿದಾದ ಬಡಕಲು ಮೈ.

"ಹೊರಗೆ ಯಾಕೆ ನಿಂತಿದೀಯೋ? ಬಾ ಒಳಕ್ಕೆ."

ಹಾಗೆ ಆದೇಶವಿತ್ತು, ತಾಯಿ ಮಗನತ್ತ ಬಾಗಿ ಮೈಮುಟ್ಟಿದಳು.

ಎಚ್ಚರಗೊಂಡ ಅಪ್ಪು ಮುಖದ ಮೇಲಿನ ಕಂಬಳಿಯನ್ನು ಸರಿಸಿ ಕಣ್ಣು ತೆರೆದು ತನ್ನೆಡೆಗೆ ಬಾಗಿದ್ದ ತಾಯಿಯನ್ನು ನೋಡಿದ. ಆಕೆ ಉಟ್ಟಿದ್ದುದು ಮಾಸಿದ್ದ ಪಂಚೆ; ಎದೆಯ ಮೇಲೆ ಅಷ್ಟು ಮಾಸದೇ ಇದ್ದ ಬಿಳಿಯ ರವಿಕೆ; ಸಡಿಲವಾಗಿ ಗಂಟು ಹಾಕಿದ್ದ ತುಂಬುಹೆರಳು. ಕಪ್ಪು ಹೆರಳಿಗೆ ಪ್ರತಿಯಾದ ಬಿಳುಪು ಮುಖ: ಆ ಬಿಳುಪನ್ನು ನಾಚಿಸುವ, ದಂತಪಂಗ್ತಿಯನ್ನು ತೋರಿಸಿಕೊಡುತ್ತಿದ್ದ ನಗೆ.

"ಯಾಕೋ ಹಾಗೆ ನೋಡ್ತಿದ್ದೀಯಾ? ಏಳು ಚಿರುಕಂಡ ಕರೀತಿದ್ದಾನೆ."

ತಾಯಿಯಂತೆ ತಾನೂ ಮುಗುಳುನಗುತ್ತಿದ್ದ ಅಪ್ಪು. ಒಮ್ಮೆಲೆ ಗಡಬಡಿಸಿ ಎದ್ದ. ಬೇಗನೆ ಏಳುವೆನೆಂದು ಮಾತು ಕೊಟ್ಟಿದ್ದುದು ಆಗ ನೆನಪಾಯಿತು. ಆತನ ದೃಷ್ಟಿ ಬಾಗಿಲಿನತ್ತ ಸರಿಯಿತು. ಕರೆಯಲು ಬಂದಿದ್ದ ಚಿರುಕಂಡ ಅಲ್ಲಿ ನಿಂತಿದ್ದ.

ಅಪ್ಪು ತಾನೂ ಒಂದು ಅಂಗವಸ್ತ್ರವನ್ನು ನಡುವಿಗೆ ಅಡ್ಡವಾಗಿ ಕಟ್ಟಿ, ತನ್ನದೊಂದು ಹಸುರು ಷರಟನ್ನು ತೊಟ್ಟು, ಹೊರಟು ನಿಂತ.

ಒಳಗೆ ಒಲೆಯ ಬಳಿಗೆ ಹೋದ ತಾಯಿ ಕೇಳಿದಳು :

"ಎಲ್ಲಿಗೆ ಹೊರಟದ್ದೀರೋ ಇಷ್ಟು ಬೆಳಿಗ್ಗೆ?"

"ಎಲ್ಲಿಗೂ ಇಲ್ಲಮ್ಮ, ಇಲ್ಲೇ...."

ಹಾಗೆ ಹೇಳುತ್ತಲಿದ್ದ ಅಪ್ಪುವನ್ನು ಚಿರುಕಂಡನ ಕಣ್ಣುಗಳು ಕಾತರದಿಂದ ನೋಡಿದುವು. ಆ ನೋಟವನ್ನು ಅಪ್ಪು ಗಮನಿಸದೆ ಇರಲಿಲ್ಲ. ಆತನ ಮರು ನೋಟದಲ್ಲಿ 'ಗಾಬರಿಯಾಗಬೇಡ, ಹೇಳೋದಿಲ್ಲ' ಎನ್ನುವ ಆಶ್ವಾಸನೆ ಇತ್ತು.

"ಬೆಳಿಗ್ಗೆ ಎದ್ದು ಆಟಕ್ಕೆ ಹೊರಟಿದ್ದೀರಿ ಅಲ್ಲ? ಎಳೇ ಮಕ್ಕಳ ಹಾಗೆ—ಥೂ....!"

ಹಾಗೆಂದು ತಾಯಿ ಪ್ರೀತಿಯಿಂದ ಗದರಿ ನುಡಿದಳು.

ಹಿರಿಯರಿಗೆ ತಿಳಿಯದ ಕೆಲಸಕ್ಕೆ ಕೈಹಾಕಿದ್ದ ಎಳೆಯರು, ತಮ್ಮ ಹಿರಿತನದ ಬಗೆಗೆ ತಾವೇ ಅಭಿಮಾನಪಡುತ್ತ, ಪರಸ್ಪರ ನೋಡಿ ಮುಗುಳ್ನಕ್ಕರು.

ಅದನ್ನು ಕಂಡ ತಾಯಿ ಸ್ವರವೇರಿಸಿ ಕೇಳಿದಳು:

"ಏನ್ರೋ ಅದು?"

"ಏನೂ ಇಲ್ಲವಮ್ಮ. ಇಲ್ಲೇ ಹೋಗಿಬರ್ತೇವೆ."

—ತಾಯಿಗೆ ಯಾವ ಸಂದೇಹವೂ ಬರದ ಹಾಗೆ, ನಂಬಿಕೆಯ ಸ್ವರದಲ್ಲಿ ಅಪ್ಪು ನುಡಿದ.

ತಾಯಿ, ಒಲೆಯ ಕೆಂಡಗಳೆಡೆಯಿಂದ ನೇಂದ್ರ ಬಾಳೆಯ ಎರಡು ಹಣ್ಣುಗಳನ್ನು ಹೊರಕ್ಕೆಳೆದಳು. ದಪ್ಪಗೆ ಉದ್ದವಾಗಿದ್ದ ಹಣ್ಣುಗಳು ಬೆಂದು ಕೆಂಪಗೆ ಬುಡಕಲಾಗಿದ್ದವು. ಚಿರುಕಂಡ ಅದನ್ನು ನೋಡಿದ.

ಹುಡುಗರತ್ತ ದೃಷ್ಟಿ ಹಾಯಿಸುತ್ತ ತಾಯಿ ಹೇಳಿದಳು:

"ಮುಖ ತೊಳ್ಕೊ ಅಪ್ಪು. ಹಣ್ಣು ತಿಂದ್ಕೊಂಡು ಹೋಗಿ. ಬರೀ ಹೊಟ್ಟೇಲಿ ಅಲೀಬೇಡಿ."

ಅಪ್ಪು ಒಂದೇ ನೆಗೆತದಲ್ಲಿ ಹೊರಕ್ಕೆ ಧಾವಿಸಿದ. ಆವರಣವಿಲ್ಲದ ಪುಟ್ಟ ಬಾವಿಯಿಂದ ಮಣ್ಣಿನ ಗಡಿಗೆಯಲ್ಲಿ ಸೇದಿದ್ದ ನೀರು, ಬಾಳೆಯ ಗಿಡಗಳ ಬುಡದಲ್ಲಿ ಸಿದ್ಧವಾಗಿತ್ತು. ಅಪ್ಪು ಮುಖಮಾರ್ಜನದ ಶಾಸ್ತ್ರ ಮುಗಿಸಿದ.

ತನಗೊಂದು ಮಗನಿಗೊಂದು ಎಂದು ಬೇಯಿಸಿದ್ದ ಹಣ್ಣುಗಳನ್ನು ಮಗನಿಗೂ ಮಗನ ಸ್ನೇಹಿತನಿಗೂ ತಾಯಿ ಕೊಟ್ಟಳು. ಹುಡುಗರು ಬಾಯಿ ಚಪ್ಪರಿಸುತ್ತ, ಸುಟ್ಟು ಹೋಗಿದ್ದ ಸಿಪ್ಪೆ ಸುಲಿದು, ಉಗಿಯೇಳುತ್ತಿದ್ದ ಬಿಸಿಯಾದ ರುಚಿಯಾದ ಹಣ್ಣನ್ನು ಸದ್ದು ಮಾಡುತ್ತ ತಿಂದರು.

ಅಲ್ಲಿಂದ ಹೊರಟು ಆ ಗೆಳೆಯರಿಬ್ಬರು ಹೊಲದ ಏರಿಯ ಮೇಲೆ ನಡೆದು ಹೋದರು.

ಎಲ್ಲವೂ ಸರಿಯಾಗಿಲ್ಲ ಎನ್ನುವಂತೆ ಚಿರುಕಂಡ ಹೇಳಿದ:

"ಏನಪ್ಪ ನೀನು, ಬೆಳಿಗ್ಗೆ ಬೇಗ್ನ ಏಳ್ತೇನೆ ಅಂದೋನು?"

"ನಾನೇನು ಮಾಡ್ಲೋ? ಅಪ್ಪ ಎದ್ದಾಗ ನನ್ನೂ ಎಬ್ಸೂಂತ ಅಮ್ಮನಿಗೆ ಹೇಳಿದ್ದೆ. ಅಮ್ಮ ಎಬ್ಬಿಸ್ಲೇ ಇಲ್ಲ."

"ಯಾಕೇಂತ ಕೇಳ್ಲಿಲ್ವೆ ಅಮ್ಮ?"

—ಚಿರುಕಂಡನ ಪ್ರಶ್ನೆಯಲ್ಲಿ ಕಾತರದ ಛಾಯೆ.

"ಸಾಕು ಬಿಡೋ! ನಾನೇನು ಮಗುವೆ ಹೇಳೋದಕ್ಕೆ?"

—ನೊಂದ ಧ್ವನಿಯಲ್ಲಿ ಅಪ್ಪುವಿನ ಉತ್ತರ.

ಮುಂದೆ ಅಪ್ಪು, ಹಿಂದಿನಿಂದ ಚಿರುಕಂಡ ಇಬ್ಬರೂ ಹೊಲಗಳನ್ನು ಹಿಂದೆ ಬಿಟ್ಟು ನದೀ ದಂಡೆಯತ್ತ ನಡೆದರು.

ಅದು ನದಿಯನ್ನು ದಾಟುವ ಜಾಗ—ಕಡವು. ಅದರ ಮೇಲಕ್ಕೂ ಕೆಳಕ್ಕೂ ಬಂಡೆಕಲ್ಲುಗಳಿದ್ದವು, ಬಟ್ಟೆ ಒಗೆಯುವ ಕಲ್ಲುಗಳು. ಅದೇ ಸ್ನಾನದ ಘಟ್ಟ. ಅಲ್ಲಿಯೇ ಇದ್ದ ಕಾಡುಮರವನ್ನೇರಿ, ನೀರಿನ ವಿಸ್ತಾರಕ್ಕೂ ಚಾಚಬಯಸಿದ್ದ ರೆಂಬೆಗಳ ಮೇಲೆ ನಡೆದುಹೋಗಿ, ಆಳದ ನೀರಿಗೆ ಮೀನಾಗಿ ಧುಮುಕುವುದು ಅಪ್ಪುವಿನ ಪ್ರೀತಿಯ ಆಟ. ಆಗ ಅವನ ಸಂಗಡಿಗರು ಹಲವಾರು ಜನ. ಚಿರುಕಂಡನಿಗೂ ಈಸು ಬರುತ್ತಿತ್ತು. ಆದರೆ ಜಲಕೇಳಿಯಲ್ಲಿ ಆತನಿಗೆ ಆಸಕ್ತಿ ಇರಲಿಲ್ಲ.

ಆದರೆ ಈ ಬೆಳಗ್ಗೆ ಅಪ್ಪು ಮತ್ತು ಚಿರುಕಂಡ ದಡದಮೇಲೆ ನಿಂತು ಮೌನವಾಗಿ ಮಂದಗಮನೆಯಾಗಿ ಹರಿಯುತ್ತಿದ್ದ ತೇಜಸ್ವಿನಿಯನ್ನು ನೋಡಿದರು. ತರಕಾರಿಯ ಮೂಟೆಗಳೊಡನೆ ನೀಲೇಶ್ವರದ ಪೇಟೆಗೆ ಹೊರಟಿದ್ದ ರೈತಸ್ತ್ರೀಯರನ್ನು ಹೊತ್ತ ದೋಣಿ, ನಡುಹೊಳೆಯನ್ನು ದಾಟಿ ಆಚೆಯ ದಡದತ್ತ ಸಾಗುತ್ತಿತ್ತು. ದೃಷ್ಟಿಯ ವ್ಯೂಹದೊಳಗೆ ಬೇರೆಯೂ ದೋಣಿಗಳು ಕಂಡುಬಂದವು. ಮೀನು ಹಿಡಿಯಲೆಂದು ಹೊರಟವರ ದೋಣಿಗಳು. ಅಡ್ಡಾದಿಡ್ಡಿಯಾದ ಚಲನೆ.

ಈ ಗೆಳೆಯರೂ ಆಚೆಯ ದಡಕ್ಕೆ ಹೋಗಬೇಕು.

"ಏನು ಮಾಡೋಣವೋ ಚಿರುಕಂಡ ?"

"ಅದೇ ಯೋಚಿಸ್ತಾ ಇದ್ದೇನೆ."

"ಕಡವಿನ ದೋಣೀಲಿ ಹೋದರೆ ಕಾಸು ಕೊಡ್ಬೇಕು."

"ಹೌದು. ಕಾಸೆಲ್ಲಿಂದ ತರೋಣ ಈಗ?"

ಆದರೆ ಚಿರುಕಂಡನ ಮೆದುಳಿನಲ್ಲಿ ಮುನ್ನೆಚ್ಚರಿಕೆಯ ಯೋಚನೆಗಳು ಅಲೆಯಲೆಯಾಗಿ ಎದ್ದುವು.

"ಎಲ್ಲಿಗೆ ಹೋಗ್ತಿರೀಂತ ದೋಣಿಯವನು ಕೇಳಿಯೇ ಕೇಳ್ತಾನೆ."

"ಕೇಳಲಿ ಬಿಡು. ಏನಾದರೂ ಹೇಳಿ ದಬಾಯಿಸ್ಕೊಂಡು ಹೋದರಾಯ್ತು."

"ಬೇಡ ಅಪ್ಪು. ಸಂಶಯ ಬಂದೀತು. ಹಳ್ಳೀಲೆಲ್ಲಾ ಆಮೇಲೆ ಮಾತನಾಡ್ತಾರೆ.

ಯಾರಿಗೂ ತಿಳೀದ ಹಾಗೆ ಬನ್ನೀಂತ ಹೇಳಿಲ್ವೆ ಮಾಸ್ತರು."

ಚಿರುಕಂಡನ ಮುಖ ಮುಂದಿನ ದಾರಿ ಹೊಳೆಯದೆ ಸಪ್ಪಗಾದಂತೆ, ಅಪ್ಪುವಿನ ಮುಖ ಅದೇ ಕಾರಣಕ್ಕಾಗಿ ಸಿಡುಕಿನಿಂದ ಕೆಂಪೇರಿತು.

"ಹ್ಯಾಗೆ ಬರಬೇಕೂಂತಲೂ ಮಾಸ್ತರೇ ಹೇಳ್ಬೇಕಾಗಿತ್ತು."

ಮಾಸ್ತರ ಮೇಲಿನ ಟೀಕೆ ಚಿರುಕಂಡನಿಗೆ ಸಹನೆಯಾಗಲಿಲ್ಲ.

"ಅವಸರದಲ್ಲಲ್ವ ಅವರು ಹೋದದ್ದು? ಹಾಗೆಲ್ಲ ಯೋಚಿಸಿ ಹೇಳೋದಕ್ಕೆ ಅವರಿಗೆ ಪುರುಸೊತ್ತಿಲ್ಲಿತ್ತು?"

ಅದು ನಿಜವೆಂಬುದನ್ನು ಮನಗಂಡ ಅಪ್ಪು, ಒಂದು ಕ್ಷಣ ಸುಮ್ಮನಿದ್ದು ಹೇಳಿದ:

"ಈಗೇನ್ಮಾಡೋಣ ಹಾಗಾದರೆ?"

ಚಿರುಕಂಡ ತನಗೆ ಹೊಳೆದ ಉಪಾಯವನ್ನು ತನ್ನೊಳಗೇ ತೂಗಿ ನೋಡಿ ಅಪ್ಪುಗೆ ತಿಳಿಸಿದ:

"ಮೇಲಿನ ತೋಟದ ಮುದುಕ ಇಲ್ವ? ಅವನದೊಂದು ಹಳೇ ದೋಣಿ ತೂತಾಗಿ ಬಿದ್ದಿದೆ. ದುರಸ್ತಿ ಮಾಡೇ ಇಲ್ಲ...."

ಆ ಸಲಹೆಯನ್ನು ಆಗಲೇ ಸ್ವೀಕರಿಸಿದವನಂತೆ ಅಪ್ಪು ಹೇಳಿದ:

"ದೊಡ್ಡದಾ ತೂತು?"

"ಚಿಕ್ಕದು, ನೀನು ಹುಟ್ಟು ಹಾಕೋ ಹಾಗಿದ್ರೆ ನಾನು ನೀರು ಎತ್ತುತ್ತಾ ಇರ್ತೇನೆ."

"ಮುದುಕಪ್ಪ ಕೊಡ್ತಾನೋ ಇಲ್ವೋ?"

"ಕೊಡದೇ ಏನು? ಮೀನು ಹಿಡಿಯೋಕೆ ಹೋಗ್ತೇವೆ—ನಿನಗೂ ಮೀನು ಕೊಡ್ತೇವೆ ಅನ್ನೋದು."

"ಅದೇನೋ ಸರೀನೆ. ಆದರೆ ಅವನಿಗೆ ಕೊಡೋದಕ್ಕೆ ಮೀನು ಎಲ್ಲಿಂದ ತರೋಣ?'

"ಇವತ್ತು ಸಿಗಲಿಲ್ಲ ನಾಳೆ ಕೊಡ್ತೇವೆ, ಅಂದರಾಯ್ತು."

ಅಪ್ಪು ಸಂತೋಷದಿಂದ ಮೌನವಾಗಿ ಹುಬ್ಬು ಕುಣಿಸುತ್ತ ತಲೆಯಾಡಿಸಿದ. ನಿಮಿಷವೂ ತಡಮಾಡದೆ ಮುಂದಕ್ಕೆ ಬೇಗಬೇಗನೆ ಹೆಜ್ಜೆ ಇಟ್ಟ. ಅವನಷ್ಟು ಶಕ್ತಿವಂತನಲ್ಲದ ಚಿರುಕಂಡ ಸ್ವಲ್ಪ ಪ್ರಯಾಸಪಡುತ್ತಲೇ ಅಪ್ಪುವನ್ನು ಹಿಂಬಾಲಿಸಿದ.

ನದಿಯ ದಂಡೆಯುದ್ದಕ್ಕೂ ಮೇಲೆ ಸಾಗಿದಾಗ ಆ ಹೊಲ ಹಿತ್ತಿಲು ಕಣ್ಣಿಗೆ ಬಿದ್ದವು. ನದಿಯಿಂದ ಮೇಲಕ್ಕೆಳೆದು ಮಗುಚಿಹಾಕಿದ್ದ ಪುಟ್ಟ ದೋಣಿಯೂ

ಕಾಣಿಸಿತು.

ಅರ್ಧ ಕೆಲಸವಾದಾಗ ಏನೋ ಅಡ್ಡಿಯಾದಂತೆ ಅಪ್ಪು ಇಳಿದನಿಯಲ್ಲಿ ಕೇಳಿದ:

"ಮೀನು ಹಿಡಿಯೋದಕ್ಕೆ ಬಲೆ ಎಲ್ಲಿ—ಗಾಳ ಎಲ್ಲಿ—ಅಂತ ಆತ ಕೇಳಿದರೆ?"

"ಕೈಲಿದೆ ಅನ್ನೋದು!"

"ಏನು ಕೈಲಿದೆ?"

"ಮುದುಕನಿಗೆ ಕಣ್ಣು ಕಾಣಿಸೋದಿಲ್ಲ ಕಣೋ!"

ಇಬ್ಬರೂ ಸಣ್ಣಗೆ ನಕ್ಕರು. ಆದರೆ ಅಪ್ಪುವಿಗೆ ಬೇರೆಯೂ ಒಂದು ಸಂದೇಹ ಇತ್ತು.

"ದೋಣಿ ಕೊಡೋದಿಲ್ಲಾಂತ ಮುದುಕ ಅಂದರೆ?"

"ಬೇಡ ಅನ್ನೋದು."

"ಮತ್ತೆ?"

"ಆಗಲೇ ಅನ್ನಿಲ್ವೆ, ಮುದುಕನಿಗೆ ಕಣ್ಣು ಕಾಣಿಸೋದಿಲ್ಲಾಂತ ? ಕಿವೀನೂ ಸರಿಯಾಗಿ ಕೇಳಿಸೋದು ಸಂಶಯವೇ! ಅವನೆದುರಲ್ಲೇ ದೋಣೀನೆತ್ತಿ ನೀರಿಗಿಳಿಸಿ ಹೊರಟೇಬಿಡೋದು!"

ಯಾವ ಸಾಹಸಕ್ಕೂ ಸಿದ್ಧನಾಗಿದ್ದ ಅಪ್ಪುವಿಗೆ, ಸಾಮಾನ್ಯವಾಗಿ ಸಪ್ಪಗಿರುತ್ತಿದ್ದ ಚಿರುಕಂಡನೇ ಉತ್ಸಾಹದಿಂದ ಹಾಗೆ ಆಡಿದುದನ್ನು ಕಂಡು, ತುಂಬಾ ಸಂತೋಷವಾಯಿತು.

....ಮಗನನ್ನೂ ಸೊಸೆಯನ್ನೂ ಹೊಲಕ್ಕೆ ಕಳುಹಿಸಿದ್ದ ಮುದುಕ, ಆ ಹುಡುಗರಿಗೆ ಅಡ್ಡಿ ಮಾಡಲಿಲ್ಲ. ಆದರೆ, ದೋಣಿಯ ತೂತು ಮುಚ್ಚಿ ಸರಿ ಪಡಿಸಿಕೊಂಡೇ ನೀರಿಗಿಳಿಯಬೇಕೆಂದು ಹಟ ಹಿಡಿದ. ಮೊಮ್ಮಕ್ಕಳಿಲ್ಲದ ತನ್ನನ್ನು ಆ ಎಳೆಯರು "ಅಜ್ಜಾ" ಎಂದಾಗ ಮುದುಕನ ಮನಸ್ಸು ಉಲ್ಲಾಸಗೊಂಡಿತ್ತು. ದೃಷ್ಟಿ ಮಂದವಾಗಿದ್ದರೂ ಆತ ಎಲ್ಲವೂ ಕಾಣಿಸುತ್ತಿದ್ದವನಂತೆ ಮೀನು ಹಿಡಿಯಬೇಕಾದ ಜಾಗಗಳ ಬಗೆಗೆ ನಿರ್ದೇಶನವನ್ನಿತ್ತ.

"ಮರೀದೆ ಮೀನು ಕೊಟ್ಟಟ್ಟು ಹೋಗಿ" ಎಂದು ಆತ ಎರಡು ಬಾರಿ ಎಚ್ಚರಿಸಿ ಹೇಳಿದ.

ಅಪ್ಪು ಮತ್ತು ಚಿರುಕಂಡ ದುರಸ್ತಿಯ ನಾಟಕ ಮುಗಿಸಿ ದೋಣಿಯೊಡನ ನೀರಿಗಿಳಿದು ಹೊರಟೇಹೋದರು.

ನುರಿತ ಅಂಬಿಗನಾದ ಅಪ್ಪುವಿನ ಕೈಯಲ್ಲಿ ದೋಣಿ ಬಾಣವಾಯಿತು. ಚಿರುಕಂಡ ಒಳಕ್ಕೆ ನುಗ್ಗುತ್ತಿದ್ದ ನೀರನ್ನು ಬೇಗಬೇಗನೆ ಎತ್ತಿ ನದಿಗೆ ಸುರಿಯುತ್ತ

ಕುಳಿತ. ಇನ್ನೇನು ದಡ ಸೇರುವೆವೆಂಬ ಉತ್ಸಾಹದಲ್ಲಿ ಒಬ್ಬರೂ ಮಾತನಾಡಲಿಲ್ಲ.

.....ದಡ ಸೇರಿದ ಬಳಿಕ ದೋಣಿಯನ್ನು ಇಬ್ಬರೂ ಮೇಲಕ್ಕೆಳೆದು ಪೊದೆಗಳ ಮರೆಯಲ್ಲಿ ಮಗುಚಿ ಹಾಕಿದರು.

ಆ ಬಳಿಕ ಅವರು ನಡೆಯಬೇಕಾಗಿದ್ದುದು ಎರಡು ಫರ್ಲಾಂಗುಗಳ ದೂರ ಮಾತ್ರ. ಚಪ್ಪಲಿ ಕಾಣದ ಆ ಪಾದಗಳಿಗೆ ಕಲ್ಲು ಮುಳ್ಳುಗಳನ್ನು ತುಳಿಯದೆಯೇ ಹಾದಿ ಕ್ರಮಿಸುವ ಅಭ್ಯಾಸವಿತ್ತು.

ನಿರೀಕ್ಷಿಸಿದ್ದ ಗುರಿ ಸಮೀಪಿಸುತ್ತಿದ್ದ ಸಂದರ್ಭದಲ್ಲಿ, ಆ ಆತುರದಲ್ಲಿ, ಹೃದಯ ಡವಡವನೆ ಹೊಡೆದುಕೊಂಡಾಗ ಮೌನ ಅರ್ಥಹೀನವಾಗಿ ಅಪ್ಪುವಿಗೆ ತೋರಿತು. ನಡೆಯುತ್ತಲಿದ್ದಂತೆಯೇ ಆತ ಕೇಳಿದ:

"ಚಿರುಕಂಡ, ಯಾವ ಜಾಗ ಅಂತ ಸರಿಯಾಗಿ ಗೊತ್ತೇನೋ ನಿಂಗೆ?"

"ಹೂಂ. ಆಚೆ ಹಳ್ಳಿ ಶುರುವಾಗೋದಕ್ಕುಂಚೇನೆ ಒಂದು ಚಾದಂಗಡಿ ಇಲ್ವಾ? ಅಲ್ನೇ."

ಪ್ರಶ್ನೆಗೆ ತಕ್ಕ ಉತ್ತರ ಕೊಟ್ಟು ಮತ್ತೆ ಬಿಲ ಸೇರಿ ಮೌನವಾಗುವ ಮನಸ್ಸು ಚಿರಕಂಡನದು. ಅದನ್ನು ಚೆನ್ನಾಗಿ ತಿಳಿದಿದ್ದ ಅಪ್ಪು ಆ ಮೌನಕ್ಕೆ ಅವಕಾಶ ದೊರೆಯದಂತೆ ಮತ್ತೊಂದು ಪ್ರಶ್ನೆ ಕೇಳಿದ:

"ಎಲ್ಲಾ ಬಿಟ್ಟು ಚಾದಂಗಡೀಲಿ ಕೂತ್ಕೊಳ್ಳೋದು ? ಯಾರಿಗಾದರೂ ಸಂಶಯ ಬಂದರೆ?"

ಮಾತಿನ ಸ್ವರ ಗಟ್ಟಿಯಾಗಿತ್ತು. ಮೊದಲು ಅದಕ್ಕೆ ಅಕ್ಷೇಪವೆತ್ತಿ ಚಿರಕಂಡ ಹೇಳಿದ: "ಮೆತ್ತಗೆ ಮಾತಾಡು ಅಪ್ಪು!"

ತಪ್ಪು ಮಾಡಿದವನಂತೆ ಅಪ್ಪುವಿನ ಮುಖ ಅರೆಕ್ಷಣ ಬಣ್ಣ ಬದಲಾಯಿಸಿತು. ತನ್ನ ಮಾತಿನ ಪರಿಣಾಮವನ್ನು ಪರೀಕ್ಷಿಸಿ ನೋಡಿ ತಿಳಿದು ಸಂತೃಪ್ತನಾಗಿ ಚಿರುಕಂಡ ಮಾತು ಮುಂದುವರಿಸಿದ:

"ಚಾದಂಗಡೀಲೇ ಸುರಕ್ಷಿತ ಅಂತ ಮಾಸ್ತರು ಹೇಳಿದ್ರು. ಹಾದಿಹೋಕರೆಲ್ಲ ಬರ್‍ತಾರೆ ಹೋಗ್ತಾರೆ. ಅದಕ್ಕೆಲ್ಲ ಮಹತ್ವವೇ ಇರೋದಿಲ್ಲ. ಅಲ್ದೆ ವೈರಿಗಳ ಕಡೆಯೋರು ಯಾರಾದರೂ ಬಂದರೆ ಚಾದಂಗಡಿಯವರಿಗೆ ಮೊದಲು ಗೊತ್ತಾಗ್ತದೆ."

ನಾವು ಮತ್ತು ವೈರಿಗಳು.... ಒಂದು ಪಕ್ಷ, ಅದಕ್ಕೆ ಇದಿರಾಗಿ ಇನ್ನೊಂದು ಪಕ್ಷ ಇದು ಸ್ವಾರಸ್ಯವಾಗಿ ಅಪ್ಪುವಿಗೆ ತೋರಿತು. ಮೈನವಿರೆಬ್ಬಿಸುವ ಹಾಗಿತ್ತು ಈ ಕದನದ ಯೋಚನೆ.

ಆ ಮಾತುಕತೆ ಮನಸ್ಸಿಗೆ ಹಿತವೆನಿಸಿ ಅಪ್ಪು, ತನ್ನ ಕುತೂಹಲಕ್ಕೆ

ಸಮಾಧಾನವನ್ನು ಬಯಸಿ ಇನ್ನೊಂದು ಪ್ರಶ್ನೆ ಕೇಳಿದ:

"ಅವರು ನೋಡೋದಕ್ಕೆ ಹ್ಯಾಗಿರ್ತಾರೆ ಚಿರುಕಂಡ?"

ಚಿರುಕಂಡನಿಗೆ ಅದು ಗೊತ್ತಿರಲಿಲ್ಲ.

"ಹ್ಯಾಗಿರ್ತಾರೋ? ಮಾಸ್ತರು ಹೇಳೇ ಇಲ್ಲ."

'ಅವರ'ನ್ನು ಮರೆತು ಅಪ್ಪು ಮಾಸ್ತರನ್ನು ಕುರಿತು ಯೋಚಿಸಿದ. ಆ ಯೋಚನೆ ಸಿಹಿಯಾಗಿತ್ತು.

"ಚಿರುಕಂಡ, ನಮ್ಮ ಮಾಸ್ತರು ಬಹಳ ಒಳ್ಳೆಯವರು ಅಲ್ವ?"

ಆ ವಿಷಯದಲ್ಲಿ ಯಾವ ಸಂದೇಹವೂ ಇರದಿದ್ದ ಚಿರುಕಂಡ ಉತ್ಸಾಹದ ಸ್ವರದಲ್ಲಿ ಉತ್ತರವಿತ್ತ."ಹೌದು ಮತ್ತೆ !"

ಆ 'ಒಳ್ಳೆಯ ಮಾಸ್ತರು' ಕಯ್ಯೂರಿನಲ್ಲಿ ಪ್ರಾಥಮಿಕ ಅಧ್ಯಯನ ಮುಗಿದೊಡನೆ ಎಳೆಯರಿಬ್ಬರೂ ನೀಲೇಶ್ವರಕ್ಕೆ ಕಲಿಯಲು ಹೋಗಬೇಕೆಂದು ಬಯಸಿದ್ದರು. ಆದರೆ, ಅದು ಸಾಧ್ಯವಾಗಿರಲಿಲ್ಲ. ಅಪ್ಪು ಮನೆಯಲ್ಲಿ ಹಿರಿಯ ಮಗ. ಚಿರುಕಂಡ ಹೆತ್ತವರ ಏಕಮಾತ್ರ ಸಂತಾನ. ಹೊಲದ ಕೆಲಸದಲ್ಲಿ ಹಿರಿಯರಿಗೆ ಅವರು ನೆರವಾಗಬೇಕು. ಓದು ಅಲ್ಲಿಗೇ ನಿಂತುಹೋಗಿತ್ತು.

ಮಾಸ್ತರರ ಮಾತು ಬಂದಾಗಲೆಲ್ಲ ಮುಂದುವರೆಯದೇಹೋದ ತಮ್ಮ ಅಧ್ಯಯನದ ವಿಷಯವೂ ಅದರೊಡನೆ ಬೆರೆಯದೆ ಇರುತ್ತಿರಲಿಲ್ಲ.

ಕೊನೆಯ ಪರೀಕ್ಷೆಯಲ್ಲಿ ಅವರು ಉತ್ತೀರ್ಣರಾಗಿ ಆಗಲೆ ಐದು ವರ್ಷಗಳು ಕಳದಿದ್ದುವು.

ಅನಿವಾರ್ಯವಾಗಿ ಅದರ ನೆನಪಾಗುತ್ತ ಅಪ್ಪು ಹೇಳಿದ:

"ನಾವಿನ್ನೂ ಓದ್ಬೇಕಾಗಿತ್ತು ಅಲ್ವ ಚಿರುಕಂಡ ?"

ಆ ಪ್ರಶ್ನೆ ಗೆ ಉತ್ತರ ಕೊಡುವ ಬದಲು ಚಿರುಕಂಡ, 'ಶ್' ಎನ್ನುತ್ತ ಅಪ್ಪುವಿನ ಕೈಯನ್ನು ಹಿಡಿದು ಜಗ್ಗಿದ.

"ನೋಡು ಬಂತು ಚಾದಂಗಡಿ; ನಿಧಾನವಾಗಿ ಹೋಗೋಣ."

ಅಪ್ಪುವಿನ ಎದೆಗುಂಡಿಗೆಯ ಬಡಿತ ಮತ್ತಷ್ಟು ತೀವ್ರವಾಯಿತು.

"ಅಲ್ಲಿಗೆ ಹೋಗಿ ಏನೂಂತ ಕೇಳೋದು? ದುಡ್ಡಾದರೂ ಇದ್ದಿದ್ದರೆ ಚಾ ಕುಡಿಯೋಕೆ ಬಂದಿದೇವೇಂತ ಹೇಳ್ಬಹುದಾಗಿತ್ತು."

"ಸುಮ್ನೆ ಅಲ್ಲಿಗೆ ಹೋಗಿ ಕೂತಿರೋಣ.... ಮಾಸ್ತರು ಅಲ್ಲೇ ಇದ್ದರೂ ಇರಬಹುದು.

"ಹೂಂ."

"ಯಾರಾದರೂ ಕೇಳಿದರೆ, ಕೂಲಿ ಮಾಡೋಕೆ ನೀಲೇಶ್ವರದ ಸಂತೆಗೆ ಹೊರಟಿದೇವೇಂತ ಹೇಳೋಣ..."

"ಹೂಂ."

೨

ಚಹದಂಗಡಿಯವನು, ಸಮೀಪಕ್ಕೆ ಬಂದ ಆ ಇಬ್ಬರು ಹುಡುಗರನ್ನು ಕುತೂಹಲದಿಂದ ನೋಡಿದ.

"ಬನ್ನಿ ಒಳಕ್ಕೆ. ಕೂತ್ಕೊಳ್ಳಿ."

—ಮುಗುಳುನಕ್ಕು, ತಲೆಯಾಡಿಸಿ, ಆತ ಕರೆದ.

ಅಪ್ಪು ಮತ್ತು ಚಿರುಕಂಡನಿಗೆ ಸಂಕೋಚವೆನಿಸಿದರೂ ಅವರು ಒಳಗೆ ಬಂದು ಮುರುಕು ಬೆಂಚಿನ ಮೇಲೆ ಕುಳಿತುಕೊಂಡರು. ಅಂಗಡಿಯವನು ಯುವಕನಾಗಿದ್ದ. ತಲೆಗೆ ಸುತ್ತಿದ್ದ ಅಂಗವಸ್ತ್ರದೊಳಗಿನಿಂದ ನೀಳವಾದ ಕ್ರಾಪು ತೂರಿಬಂದಿತ್ತು. ಬಹಳಮಟ್ಟಿಗೆ ಬರಿಮೈ. ಸೊಂಟದಿಂದ ಮೊಣಕಾಲಿನವರೆಗೆ, ಕೊಳಕಾದ ಅಡ್ಡಪಂಚೆಯೊಂದು ಅಂಟಿಕೊಂಡಿತ್ತು. ಗೋಡೆಯಿಲ್ಲದ, ಬಿದಿರ ತಡಿಕೆಯಿಂದಲೆ ಸಿದ್ಧವಾಗಿದ್ದ, ಹೊಟೆಲು. ಒಂದು ಮೂಲೆಯಲ್ಲಿ ಸಣ್ಣನೆ ಉರಿಯುತ್ತಿದ್ದ ಸೌದೆ ಒಲೆ. ಅದರ ಮೇಲೊಂದು ಉಗಿಯಾಡುತ್ತಿದ್ದ ತಾಮ್ರದ ಪಾತ್ರೆ. ಪಕ್ಕದಲ್ಲೇ ಮರದ ನಾಲ್ಕು 'ಕಾಲು'ಗಳನ್ನು ನೆಲದೊಳಕ್ಕೆ ಹೂತು, ಅವುಗಳ ಮೇಲೆ ಹಲಿಗೆಗಳನ್ನು ಹಾಸಿ ಮಾಡಿದ್ದ ಮೇಜು. ಆ ಮೇಜಿನ ಮೇಲೆ ನಾಲ್ಕು ಗ್ಲಾಸುಗಳು, ಸಕ್ಕರೆಯ ಚಾಪುಡಿಯ ಡಬ್ಬಗಳು. ಚಾನೀರನ್ನು ಸೋಸಿ ಪುಷ್ಟವಾಗಿದ್ದ ಅರಿವೆ, ಬೇರೊಂದು ಡಬ್ಬ. ಅದರ ಪಕ್ಕದಲ್ಲಿ ಬೀಡಿಯ ಕಟ್ಟುಗಳು.

ಅಪ್ಪು ಮತ್ತು ಚಿರುಕಂಡ, ಅಲ್ಲಿಯೇ ಕಂಬಕ್ಕೊರಗಿ ನೆಲದ ಮೇಲೆ ಕುಳಿತಿದ್ದ ಧಾಂಡಿಗನೊಬ್ಬನನ್ನು ಕಂಡರು. ಒರಟು ಕೂದಲಿನ ಮನುಷ್ಯ, ಬೀಡಿ ಸೇದುತ್ತಲಿದ್ದ. ಆತನದು ದಪ್ಪನೆಯ ಹುಬ್ಬು. ಆ ಹುಬ್ಬುಗಳ ಕೆಳಗೆ ಆಳವಾದ ನೋಟದಿಂದ ತಿವಿದು ನೋಡುವ ಕಣ್ಣುಗಳಿದ್ದುವು.

ಚಹದಂಗಡಿಯವನ ಮುಗುಳು ನಗೆ ಆತ್ಮೀಯವಾಗಿತ್ತು. ಇನ್ನೊಬ್ಬನ ನೋಟ ಪರಕೀಯವಾಗಿತ್ತು.

ಬಂದಿದ್ದವರನ್ನು ನೋಡುತ್ತ ಅಂಗಡಿಯವನು ಹೇಳಿದ:

"ಒಂದೊಂದು ಅಪು ಚಾ ಕೊಡ್ಲಾ?"

ಒಂದು ಲೋಟ ಚಹಾವನ್ನು ಎರಡರಲ್ಲಿ ಸುರಿದರೆ ಅದು ಒಂದೊಂದು

'ಅಪ್ಪು'—ಒನ್ ಬೈ ಟು. ಒಬ್ಬೊಬ್ಬರ ಪಾಲಿಗೆ ಮೂರು ಮೂರು ಕಾಸು.

ತಾಯಿಯನ್ನು ಕೇಳಿ ಒಂದಾಣೆಯೋ ಆರು ಕಾಸೋ ಇಸಕೊಳ್ಳಬೇಕಾಗಿತ್ತು ಎಂದು ಅಪ್ಪುವಿಗೆ ಎನಿಸಿತು... ಚಿರುಕಂಡ, ಮೌನ ಸರಿಯಲ್ಲವೆಂದು ಉತ್ತರವಿತ್ತ:

"ನಮ್ಮ ಹತ್ತಿರ ದುಡ್ಡಿಲ್ಲ."

ಆ ಉತ್ತರ ಅನಿರೀಕ್ಷಿತವಲ್ಲವೆನ್ನುವಂತೆ ಅಂಗಡಿಯವನೆಂದ:

"ಅಷ್ಟೇ ತಾನೆ? ನಮ್ಮ ಅಂಗಡಿಗೆ ದುಡ್ಡಿದ್ದೋರು ಮಾತ್ರ ಬರ್ತಾರೆ ಅಂದ್ಕೊಂಡ್ರಾ?"

ಆ ಮಾತು ಕೇಳಿ ಕುಳಿತಿದ್ದ ಧಾಂಡಿಗ ಗೊಳ್ಳನೆ ನಕ್ಕ. ಎದ್ದು ಒಲೆಯ ಬಳಿಗೆ ಹೋಗಿ ತಾನು ಸೇದುತ್ತಿದ್ದ ಬೀಡಿಯ ತುಂಡನ್ನು ಬೆಂಕಿಗೆ ಎಸೆದು, ಅಂಗಡಿಯವನನ್ನು ನೋಡುತ್ತ ಹೇಳಿದ:

"ನಾನು ಬರ್ತೀನಪ್ಪೋ. ಇವತ್ತಿಂದೂ ಲೆಕ್ಕಕ್ಕೆ ಬರೆದ್ಬಿಡು. ಎಷ್ಟಾಯ್ತು ಒಟ್ಟು?"

"ಐದಾಣೆ. ಸಾಯಂಕಾಲ ಒಂದು ಸೇರು ಅಕ್ಕಿ ತಂದ್ಕೊಡು. ಇಲ್ದಿದ್ರೆ ನಾನು ಉಪವಾಸ ಬಿದ್ದು ಸತ್ಹೋಗ್ತೇನೆ. ನಾಳೆ ಚಾ ಮಾಡಿ ನಿನಗೆ ಕೊಡೋರೇ ಇರೋದಿಲ್ಲ ನೋಡು!"

ಧಾಂಡಿಗ ಮತ್ತೊಮ್ಮೆ ಗಟ್ಟಿಯಾಗಿ ನಕ್ಕು, ಹುಡುಗರನ್ನು ಪುನಃ ತೀವ್ರ ನೋಟದಿಂದ ನೋಡಿ, ಹೊರಟುಹೋದ.

ಅಪ್ಪು ಮತ್ತು ಚಿರುಕಂಡನಿಗೆ, ಈಗ ಹೆಚ್ಚು ಸರಾಗವಾಗಿ ಉಸಿರಾಡ ಬಹುದೆನ್ನಿಸಿತು.

ಅಂಗಡಿಯವನು ಆಗಲೇ ಚಹಾ ಮಾಡತೊಡಗಿದ್ದ. ಹುಡುಗರು ಪರಸ್ಪರರ ಮುಖ ನೋಡಿ ಸುಮ್ಮನಾದರು.

ದೊಡ್ಡ ಡಬ್ಬವನ್ನು ಮುಟ್ಟಿ ತೋರಿಸಿ ಅಂಗಡಿಯವನೆಂದ:

"ಅವಲಕ್ಕಿ ಇದೆ, ತಿನ್ತೀರಾ?"

ಈ ರೀತಿ ಸಾಲ ಮಾಡುವುದು ಚಿರುಕಂಡನಿಗೆ ಸರಿತೋರಲಿಲ್ಲ. ಅಸಮ್ಮತಿ ಸೂಚಿಸುತ್ತ ಆತ ಹೇಳಿದ:

"ಬೇಡ ಬೇಡ! ನಾವು ತಿಂಡಿ ತಿಂದೇ ಬಂದಿದ್ದೇವೆ."

"ಹಾಗೇ ಆಗಲಿ. ಚಾ ತಗೊಳ್ಳಿ. ದುಡ್ಡಿನ ಯೋಚ್ನೆ ಮಾಡ್ಬೇಡಿ ಯಾವಾಗಲಾದರೂ ಕೊಟ್ಟೀರಂತೆ."

ಕಯ್ಯೂರಿನಲ್ಲೂ ಒಂದು ಪುಟ್ಟ ಹೋಟೆಲಿತ್ತು. ಮೂರು ನಾಲ್ಕು ಸಾರೆ ಗುಟ್ಟಾಗಿ ಅಲ್ಲಿಗೆ ಹೋಗಿದ್ದ ಆ ಹುಡುಗರಿಗೆ ಅಂಗಡಿ ಚಹಾದ ರುಚಿ

ಹೊಸತಾಗಿರಲಿಲ್ಲ. ಇಲ್ಲಿಯೂ ಅಷ್ಟೇ ರುಚಿಯಾಗಿತ್ತು ಚಹಾ. ಬಿಸಿಯಾಗಿದ್ದ ಆ ಗುಟುಕು ಪಾನೀಯ ಅವರ ನಾಲಿಗೆಗೆ ಚುರುಕು ಮುಟ್ಟಿಸಿತು.

ಹುಡುಗರು ಫೂ ಫೂ ಎಂದು ಊದುತ್ತ ಆರಿಸಿ ಚಹಾ ಕುಡಿಯುತ್ತಿದ್ದುದನ್ನ ಅಂಗಡಿಯವನು ದಿಟ್ಟಿಸಿದ.

ಅಪ್ಪುವಿಗೆ ಒಮ್ಮೆಲೆ ಅಸಮಾಧಾನವೆನಿಸಿತು. ತಾವು ಬಂದ ಕೆಲಸವೇನು? ಮಾಡುತ್ತಿದ್ದುದೇನು? ಆತ ಚಿರುಕಂಡನನ್ನು ನೋಡಿದ. ಇವನನ್ನೂ ಅದೇ ಯೋಚನೆ ಬಾಧಿಸುತ್ತಿತ್ತು. ಈತ ಅಪ್ಪುವನ್ನು ನೋಡಿದ.

ಹುಡುಗರು ಚಾ ಕುಡಿದು ಗ್ಲಾಸುಗಳನ್ನು ಕೆಳಗಿಡುತ್ತಿದ್ದಂತೆಯೇ ಅಂಗಡಿಯವನೆಂದ:

"ಎಲ್ಲಿಗೆ ಹೊರಟಿದ್ದೀರಾ?"

ಇಬ್ಬರಿಗೂ ಒಮ್ಮೆಲೆ ದಿಗಿಲಾಯಿತು. ಆದರೂ ಚಿರುಕಂಡ ಶಾಂತವಾಗಿರಲು ಯತ್ನಿಸುತ್ತ ಹೇಳಿದ:

"ಹೀಗೇ ಬಂದ್ವಿ."

"ಹಾಗೋ!"

ಅದು, 'ಎಲ್ಲಾ ಗೊತ್ತಿದೆ' ಎನ್ನುವ ನಗೆಯ ಧ್ವನಿ. ಅಪ್ಪುವಿಗೆ ಆ ಧ್ವನಿ ಇಷ್ಟವಾಗಲಿಲ್ಲ.

ಸ್ವಲ್ಪ ಹೊತ್ತಿನ ಮೌನದ ಬಳಿಕ ಅಂಗಡಿಯವನು ಮತ್ತೊಂದು ಪ್ರಶ್ನೆ ಕೇಳಿದ:

"ನಿಮ್ಮ ಹೆಸರು ಚಿರುಕಂಡ ಮತ್ತು ಅಪ್ಪು ಅಲ್ವ?"

ಹುಡುಗರು ಬೆಚ್ಚಿ ಬಿದ್ದರು. ಅಲ್ಲಗಳೆಯುವುದೇ ಯೋಗ್ಯವೆನಿಸಿತು. ಆದರೆ ಮಾತು ಹೊರಡಲಿಲ್ಲ.

ಅಂಗಡಿಯವನು ನಗುತ್ತ ಎಂದ:

"ಹೆದರಬೇಡಿ. ನಿಮ್ಮ ಮಾಸ್ತರು ರಾತ್ರಿಯೇ ಹೇಳಿ ಹೋಗಿದ್ದಾರೆ."

ಇಬ್ಬರ ಮುಖವೂ ಅಗಲವಾಯಿತು. ಉತ್ಸಾಹಗೊಂಡು ಅಪ್ಪು ಕೇಳಿದ:

"ನಮ್ಮ ಮಾಸ್ತರು ಗೊತ್ತಾ ನಿಮಗೆ?"

"ಓಹೋ! ಏನು ಗೊತ್ತಿಲ್ಲೆ ?"

ಚಿರಕಂಡನೆಂದ:

"ನಾವು ಮಾಸ್ತರನ್ನು ನೋಡ್ಬೇಕು. ಅವರು ನಮ್ಮನ್ನು ಇಲ್ಲಿಗೆ ಬರೋದಕ್ಕೆ ಹೇಳಿದ್ರು."

"ಎರಡು ನಿಮಿಷ ಇಲ್ಲೇ ಇರಿ. ನೀವು ಬಂದಿರೋದು ಗೊತ್ತಾದ ತಕ್ಷಣ

ಹೇಳಿಕಳಿಸ್ತಾರೆ."

"ಹ್ಯಾಗೆ ಗೊತ್ತಾಗ್ತದೆ ನಾವು ಬಂದಿರೋದು?"

"ಧಾಂಡಿಗ ಆಗಲೆ ಹೋದನಲ್ಲಾ!"

"ಧಾಂಡಿಗ?"

"ಹೂ. ಧಾಂಡಿಗ ಅಂತಲೆ ನಾವು ಅವನನ್ನು ಕರೆಯೋದು."

"ಅವನು—ಅವನೂ ನಮ್ಮವನೆ?"

ಪ್ರಶ್ನೆಯಲ್ಲಿ ಆಶ್ಚರ್ಯ ಬೆರೆತಿತ್ತು. ಅಂಗಡಿಯವನು ನಕ್ಕು ನುಡಿದ:

"ಯಾಕೆ, ಅವನನ್ನ ನೋಡಿ ಭಯವಾಯ್ತೋ?"

ಅಪ್ಪುವಿಗೆ ಆ ಪ್ರಶ್ನೆ ಮೆಚ್ಚುಗೆಯಾಗಲಿಲ್ಲ. ಧಾಂಡಿಗನ ವಿಷಯ ತಾನು ಹಾಗೆ ಕೇಳಲೇಬಾರದಿತ್ತು, ಎನಿಸಿತು.

"ಭಯವೇನಿಲ್ಲ, ಆದರೂ ಒಂದು ಥರ ಆಯ್ತು."

"ಒಳ್ಳೆಯವನು, ಪಾಪ !"

ಇದೆಲ್ಲವೂ ತಾನು ಕಲ್ಪಿಸಿಕೊಂಡಂತೆಯೇ ಇದ್ದ ಹಾಗೆ ಚಿರುಕಂಡನಿಗೆ ತೋರಿ, ಅವನ ಮುಖದಲ್ಲಿ ಕಳೆಯೇರಿತು.

"ನಾವೇ ಕಯ್ಯೂರಿನೋರೂಂತ ಆತನಿಗೆ ಹ್ಯಾಗೆ ಗೊತ್ತಾಯ್ತು?"

ಪ್ರಶ್ನೆ ಕೇಳಿದ ಚಿರುಕಂಡನಂತೆಯೇ ಅಪ್ಪುವೂ ಆತುರದಿಂದ ಉತ್ತರವನ್ನು ಇದಿರುನೋಡಿದ.

"ಅದೆಲ್ಲಾ ಏನು ದೊಡ್ಡ ವಿಷಯ? ನೀವು ನೋಡೋಕೆ ಹ್ಯಾಗಿದ್ದೀರೀಂತ ಮಾಸ್ತರು ಹೇಳಿಯೇ ಇದ್ರು. ಅಲ್ಲದೆ ಇಂಥಾದ್ದರಲ್ಲೆಲ್ಲ ಧಾಂಡಿಗ ಹಳೇ ಹುಲಿ. ನೀವು ಯಾರೂಂತ ಗೊತ್ತಾದ್ದರಿಂದಲೇ, ದುಡ್ಡಿಲ್ಲಾಂತ ನೀವು ಅಂದಮೇಲೂ ನಾನು ಚಹಾ ಮಾಡೋದಕ್ಕೆ ಹೊರಟೆ. ಅದನ್ನ ನೋಡಿ ಖಾತ್ರಿಯಾಗಿ, ಅವನು ಎದ್ದ."

ಅವರಿಬ್ಬರ ವಿಷಯದಲ್ಲೂ ಅಪ್ಪು ಮತ್ತು ಚಿರುಕಂಡನಿಗೆ ಗೌರವ ಉತ್ಪನ್ನವಾಯಿತು. ಅಪ್ಪುವೆಂದ: "ಮಾಸ್ತರು ಇರೋ ಜಾಗ ಇಲ್ಲಿಂದ ಎಷ್ಟು ದೂರ?"

"ಅದೆಲ್ಲಾ ಕೇಳಬಾರದು. ಹೋದಾಗ ನಿಮಗೇ ಗೊತ್ತಾಗ್ತದೆ."

ಸಣ್ಣ ತಪ್ಪು ಮಾಡಿದ ಬುದ್ಧಿವಂತ ವಿದ್ಯಾರ್ಥಿಯ ಹಾಗಾಯಿತು ಹುಡುಗನ ಸ್ಥಿತಿ.

ಅಂಗಡಿಯವನು ಸಣ್ಣನೆ ನಕ್ಕು, ಡಬ್ಬದ ಬಳಿಯಲ್ಲಿ ಮಡಚಿ ಇರಿಸಿದ್ದ

'ಮಾತೃಭೂಮಿ' ದಿನಪತ್ರಿಕೆಯನ್ನು ಹೊರತೆಗೆದ.

"ಪತ್ರಿಕೆ ಓದುವುದೊಂದು ಹಿರಿತನವೆಂದು ಭಾವಿಸಿದ್ದ ಅಪ್ಪು ಹೇಳಿದ:

"ನಮಗೆ ಪತ್ರಿಕೆ ಓದಿ ಅಭ್ಯಾಸವಿಲ್ಲ."

ಆದರೆ, ಮಾಸ್ತರು ಪತ್ರಿಕೆಯೋದುವುದನ್ನು ದಿನವೂ ಕಾಣುತ್ತಿದ್ದ ಚಿರುಕಂಡನಿಗೆ ತಮಗೆ ಆ ಅಭ್ಯಾಸವಿಲ್ಲವೆಂದು ಒಪ್ಪಿಕೊಳ್ಳುವುದು ಅಭಿಮಾನದ ವಿಷಯವಾಗಿ ತೋರಲಿಲ್ಲ.

ಅಂಗಡಿಯವನು ಮುಂದುವರಿಸಿದ: "ಒಳ್ಳೆಯವರು ನೀವು! ಶಾಲೆಗೆ ಹೋಗಿ ವಿದ್ಯೆ ಕಲಿತದ್ದಾದರೂ ಯಾಕೆ? ಪತ್ರಿಕೆಯೋ ಪುಸ್ತಕವೋ ಓದ್ತಾ ಇದ್ದರೆ ಅಕ್ಷರಜ್ಞಾನವಾದರೂ ಉಳೀತದೆ. ಇಲ್ದಿದ್ರೆ ಮರೆತುಬಿಡ್ತೀರಾ!"

ಅಪ್ಪುವಿಗೂ ಅದು ಹೌದೆನಿಸಿ ಆತ ಖಿನ್ನನಾದ. ಮಾತು ಮುಗಿಸಿ ಅಂಗಡಿಯವನು ಪತ್ರಿಕೆಯನ್ನು ಮುಂದಕ್ಕೆ ಚಾಚಿದಾಗ, ಚಿರುಕಂಡ ಅದನ್ನು ಪಡೆದುಕೊಂಡ.

"ಚಿರುಕಂಡ ಅಂದರೆ ನೀನೇ ಅಲ್ವಾ?"

ಅಂಗಡಿಯವನ ಈ ಪ್ರಶ್ನೆ ಕೇಳಿ ಚಿರುಕಂಡನಿಗೂ ಆಶ್ಚರ್ಯವಾಯಿತು. ಅಪ್ಪುವಿಗೂ ಆಶ್ಚರ್ಯವಾಯಿತು.

"ಹ್ಯಾಗೆ ತಿಳೀತು ನಿಮಗೆ?"

ಅಂಗಡಿಯವನು ನಕ್ಕ.

"ಊಹಿಸಿ ಹೇಳ್ದೆ. ದಪ್ಪಗಿರೋನು ಅಪ್ಪು, ತೆಳ್ಳಗಿರೋನು ಚಿರುಕಂಡ ಇರಬಹುದೂಂತ."

"ಸರಿ ! ಸರಿ !"

ಅಂಗಡಿಯವನ ತಮಾಷೆಯ ಪ್ರವೃತ್ತಿ ಕಂಡು ಹುಡುಗರಿಗೆ ಖುಷಿಯಾಯಿತು. ಚಿರುಕಂಡ ತೆರೆದು ನೋಡುತ್ತಿದ್ದ ಪತ್ರಿಕೆಯತ್ತ ಅಪ್ಪುವೂ ದೃಷ್ಟಿ ಹಾಯಿಸಿದ. ಓದುವುದು ಸುಲಭವಾಗಿತ್ತು. ಆದರೆ ಆ ಪದಗಳೆಲ್ಲ ವಿಚಿತ್ರವಾಗಿದ್ದುವು. ಓದಿದಾಗ ಯಾವ ಅರ್ಥವೂ ಅಪ್ಪುವಿಗೆ ಆಗಲಿಲ್ಲ. ಆತ ದೃಷ್ಟಿಯನ್ನು ಪತ್ರಿಕೆಯಿಂದ ತೆಗೆದು ಅಂಗಡಿಯಾಚೆ ಹೊರಗೆ—ನೋಡಿದ. ಅಲ್ಲೇ ಸ್ವಲ್ಪ ಆಚೆಗೆ, ಗೇರುಬೀಜದ ಗೋಡಂಬಿಯ—ಮರಗಳು, ಒಂದೆರಡು ಮಾವು, ಕಾಡುಮರಗಳು ಕೆಲವು, ಅವುಗಳನ್ನು ಬಳಸಿಕೊಂಡು ಪೊದೆ ಪೊದರುಗಳನ್ನು ಹಾದು ಏರಿ ಇಳಿದು ಹೋಗುತ್ತಿದ್ದ ಕಾಲು ಹಾದಿ... ಅದನ್ನೆಲ್ಲ ನೋಡಿದ ಬಳಿಕ ಅಪ್ಪು ಮತ್ತೆ ಪತ್ರಿಕೆಯನ್ನು ದಿಟ್ಟಿಸಿದ. ಚಿರುಕಂಡ ಪತ್ರಿಕೆಯನ್ನೋದುವುದರಲ್ಲಿ ಮುಳುಗಿದ್ದ

ನಟ್ಟಿದ್ದುದನ್ನು ಕಂಡು ಅವನಿಗೆ ಆಶ್ಚರ್ಯವಾಯಿತು. ಕ್ಷಣಕಾಲ ಅಸಹನೆ ಎನಿಸಿತು. ಮತ್ತೆ, ತನ್ನ ಸ್ನೇಹಿತ ಚಿರುಕಂಡ ಒಳ್ಳೆಯವನು ಬುದ್ಧಿವಂತ ಎನ್ನುವ ಭಾವನೆ, ಯೋಚನೆಗಳನ್ನು ಮಧುರಗೊಳಿಸಿತು. ಆದರೂ ಮೌನವಾಗಿ ತಾನೊಬ್ಬನೇ ಇರಲಾರದೆ ಅಪ್ಪು ಚಿರುಕಂಡನ ತೊಡೆಯನ್ನು ಮೆಲ್ಲನೆ ತಿವಿದು ಪಿಸುದನಿಯಲ್ಲಿ ಕೇಳಿದ:

"ಅವರು ಬಂದಿದ್ದಾರೋ ಏನೂಂತ ಕೇಳಿ ನೋಡು."

"ಊಹೂಂ. ಹಾಗೆಲ್ಲ ಕೇಳಬಾರ್ದು."

ಸುಮ್ಮನಿರೆಂದು ಸೂಚಿಸುವಹಾಗಿತ್ತು ಚಿರುಕಂಡನ ಧ್ವನಿ.

ಅವಲಕ್ಕಿಯ ಡಬ್ಬದ ಬದಿಯಿಂದೊಂದು ಬೀಡಿಯನ್ನು ಕೈಗೆತ್ತಿಕೊಂಡು ಅಂಗಡಿಯವನು ನಗುತ್ತ ಕೇಳಿದ: "ನೀವು ಬೀಡಿ ಸೇದ್ತೀರೇನು?"

"ಇಲ್ಲಪ್ಪ !"

ಹಾಗೆ ಇಬ್ಬರಿಂದಲೂ ಒಂದೇ ರೀತಿಯ ಉತ್ತರ ಬಂತು.

"ಒಳ್ಳೇದು. ಈಗ್ಲೇ ಸೇದಬೇಡಿ. ಇದರಿಂದ ಯಾವ ಸುಖವೂ ಸಿಗೋದಿಲ್ಲ.

ಚಿರುಕಂಡ ಪತ್ರಿಕೆಯನ್ನು ಮಡಚಿ ಬದಿಗಿರಿಸಿ ಕೇಳಿದ:

"ಸುಖ ಇಲ್ದೇ ಇದ್ದ ಮೇಲೆ ನೀವು ಯಾಕೆ ಸೇದ್ತೀರಾ ?"

ಅಂಗಡಿಯವನು ಉತ್ತರ ಕೊಡಲಿಲ್ಲ. ಸುಮ್ಮನೆ ನಕ್ಕು, ಒಲೆಯತ್ತ ಬಾಗಿ ಕೆಂಡಕ್ಕೆ ಬೀಡಿ ಮುಟ್ಟಿಸಿ, ತುಟಿಗಳಿಗಿಟ್ಟು, ಉಸಿರೆಳೆದು ಛಾವಣಿ ನೋಡುತ್ತ ಹೊಗೆಯುಗುಳಿದ.

ಅಪ್ಪುವಿಗೆ, ಮಾಸ್ತರು ಬೀಡಿ ಸೇದುವ ರೀತಿ ನೆನಪಾಯಿತು.

"ನಮ್ಮ ಮಾಸ್ತರು ತುಂಬಾ ಸೇದ್ತಾರೆ, ಅಲ್ಲ?"

ಚಿರುಕಂಡ "ಹೂಂ" ಎನ್ನುವುದಕ್ಕೂ ಬಿಳಿಯ ಅಡ್ಡಪಂಚೆ ಜುಬ್ಬ ತೊಟ್ಟಿದ್ದ ಯುವಕನೊಬ್ಬ ಒಳ ಬರುವುದಕ್ಕೂ ಸರಿಹೋಯಿತು.

ಬಂದವನು ಹುಡುಗರನ್ನೊಮ್ಮೆ ನೋಡಿ ಅಂಗಡಿಯವನನ್ನು ಕೇಳಿದ:

"ಇವರೇ ಏನು ?"

ಅಂಗಡಿಯವನು ಹೌದೆನ್ನುವಂತೆ ತಲೆದೂಗಿದೊಡನೆ ಹುಡುಗರತ್ತ ಆ ಯುವಕ ತಿರುಗಿದ: "ನನ್ನ ಜತೇಲಿ ಬನ್ನಿ."

ಅಪ್ಪು ಮತ್ತು ಚಿರುಕಂಡ ಲಗುಬಗೆಯಿಂದ ಎದ್ದರು.

"ನಾವು ಹೋಗಿ ಬರ್ತೇವೆ" ಎಂದು ಅಂಗಡಿಯವನಿಗೆ ಹೇಳಿದರು.

"ಹೂಂ ಹೋಗಿ ಬನ್ನಿ. ಆಗಾಗ್ಗೆ ಬರ್ತಾನೆ ಇರಿ. ಇನ್ನೊಂದ್ಸಲ ಬಂದಾಗ ಕೇಟ್ಟಿ

ಮಾಡ್ಕೊಡ್ತೇನೆ ಸ್ಪೆಷಲ್ ಚಾ! ಈ ಅಂಗಡೀನ ಮರೀಬೇಡಿ. ನನ್ನ ಹೆಸರು ರಾಮುಣ್ಣ."

ಅಂಗಡಿಯವನ ಈ ಮಾತು ಕೇಳಿ ಹುಡುಗರಿಗೆ ಸಂತೋಷವಾಯಿತು: ಆತನ ಹೆಸರು ತಿಳಿಯಿತೆಂದು ಸಮಾಧಾನವೆನಿಸಿತು.

"ಬರ್ತೇನೆ ರಾಮುಣ್ಣ" ಎಂದು ಆ ಯುವಕ ಆತ್ಮೀಯತೆಯಿಂದ ಮುಗುಳು ನಕ್ಕು ಹೇಳಿದ.

....ಆ ಯುವಕನ ತುಟಿಗಳು ಬಿಗಿದಿದ್ದುವು—ತಿಳಿವಳಿಕೆಯ ಭಂಡಾರಕ್ಕೆ ಬೀಗಮುದ್ರೆಯೊತ್ತಿದ್ದ ಹಾಗೆ. ಆದರೆ ಆ ತುಟಿಗಳ ಮೇಲೆ ಸದಾ ಲಾಸ್ಯವಾಡುತ್ತಿದ್ದ ಮುಗುಳುನಗೆಯೊಂದಿತ್ತು. ಕಣ್ಣುಗಳಲ್ಲಿದ್ದುದು ಆತ್ಮೀಯತೆಯ ನೋಟ.

ಆತ ಮುಂದಾಗಿ ಹಾದಿ ನಡೆದ. ಎತ್ತಿ ಕಟ್ಟಿದ್ದ ಆತನ ಪಂಚೆಯ ಕೆಳಗಿದ್ದ ಬರಿಯ ಕಾಲುಗಳನ್ನೂ ಪಾದಗಳನ್ನೂ ನೋಡುತ್ತ, ನೀಳವಾಗಿ ಹಿಂದಕ್ಕೆ ಸರಿದಿದ್ದ ಆ ತಲೆಗೂದಲನ್ನು ದಿಟ್ಟಿಸುತ್ತ, ಅಪ್ಪುವೂ ಚಿರುಕಂಡನೂ ಆತನನ್ನು ಹಿಂಬಾಲಿಸಿದರು. ನಡೆಯಲಾರದೆ ಹಿಂದೆ ಬೀಳುತ್ತಿರುವರೇನೋ ಎಂದು ಆ ಯುವಕ ಆಗೊಮ್ಮೆ ಈಗೊಮ್ಮೆ ಹಿಂದಕ್ಕೆ ತಿರುಗಿ ಹುಡುಗರನ್ನು ನೋಡುತ್ತಿದ್ದ. ಆದರೆ ನಡಿಗೆಯ ವೇಗದಲ್ಲಿ ಎಳೆಯರು ಸೋಲುವ ಹಾಗೆ ಕಾಣಲಿಲ್ಲ.

ಈ ಮೌನ—ಪಯಣದ ಅನುಭವವೇ ಇಲ್ಲದ ಅಪ್ಪುವಿಗೆ ಏನನ್ನಾದರೂ ಮಾತನಾಡಬೇಕೆಂದು ತೋರಿತು. ಆ ಯುವಕನ ಹೆಸರನ್ನಾದರೂ ಕೇಳೋಣ ಎನ್ನಿಸಿತು. ಆದರೆ, ಮಾತನಾಡಬಹುದೋ ಬಾರದೋ ಎಂದು ಅನಿಶ್ಚಯತೆ ಆತನನ್ನು ಕಾಡಿತು. ಒಂದೆರಡು ಸಾರೆ ಅಪ್ಪು, ತನ್ನ ಭುಜದ ಮೇಲಿನಿಂದ ದೃಷ್ಟಿ ಹಾಯಿಸಿ, ಹಿಂದಿದ್ದ ಚಿರುಕಂಡನನ್ನು ನೋಡಿದ.

ಅಪ್ಪು ಏನನನ್ನೋ ಕೇಳಬಯಸುತ್ತಿದ್ದುದು ಚಿರುಕಂಡನಿಗೆ ಸ್ಪಷ್ಟವಾಯಿತು. ಉಸಿರು, ಮೈಯ ಕುಲುಕಾಟ, ಮುಖಭಾವ ಇಷ್ಟರಿಂದಲೇ ಪರಸ್ಪರ ಮನಸ್ಸಿನೊಳಗಿದ್ದುದನ್ನು ತಿಳಿಯುವಂತಹ ಒಡನಾಡಿಗಳು ಅವರು. ಅಪ್ಪು ತನ್ನನ್ನು ನೋಡಿದಾಗ ಚಿರುಕಂಡ, ತುಟಿಗಳ ಮೇಲೆ ಬೆರಳಿಟ್ಟು ಸುಮ್ಮನಿರೆಂದು ಸನ್ನೆಮಾಡಿದ.

ಅಪ್ಪು ಸುಮ್ಮನಿದ್ದ. ಆದರೆ, ಹತ್ತಿಕ್ಕಿದ ಭಾವನೆಗಳ ಕುದಿತ, ಮೇಲು ಮೇಲಕ್ಕೆ ಏರಿಬರುತ್ತಿದ್ದ ಸೂರ್ಯನ ಪ್ರಭಾವಕ್ಕೆ ಸಿಲುಕಿ, ಮೈ ಬೆವರೊಡೆಯಿತು. ಸದಾಕಾಲವೂ ಬಡಕಲು ಪ್ರಕೃತಿಯ ಒಣಜೀವವಾಗಿರುತ್ತಿದ್ದ ಚಿರುಕಂಡನಿಗೆ ಆ ರೀತಿ ಬೆವರಿನ ಸ್ನಾನವಾಗದೆ ಇದ್ದರೂ ಕಂಕುಳಲ್ಲಿ ಹನಿ ಮೂಡಿತು.

....ಸ್ವಲ್ಪ ಹೊತ್ತಿನಲ್ಲೇ ತಾವು ಕಾಣಲಿದ್ದ ತಮ್ಮ ಮಾಸ್ತರು, ಅವರು ಪರಿಚಯಮಾಡಿಸಿಕೊಡುವೆನೆಂದಿದ್ದ ಆ ದೊಡ್ಡವರು, ಹೊಟೆಲಿನಲ್ಲಿ ಕಂಡಿದ್ದ ಧಾಂಡಿಗ... ಇಷ್ಟು ಜನ. ಅಲ್ಲಿ ಬೇರೆ ಯಾರಿರುವರೋ? 'ಅವರು' ಸರಕಾರದ ಕಣ್ಣು ತಪ್ಪಿಸಿ ದುಡಿಯುತ್ತಿದ್ದ ಹಿರಿಯ ನಾಯಕ. ತಮ್ಮ ಮಾಸ್ತರು ಅವರ ಬಗೆಗೆ ಎಷ್ಟೊಂದು ಆದರದಿಂದ ಮಾತನಾಡಿರಲಿಲ್ಲ! ಮಾಸ್ತರು ಒಮ್ಮೆ ಹೇಳಿದರು: "ಅವರೇ ನನಗೆ ಲೋಕದ ಜ್ಞಾನ ದೊರಕಿಸಿಕೊಟ್ಟವರು.ಅವರೇ ನನ್ನ ತಿಳಿವಳಿಕೆಗೆ ರೂಪುಗೊಟ್ಟವರು." ಲೋಕಜ್ಞಾನವೆಂದರೇನೊ? ತಿಳಿವಳಿಕೆಗೆ ರೂಪು ಗೊಡುವುದೆಂದರೇನೊ? ಅದು ಅಸ್ಪಷ್ಟವಾದ ಮಾತು. ಆದರೆ ಇಷ್ಟು ಮಾತ್ರ ಸ್ಪಷ್ಟ: 'ಅವರು' ಮಾಸ್ತರಿಗಿಂತಲೂ ದೊಡ್ಡವರು...

—ಹಾಗೆಂದು ಯೋಚಿಸುತ್ತ ಅಪ್ಪು ಮತ್ತು ಚಿರುಕಂಡ ನಡೆದರು....

...ಮಾಸ್ತರಿಗಿಂತ ದೊಡ್ಡವರಾದ ಆ ವ್ಯಕ್ತಿ ಹೇಗಿರುವರೋ? ಎತ್ತರದ ದೇಹ, ಬಲವಾದ ತೋಳುಗಳು. ಬೆಲೆಬಾಳುವ ಉಡುಪು. ಹುರಿಮಾಡಿದ ಮೀಸೆ, ಭಯಭಕ್ತಿ ಹುಟ್ಟಿಸುವ ಕಣ್ಣುಗಳು. ಗಂಭೀರವಾದ ಧ್ವನಿ....

ಆ ಕಲ್ಪನೆಯ ಚಿತ್ರ ಭವ್ಯವಾಗಿತ್ತು. ಆ ಚಿತ್ರದೆದುರು ಸಲಿಗೆಯ ಮನೋಭಾವ ಸಾಧ್ಯವೇ ಇರಲಿಲ್ಲ. ಆದರೆ ಮಾಸ್ತರು ಹಾಗಲ್ಲ. ಅವರು ಎಷ್ಟೊಂದು ಒಳ್ಳೆಯವರು! ಅವರನ್ನು ಕಂಡೊಡನೆ ಮೊಳೆಯುವುದು—ಅವರ ಬಳಿಗೆ ಹೋಗಿ ಅವರಿಗೆ ಅಂಟಿಕೊಂಡೇ ಕುಳಿತಿರಬೇಕೆಂಬ ಆಸೆ. ಎಲ್ಲರೂ ಅವರ ಹಾಗೆಯೇ ಇದ್ದರೆ ಎಷ್ಟು ಚೆನ್ನ! ಆದರೆ ಅವರಿಗಿಂತಲೂ ದೊಡ್ಡವರು ಮಾಸ್ತರರ ಹಾಗಿರುವುದು ಸಾಧ್ಯವಿಲ್ಲವಲ್ಲ....

ಇಬ್ಬರ ತಲೆಯಲ್ಲೂ ಸುಳಿಯುತ್ತಿದ್ದುದು ಅಂಥದೇ ಯೋಚನೆ. ಸ್ವಲ್ಪ ಹೆಚ್ಚು, ಇಲ್ಲವೇ ಸ್ವಲ್ಪ ಕಡಮೆ. 'ಏನು ಯೋಚಿಸ್ತಿದ್ದೀಯಾ?' ಎಂದು ಚಿರುಕಂಡನನ್ನು ಕೇಳುವ ಆಸೆ ಅಪ್ಪುವಿಗೆ. ಆದರೆ ಸ್ವರವೆತ್ತಿ ಮಾತನಾಡುವ ಹಾಗಿಲ್ಲ. 'ಶ್ ಸುಮ್ಮನಿರು!' ಎಂದು ಚಿರುಕಂಡನ ಕೈಯಲ್ಲಿ ಛೀಮಾರಿ ಹಾಕಿಸಿಕೊಳ್ಳುವವರು ಯಾರು?

ಆದರೆ ಚಿರುಕಂಡ, ಮೌನದ ಕೋಟೆಯೊಳಗೆ ತನ್ನಷ್ಟಕ್ಕೆ ಮಾತನಾಡುತ್ತಿದ್ದ. ಕಳೆದ ನಾಲ್ಕು ತಿಂಗಳ ಅವಧಿಯಲ್ಲಿ ಎಷ್ಟೊಂದು ಸೋಜಿಗವಾದುದೆಲ್ಲ ನಡೆದುಹೋಗಿತ್ತು! ಸತ್ಯ ಮತ್ತು ನ್ಯಾಯ—ಎಷ್ಟು ಒಳ್ಳೆಯ ಪದಗಳು! ಆ ಮಾತನ್ನೆತ್ತಿದಾಗ ಮಾಸ್ತರ ಕಣ್ಣುಗಳು ಹೇಗೆ ಮಿನುಗುತ್ತಿದ್ದುವು!... ನಮ್ಮ ಹಳ್ಳಿ, ಕರಾವಳಿ ಪ್ರದೇಶ, ಭಾರತದೇಶ, ಅದಕ್ಕಿಂತಲೂ ಹೊರಗೆ ದೂರದೂರದ ವಿವಿಧ

ದೇಶಗಳು.... ಎಲ್ಲೆಲ್ಲೂ ಸತ್ಯ ಮತ್ತು ನ್ಯಾಯದ ಪಕ್ಷ ಹಿಡಿದು ಸೆಣಸುವ ಜನರು....

ನಡೆಯುತ್ತಿದ್ದ ಚಿರುಕಂಡ ಮೌನವಾಗಿದ್ದರೂ ಏಕಾಕಿಯಾಗಿರಲಿಲ್ಲ. ಆತನೊಳಗಿನ ವಿಶಾಲ ಪ್ರಪಂಚದಲ್ಲಿ ಎಷ್ಟೊಂದು ಜನರಿದ್ದರು—ಎಷ್ಟೊಂದು ಜನರು!

ಮೆಲ್ಲನೆ ಬೀಸಿ ಬಂದ ಗಾಳಿ ಮಾನವರ ಮಾತನ್ನು ಹೊತ್ತು ತಂದಿತ್ತು. ಮಾತು ಯಾರದೊ?—ಎಂದು ಚಿರುಕಂಡ ಕಿವಿ ನಿಗುರಿಸಿದ; ತಮ್ಮವರದೇ ಇರಬೇಕು—ಎಂದು ಅಪ್ಪು ಮುಖವಗಲಿಸಿ ದೂರಕ್ಕೆ ದಿಟ್ಟಿಸಿದ.

ಮುಂದಾಗಿ ನಡೆಯುತ್ತಿದ್ದ ಯುವಕನೆಂದ: "ನೋಡಿ, ಅಲ್ಲಿದ್ದಾರೆ."

೩

ತೆಂಗಿನ ತೋಪಿನಲ್ಲಿ, ಮೂಲೆಯಲ್ಲಿ ಬೆಳೆದಿದ್ದೊಂದು ಹಲಸಿನ ಮರದ ನೆರಳಿನಲ್ಲಿ, ಹಸಿರು ಗರಿಕೆ ಹುಲ್ಲಿನ ಮೇಲೆ ನಾಲ್ವರು ಕುಳಿತಿದ್ದರು. ಅವರಲ್ಲಿ ಇಬ್ಬರು, ಅಪ್ಪು ಮತ್ತು ಚಿರುಕಂಡನಿಗೆ ಪರಿಚಿತರು—ಮಾಸ್ತರು ಮತ್ತು ಚಾದಂಗಡಿಯಲ್ಲಿ ಅವರು ಕಂಡಿದ್ದ ಧಾಂಡಿಗ. ಮೂರನೆಯವನೊಬ್ಬ ವಯಸ್ಸಾದ ರೈತ. ನಾಲ್ಕನೆಯಾತ—

'ಅವರು' ಬಂದಿದ್ದ ಹಾಗೆ ತೋರಲಿಲ್ಲ. ತಮ್ಮವರಾದ ಮಾಸ್ತರು ಅಲ್ಲೇ ಇದ್ದರೆಂದು ಅಪ್ಪು ಮತ್ತು ಚಿರುಕಂಡನಿಗೆ ಸಂತೋಷವಾಯಿತು. ಆದರೆ ತಾವು ಕಂಡುಹೋಗಲು ಬಂದಿದ್ದ 'ಅವರು' ಇರಲಿಲ್ಲವೆಂದು ಬೇಸರವಾಯಿತು.

ನಾಲ್ಕನೆಯವರೊಡನೆ ಅದೇನನ್ನೋ ನಗುತ್ತ ಮಾತನಾಡುತ್ತಿದ್ದ ಮಾಸ್ತರು, ಬಳಿಗೆ ಬಂದವರನ್ನು ಗಮನಿಸಿ ಅತ್ತ ತಿರುಗಿ ಕೇಳಿದರು:

"ಬಹಳ ಹೊತ್ತಾಯ್ತೇನ್ರೋ ಬಂದು?"

ಚಿರುಕಂಡ ಮೌನವಾಗಿ ಹಲ್ಲು ಕಿಸಿದ. ಉತ್ತರ ಕೊಡುವುದರಲ್ಲಿ ಮೊದಲಿಗನಾಗಬೇಕೆಂದು ಅಪ್ಪು ಲವಲವಿಕೆಯಿಂದ ಹೇಳಿದ:

"ಬಹಳ ಹೊತ್ತೇನೂ ಆಗಿಲ್ಲ ಸರ್."

"ಬನ್ನಿ ಕೂತ್ಕೊಳ್ಳಿ."

ಅಪ್ಪು ಸಲಿಗೆಯಿಂದ ಮಾಸ್ತರಿಗೆ ಸಮೀಪವಾಗಿಯೂ, ಚಿರುಕಂಡ ಪ್ರೀತಿಯ ಭಕ್ತಿಯಿಂದ ಸ್ವಲ್ಪ ದೂರವಾಗಿಯೂ ಕುಳಿತರು. ಅವರನ್ನು ಕರೆದುತಂದಿದ್ದ ಯುವಕನೂ ಕುಳಿತುಕೊಂಡ.

ಹುಡುಗರ ಕಣ್ಣುಗಳು ಮತ್ತೊಮ್ಮೆ ನೆರೆದಿದ್ದವರ ಮುಖದಿಂದ ಮುಖಕ್ಕೆ

ಸಂಚಾರ ಮಾಡಿದುವು.

ಚಹದಂಗಡಿಯಲ್ಲಿ ತಮ್ಮನ್ನು ನೋಡುತ್ತಿದ್ದಹಾಗೆಯೇ ಈಗಲೂ ತಿವಿದು ನೋಡುತ್ತಿದ್ದ, ಆ ಧಾಂಡಿಗ. ಮುದುಕ ರೈತನ ಮುಖದ ಮೇಲೆ ನಗೆ ಕುಣಿಯುತ್ತಿತ್ತು. ಈ ಮಕ್ಕಳನ್ನು ಕಂಡು ಆತ ಬೀರುತ್ತಿದ್ದುದು ವಾತ್ಸಲ್ಯದ ದೃಷ್ಟಿ. ಆತನ ನಗೆಗೆ ಪ್ರತ್ಯುತ್ತರವಾಗಿ ಗಾಂಭೀರ್ಯ ಸಲ್ಲದೆಂದು ಹುಡುಗರು ಮುಗುಳು ನಕ್ಕರು. ಆದರೆ ಧಾಂಡಿಗನತ್ತ ಅವರು ನೋಡಲಿಲ್ಲ.

ಆ ಇನ್ನೊಬ್ಬರೂ ಯುವಕರಾಗಿಯೇ ಇದ್ದರು. ಶುಭ್ರವಾಗಿದ್ದ ಬಿಳಿಯ ಅಡ್ಡಪಂಚೆ—ಷರಟು. ತೆಳ್ಳಗಿನ ಕರಿಯ ದೇಹ, ಕೆನ್ನೆಯ ಮೂಳೆಗಳು ಎದ್ದು ಕಾಣಿಸುತ್ತಿದ್ದ ಕ್ಷೀಣ ಪ್ರಕೃತಿ. ಶಾಂತವಾದ ಮುಖಮುದ್ರೆ. ಕಣ್ಣುಗಳು ಚಂಚಲವಾಗಿ ಸಜೀವವಾಗಿ, ನೋಟ ಆತ್ಮೀಯವಾಗಿತ್ತು. ಅವರ ಮುಖದ ಮೇಲೆ ಸದಾ ನೆಲೆಸಿತ್ತು—ಸೂಕ್ಷ್ಮವಾದೊಂದು ಮುಗುಳುನಗು.

'ಇವರು ಮಾಸ್ತರರ ಸ್ನೇಹಿತರಿರಬೇಕು. ಅವರು ಇನ್ನು ಬರಬೇಕಷ್ಟೆ' ಎಂಬ ತೀರ್ಮಾನಕ್ಕೆ ಹುಡುಗರು ಬಂದರು.

ಹುಡುಗರನ್ನು ಕರೆದು ತಂದ ಯುವಕನನ್ನು ಉದ್ದೇಶಿಸಿ ಆ ಮಾಸ್ತರರ 'ಸ್ನೇಹಿತ'ರು ಕೇಳಿದರು:

"ನಡೆದು ನಡೆದು ಕಾಲು ಸೋತಿರ್ಬೇಕು, ಅಲ್ವ ಪ್ರಭು?"

"ಹಾಗೇನೂ ಇಲ್ಲ!"

ಆ ಯುವಕ ನಗುತ್ತ ಉತ್ತರವಿತ್ತ. ಆ ಸ್ವರದಲ್ಲಿ ವಿನಯವಿತ್ತು. ಇಂತಹ ಪರೀಕ್ಷೆಯಲ್ಲೆಲ್ಲ ತಾನು ಸೋಲುವವನಲ್ಲ ಎಂಬ ಆತ್ಮಾಭಿಮಾನವಿತ್ತು.

ಅಪ್ಪು ಮತ್ತು ಚಿರುಕಂಡ ಪ್ರಭುವನ್ನು ನೋಡಿದರು. ಪ್ರಭು. ಈತ ತಮ್ಮ ಜನವಲ್ಲವೆಂದು—ರೈತನಲ್ಲವೆಂದು ಚಿರುಕಂಡ—ಸುಲಭವಾಗಿ ತಿಳಿದುಕೊಂಡ. ಪರೀಕ್ಷಿಸಿ ನೋಡಿದಾಗ, ಆ ಯುವಕನ ನಡೆನುಡಿಯಲ್ಲಿ ನಯನಾಜೂಕನ್ನು ಆತ ಕಂಡ. ಪಟ್ಟಣವಾಸಿ, ಸಂದೇಹವಿಲ್ಲ, ಆದರೂ ತಮ್ಮ ಪಕ್ಷದವನು....!

ಆ ಇನ್ನೊಬ್ಬರು, ಹುಡುಗರನ್ನು ಸೂಕ್ಷ್ಮವಾಗಿ ದಿಟ್ಟಿಸಿ ನೋಡುತ್ತಿದ್ದು, ಮಾಸ್ತರರತ್ತ ತಿರುಗಿ ಅಂದರು:

"ಶಿಷ್ಯರು ನಿಮಗೆ ತುಂಬಾ ಅಂಟಿಕೊಂಡಿದ್ದಾರೆ."

ಮಾಸ್ತರು ನಕ್ಕರು. ಆ ನಗೆಯಲ್ಲಿ ಸಲಿಗೆಯಿದ್ದರೂ ಅವರ ಮುಖಭಾವದಲ್ಲಿ ವಿನಯವಿತ್ತು. ಆ ಮಾತಿಗೆ ಉತ್ತರವಾಗಿ ಮಾಸ್ತರು ಏನಾದರೂ ಹೇಳುವರೆಂದು ಹುಡುಗರು ನಿರೀಕ್ಷಿಸಿದ್ದರು. ಆದರೆ ಏನೂ ಹೇಳದೆ ಸುಮ್ಮನಿದ್ದುದನ್ನು ಕಂಡಾಗ

ಹುಡುಗರಿಗೆ ಆಶ್ಚರ್ಯವೆನಿಸಿತು.

ಮೌನ. ಹಸುರು ಗಿಡಮರಗಳನ್ನು ಸವರಿಕೊಂಡು ಮೆಲ್ಲನೆ ಬೀಸುತ್ತಿದ್ದ ತಂಗಾಳಿ, ಮೇಲೆ ಎತ್ತರದಲ್ಲಿ ತೆಂಗಿನಮರದ ಸೋಗೆ ಎಲೆಗಳ ಕಚಕಚ ಸದ್ದು.

ಹುಡುಗರತ್ತ ತಿರುಗಿ ಮಾಸ್ತರು ಹೇಳಿದರು:

"ಇವರೇ ಕಣ್ರೋ, ಪರಿಚಯ ಮಾಡಿಸಿಕೊಡ್ತೇನೇಂತ ಹೇಳಿದ್ದೆ ನೋಡು. ಇವರೇ."

ಅನಿರೀಕ್ಷಿತವಾಗಿ ತಮ್ಮನ್ನು ಉದ್ದೇಶಿಸಿ ಬಂದ ಆ ಮಾತನ್ನು ಕೇಳಿ ಹುಡುಗರಿಗೆ ಆಶ್ಚರ್ಯವಾಯಿತು. ಮಾಸ್ತರರ ದೃಷ್ಟಿ ತೋರಿಸುತ್ತಿದ್ದ ವ್ಯಕ್ತಿಯನ್ನು ಅವರು ಮತ್ತೊಮ್ಮೆ ನೋಡಿದರು. ಎವೆ ಇಕ್ಕದೆ ನೋಡಿದರು. ತಾವು ಕಾಣಲು ಬಂದುದು ಆ ವ್ಯಕ್ತಿಯನ್ನೇ ಎಂದು ತಿಳಿದಾಗ ಅಪ್ಪು ಮತ್ತು ಚಿರುಕಂಡ ಇಬ್ಬರಿಗೂ ನಿರಾಶೆಯಾಯಿತು. ಎತ್ತರದ ದೇಹದ, ಬಲವಾದ ತೋಳುಗಳ, ಬೆಲೆಬಾಳುವ ಉಡುಪಿನ, ಹುರಿಮಾಡಿದ ಮೀಸೆಯ, ಭಯ ಹುಟ್ಟಿಸುವ ಕಣ್ಣುಗಳ, ಗಂಭೀರ ಧ್ವನಿಯ—ತಮ್ಮ ಕಲ್ಪನೆಯ ವ್ಯಕ್ತಿಗೂ ಇವರಿಗೂ ಹೋಲಿಕೆಯೇ ಇರಲಿಲ್ಲ!

ಹುಡುಗರ ಯೋಚನೆಗಳನ್ನು ಊಹಿಸಿಕೊಂಡವರಂತೆ ಆ ವ್ಯಕ್ತಿ ಅಂದರು:

"ಜೋರಾದ ಆಸಾಮಿ ಯಾರಾದರೂ ಇರ್‍ತಾರೇಂತ ಭಾವಿಸಿದ್ದಿರಿ, ಅಲ್ವ?"

ಹುಡುಗರಿಬ್ಬರೂ ಹಲ್ಲುಕಿಸಿದು ನಕ್ಕರು. ಹಾಗೆ ತಪ್ಪಾಗಿ ಯೋಚಿಸಿ ಅಪಹಾಸ್ಯಕ್ಕೆ ಗುರಿಯಾದೆವಲ್ಲ ಎಂದು ಅವರಿಗೆ ನಾಚಿಕೆಯಾಯಿತು. ತಮ್ಮ ಮನಸ್ಸಿನಲ್ಲಿದ್ದುದನ್ನು ಅವರು ಅಷ್ಟು ಸರಿಯಾಗಿ ತಿಳಿದರಲ್ಲ ಎಂದು ಆಶ್ಚರ್ಯವಾಯಿತು. ಮಾಸ್ತರಿಗಿಂತಲೂ ದೊಡ್ಡವರಾದ ವ್ಯಕ್ತಿ ಯಾವ ಭಯಕ್ಕೂ ಆಸ್ಪದವಿಲ್ಲದ ಹಾಗೆ ಸಾದಾ ಮನುಷ್ಯನಾಗಿದ್ದುದನ್ನು ಕಂಡು, ಅವರಿಗೆ ಸಂತೋಷವಾಯಿತು.

ಹುಡುಗರು ಅಪ್ಪು ಯಾರು, ಚಿರುಕಂಡ ಯಾರು, ಎಂಬುದನ್ನು ಮಾಸ್ತರು 'ಅವರಿಗೆ' ತಿಳಿಸಿದರು. ಅವರ ತಾಯಿತಂದೆಯರ ಪರಿಚಯವನ್ನೂ ಮಾಡಿಕೊಟ್ಟರು.

"ಚಿರುಕಂಡ ತಾಯಿತಂದೆಯರ ಒಬ್ಬನೇ ಮಗ. ಇವನಿಗಿರೋದು ಒಳ್ಳೇ ಮೆದುಳು. ಅಪ್ಪುವಿಗಿರೋದು ಒಳ್ಳೇ ಹೃದಯ. ಇವನಿಗಿಬ್ಬರು ತಮ್ಮಂದಿರು ಇದ್ದಾರೆ. ತಂದೆ ಸ್ವಲ್ಪ ಕುಡಿಯೋದು ಹೊಡೆಯೋದು ಜಾಸ್ತಿ...."

ಅವರು ಹಾಗೆ ಹೇಳಿ, ಅಪ್ಪುವಿನತ್ತ ತಿರುಗಿ "ಅಲ್ವೇನೋ?" ಎಂದರು. ಎಲ್ಲರೂ ತನ್ನನ್ನೇ ನೋಡಿ ನಗುತ್ತಿದ್ದಂತೆ ಆತನಿಗೆ ಭಾಸವಾಯಿತು. 'ಇದನ್ನೆಲ್ಲ ಹೇಳದೇ ಇದ್ದರೆ ಏನಾಗುತ್ತಿತ್ತೊ?' ಎಂದು ಮನಸ್ಸು ಮುನಿಸು ತೋರಿತು.

ಅಷ್ಟರಲ್ಲೆ ಮಾಸ್ತರು ಮಧುರವಾದೊಂದು ಬೇರೆಯ ಮಾತನ್ನೂ ಹೇಳಿದರು:

"ಆದರೆ ಇವನ ತಾಯಿ ಬಹಳ ಒಳ್ಳೆಯವರು."

ಅದನ್ನು ಕೇಳಿ, ಸಂತೋಷದಿಂದ ಲಜ್ಜೆಯಿಂದ ಅಪ್ಪುವಿನ ಮುಖ ಬೆಳಗಿತು.

ಇಷ್ಟಾದರೂ ಮಾಸ್ತರು 'ಅವರ' ಹೆಸರು ಹೇಳಿರಲಿಲ್ಲ. 'ಹೇಳೋದನ್ನ ಮರೆತುಬಿಟ್ಟರೇನೋ. ನಾವಾಗಿಯೇ ಕೇಳಿದರೆ ಏನಾಗ್ತದೆ?' ಎಂದು ಒಳ್ಳೆಯ ಮೆದುಳಿನ ಚಿರುಕಂಡ ಯೋಚಿಸಿದ.

ಆದರೆ ಅಂತಹ ಪ್ರಶ್ನೆಗೆ ಅವಕಾಶವೇ ಇಲ್ಲದಂತೆ ಆ ವ್ಯಕ್ತಿಯೇ ಹುಡುಗರನ್ನು ನೋಡುತ್ತ ಅಂದರು:

"ನನ್ನ ಹೆಸರು ನಿಮಗೆ ಗೊತ್ತಿಲ್ಲ ಅಲ್ವೆ?—ಪಂಡಿತ ಅಂತ."

"ಪಂಡಿತರೆಂದರೆ ಅಳಲೇಕಾಯಿ ಪಂಡಿತರಲ್ಲ!"

ಧಾಂಡಿಗ ಆ ನಗೆ ಮಾತನ್ನಾಡಿ, ತಾನೇ ಬಿದ್ದುಬಿದ್ದು ನಕ್ಕ. ಉಳಿದವರಿಗೂ ನಗು ಬಂತು.

ಮಾಸ್ತರು ವಿವರಿಸಿ ಹೇಳಿದರು:

"ಪಂಡಿತರು ಅಂದರೆ, ತಿಳಿದೋರು ಅಂತ ಅಲ್ವ? ಔಷಧಿ ಕೊಡೋರು ಅಂದರೂ ತಪ್ಪೇನೂ ಅಲ್ಲ. ಆದರೆ ಇವರು ಔಷಧಿ ಕೊಡೋದು ಮನುಷ್ಯನ ಕಾಯಿಲೆಗಲ್ಲ—ಸಮಾಜದ ಕಾಯಿಲೆಗೆ! ಅರ್ಥವಾಯ್ತೇನ್ರೋ?"

ಅರ್ಥವಾಯ್ತೇನ್ರೋ?—ಎಂಬುದು ಅವರ ಪ್ರೀತಿಯ ಪ್ರಶ್ನೆ. ಪದೇಪದೇ ಅವರು ಹಾಗೆ ಕೇಳುತ್ತಿದ್ದುದರಿಂದ ಶಾಲೆಯ ಹುಡುಗರು ತಾವೇ ಇದ್ದಾಗ ತಮ್ಮೊಳಗೆ ಅದೇ ಪ್ರಶ್ನೆ ಕೇಳಿಕೊಂಡು ನಗುವುದಿತ್ತು. ಹುಡುಗರ ಆ ನಗೆಯ ಕಾರಣವನ್ನು ಮೊದಲ ಸಾರೆ ತಿಳಿದಾಗಲೂ ಮಾಸ್ತರು ಸಿಟ್ಟಾಗಿರಲಿಲ್ಲ. ಆಮೇಲೆಯೂ ಅವರು ಆಕ್ಷೇಪಿಸಿರಲಿಲ್ಲ.

ಈಗ ಅದರ ನೆನಪಾಗಿ ಅಪ್ಪುವಿಗೆ ನಗು ಬಂತು. ಆದರೆ ಚಿರುಕಂಡ 'ಸಮಾಜದ ಕಾಯಿಲೆಗೆ ಔಷಧಿ ಕೊಡೋ ಪಂಡಿತರು' ಎಂಬ ಅರ್ಥಪೂರ್ಣ ಮಾತಿಗಾಗಿ ತಲೆದೂಗಿದ. ಅದನ್ನು ಹೇಳಿದ ಮಾಸ್ತರರ ಬಗೆಗೆ ಅವನ ಗೌರವ ಹೆಚ್ಚಿತು.

ಪಂಡಿತರು ಅಪ್ಪುವನ್ನುದ್ದೇಶಿಸಿ ಕೇಳಿದರು:

"ನಿನ್ನ ತಮ್ಮಂದಿರ ಹೆಸರೇನು ಅಪ್ಪು?"

ಅದು ಏನೇನೂ ಮಹತ್ವವಿಲ್ಲದ ಪ್ರಶ್ನೆಯಾಗಿ ಅಪ್ಪುವಿಗೆ ತೋರಿತು. ಆದರೂ ಆತ ಹೆಸರು ಹೇಳಿದ. ಅದರ ಜತೆಯಲ್ಲೆ ಒಂದು ಮಾತು ಸೇರಿಸಿದ :

"ಅವರು ನನಗಿಂತ ತುಂಬಾ ಚಿಕ್ಕೋರು."

ಪಂಡಿತರಿಗೆ ನಗು ಬಂತು.

"ಗೊತ್ತಪ್ಪಾ. ಆದರೂ ತಿಳ್ಕೊಂಡಿರೋಣಾಂತ ಕೇಳ್ದೆ. ನಿನ್ನಹಾಗೆ ನಾನೂ ಹಿರೇ ಮಗ. ನನಗೆ ನಾಲ್ಕು ಜನ ತಮ್ಮಂದಿರಿದ್ದಾರೆ, ಕೊನೆಯವನು ನೀಲೇಶ್ವರ ಹೈಸ್ಕೂಲ್ನಲ್ಲಿ ಓದ್ತಿದ್ದಾನೆ. ಉಳಿದೋರೆಲ್ಲ ಈಗ ಪ್ರಾಯಕ್ಕೆ ಬಂದಿದ್ದಾರೆ. ಆದರೂ ನೀನು ಹೇಳೋ ಹಾಗೆಯೇ ಅವರೆಲ್ಲ ನನಗಿಂತ ತುಂಬ ಚಿಕ್ಕೋರು ಅಂತಿಟ್ಕೊ!"

ಮಾಸ್ತರು ಮತ್ತು ಪ್ರಭು ಮುಗುಳುನಕ್ಕರು.

ಅಪ್ಪು ತನ್ನ ನಡತೆ ಅಪಾರ್ಥಕ್ಕೆ ಕಾರಣವಾಗಬಾರದು ಎಂದು, ಮೆಲು ಧ್ವನಿಯಲ್ಲಿ ಹೇಳಿದ:

"ನನ್ನ ಒಬ್ಬ ತಮ್ಮ ಶಾಲೆಗೆ ಹೋಗ್ತಾನೆ. ಚಿಕ್ಕೋನು ಮನೇಲೆ ಇರ್ತಾನೆ. ಮನೆಗೆಲಸ ಮಾಡ್ತಾನೆ. ಕೆಲಸ ಇಲ್ದೇ ಇದ್ದಾಗ ಅಜ್ಜೀ ಜತೆ!"

"ಹಾಗೇನು?"

"ಹೂಂ. ಈಗ ಒಂದು ವಾರದಿಂದ ನಮ್ಮನೇಲಿ ಗಲಾಟೆ ಕಮ್ಮಿ. ಅಜ್ಜಿ ಅವರಿಬ್ಬರನ್ನೂ ಕರಕೊಂಡು ತ್ರಿಕರಪುರಕ್ಕೆ ನಮ್ಮಮ್ಮನ ಮನೆಗೆ ಹೋಗಿದ್ದಾಳೆ."

ಆ ಪಂಡಿತರು ತಾವೂ ಹುಡುಗನಾಗಿ, ಬಲು ಮುಖ್ಯ ವಿಷಯಗಳನ್ನೇ ಅಪ್ಪು ಆಡುತ್ತಿರುವನೆಂಬಂತೆ ಆತನ ಮಾತುಗಳಿಗೆ ಕಿವಿಗೊಟ್ಟರು.

ಚಿರುಕಂಡನಿಗೇನೋ 'ಈ ಅಪ್ಪುವಿನದು ಶುದ್ಧ ತಲೆಹರಟೆ' ಎನ್ನಿಸಿತು.

ಆ ಬಳಿಕ ಪಂಡಿತರು ಶಾಲೆ ಬಿಟ್ಟ ಆ ಹುಡುಗರು ಏನೇನು ಓದುತ್ತಿರುವರೆಂದು ಕೇಳಿದರು.

ತಪ್ಪನ್ನು ಒಪ್ಪಿಕೊಳ್ಳುವ ಧ್ವನಿಯಲ್ಲಿ ಅಪ್ಪು ಹೇಳಿದ:

"ನಮಗೆ ಪೇಪರು ಓದಿ ಅಭ್ಯಾಸವಿಲ್ಲ."

"ಓ. ಅದನ್ನೋದಬಹುದು."

ಪಂಡಿತರು ತನ್ನ ಕಡೆಗೂ ನೋಡಿದರೆಂದು ಚಿರುಕಂಡ ಹೇಳಿದ:

"ಇನ್ನುಮೇಲಿಂದ ಪೇಪರು ತಪ್ಪದೆ ಓದ್ತೇವೆ."

ಪಂಡಿತರು ಮುಗುಳುನಗುತ್ತಲೇ ಹೇಳಿದರು:

"ಹೂನಪ್ಪಾ. ಪತ್ರಿಕೆ ಪುಸ್ತಕ ಎರಡೂ ಓದ್ಬೇಕು. ಓದಿದಷ್ಟೂ ಜ್ಞಾನ ಹೆಚ್ಚಾಗ್ತದೆ; ಓದ್ತಾ ಓದ್ತಾ ವಿಚಾರಮಾಡ್ಬೇಕು. ಇದು ಸರಿಯೆ?—ಅಂತ. ಸರಿಯಾಗಿದ್ದರೆ, ಯಾಕೆ ಸರಿ? ಅಥವಾ ತಪ್ಪೂಂತ ತೋರಿದರೆ ಯಾಕೆ ತಪ್ಪು?—ಅನ್ನೋದನ್ನೆಲ್ಲಾ ಯೋಚಿಸ್ಬೇಕು."

ಉತ್ಸಾಹದಿಂದ ಚಿರುಕಂಡ 'ಹೂಂ'ಗುಟ್ಟಿದ.

"ಹೊಲದಲ್ಲಿ ಭತ್ತದ ಸಸಿ ಸರಿಯಾಗಿ ಬೆಳೀದೇ ಇದ್ರೆ, ಯಾಕೆ ಅಂತ ಯೋಚಿಸ್ತೇವೆ ಅಲ್ವೇನಪ್ಪ?"

"ಹೌದು."

"ಹಾಗೆ ಯೋಚಿಸಿ. ನೀರು ಜಾಸ್ತಿಯಾಗಿದ್ರೆ ಕಡಿಮೆ ಮಾಡ್ತೇವೆ.ಕಡಿಮೆಯಾಗಿದ್ರೆ ನೀರು ಹಾಯಿಸ್ತೇವೆ. ಯಾಕೆ ಬೆಳೆ ಸರಿಯಾಗಿ ಬೆಳೀಲಿಲ್ಲ ಅಂತ ಯೋಚನೆ ಮಾಡೋದ್ರಿಂದ, ಕಾರಣ ಹೊಳೀತದೆ. ಅದು ಗೊತ್ತಾದ ಮೇಲೆ ಕೆಲಸ...."

ಚಿರುಕಂಡ ಹೌದೆಂದು ತಲೆಯಾಡಿಸಿದ. ಅಪ್ಪು ಬಾಯಿ ತೆರೆದು ಪ್ರತಿಯೊಂದು ಮಾತನ್ನೂ ತಿಳಿದುಕೊಳ್ಳಲೆತ್ನಿಸುತ್ತ ಕಿವಿಗೊಟ್ಟು ಕೇಳಿದ.

ಅಷ್ಟರಲ್ಲಿ ಒಬ್ಬ ರೈತ ಎಳನೀರುಗಳ ಗೊಂಚಲನ್ನು ಹೊತ್ತು ತಂದ.

"ಒಂದೆರಡು ತಾ ಅಂದ್ರೆ ಇಷ್ಟೊಂದು ತಂದಿಯಲ್ಲೋ. ಹೊಟ್ಟೆಗೇನೂ ಹಾಕದೆ ಬರೇ ಎಳನೀರು ಕುಡಿಸಿ ಕಳಿಸ್ಬೇಕೂಂತ ಮಾಡಿದೀಯೇನು?"

—ಧಾಂಡಿಗ ಕಪಟ ಗಾಂಭೀರ್ಯ ತೋರುತ್ತ ಆಳವಾದ ದಪ್ಪನಾದ ಸ್ವರದಲ್ಲಿ ಹೇಳಿದ.

ಎಳನೀರು ತಂದ ರೈತನಿಗೇನೂ ಆ ಮಾತು ನಾಟಿದಂತೆ ತೋರಲಿಲ್ಲ. ಆತ ಧಾಂಡಿಗನನ್ನೊಮ್ಮೆ ನೋಡಿ ಹೇಳಿದ:

"ಯಾವಾಗಲೂ ನಿನಗೆ ಹೊಟ್ಟೇದೊಂದೇ ಯೋಚ್ನೆ."

"ತಪ್ಪೇನೋ ಅದರಲ್ಲಿ? ಹೋದಸಲವೇ ಪಂಡಿತರು ಹೇಳ್ಲಿಲ್ವ—ಹೊಟ್ಟೆ ಪ್ರಶ್ನೇನೆ ಮುಖ್ಯ ಅಂತ?"

ಧಾಂಡಿಗನ ಆ ಮಾತಿಗೆ ಎಲ್ಲರೂ ನಕ್ಕರು.

ರೈತ ಎಳನೀರುಗಳ ತುದಿ ಕತ್ತರಿಸಿ ಕುಡಿಯಲು ಸಿದ್ಧಗೊಳಿಸುತ್ತ ಹೇಳಿದ:

"ನೋಡಿ ಪಂಡಿತರೆ, ಧಾಂಡಿಗ ಸೋಮಾರಿಯಾಗ್ತಿದ್ದಾನೆ. ಹೊಟ್ಟೆ ಪ್ರಶ್ನೆ ಬಟ್ಟೆ ಪ್ರಶ್ನೆ ಅಂತ ಮಾತಾಡ್ಕೊಂಡು ಆ ಹೋಟ್ಲಲ್ಲಿ ಕೂತಿರ್ತಾನೆಯೆ ಹೊರತು ಮೂರು ಕಾಸಿನ ಕೆಲಸ ಮಾಡೋದಿಲ್ಲ."

ರೇಗಿದವನಂತೆ ಧಾಂಡಿಗನೆಂದ:

"ಸಾಕು, ಜಾಸ್ತಿ ಬಿಚ್ಬೇಡ !"

ಪಂಡಿತರು ಸ್ವತಃ ತಾವೇ ಹುಡುಗರಿಗೆ ಒಂದೊಂದು ಎಳನೀರು ಕೊಟ್ಟರು. ತೆಗೆದುಕೊಳ್ಳಲು ಹಿಂಜರಿದಾಗ, ಮಾಸ್ತರರ ಪ್ರೋತ್ಸಾಹದ ಸಂಜ್ಞೆ ನೋಟ ಅವರ ನೆರವಿಗೆ ಬಂತು.

ಧಾಂಡಿಗ ಒಂದೇ ಗುಟುಕಿಗೆ ಎಳನೀರು ಕುಡಿದು, ಅದರೊಳಕ್ಕೆ ಬೆರಳು ಹಾಕಿ

ನೋಡಿ, ಅದನ್ನು ಎಸೆದು ಅತೃಪ್ತಿಯ ಧ್ವನಿಯಲ್ಲಿ ಹೇಳಿದ:

"ಬರೇ ಎಳೇದು. ಒಂದು ಚೂರಾದರೂ ತಿರುಳು ಬೇಡ್ವೆ ಅದರಲ್ಲಿ? ಸ್ವಲ್ಪ ಬೆಳೆದಿರೋದು ತಂದಿದ್ರೆ ಏನು ಕೊಳ್ಳೆ ಹೋಗ್ತಿತ್ತೊ?"

ಆ ರೈತನಿಗೆ ಕೋಪ ಬಂತು: "ನಿಮಿಷಕ್ಕೊಂದು ಮಾತಾಡ್ತೀಯಲ್ಲೊ! ಈಗ್ತಾನೇ ಹೇಳ್ದೆ—ಎಳನೀರು ಕುಡಿದ್ರೆ ಊಟಕ್ಕೆ ತೊಂದರೆಯಾಗ್ತದೇಂತ."

ಧಾಂಡಿಗ ಒಂದು ಬೀಡಿ ತೆಗೆದು ಹಚ್ಚಿ, ಹೊಗೆ ಆಕಾಶಕ್ಕೆ ಹೋಗುವುದನ್ನು ನೋಡುತ್ತ ಅಂದ:

"ಆಗಲಿ, ಇನ್ನು ಊಟ ಅದೆಂಥದು ಹಾಕ್ತಿಯೋ ನೋಡೋಣ!"

ಮಾಸ್ತರು ತಮ್ಮ ಬೀಡಿಯ ಕಟ್ಟನ್ನ ಮುಂದಿಟ್ಟು ತಾವು ಒಂದನ್ನೆತ್ತಿಕೊಂಡರು. ಪ್ರಭು ಮತ್ತು ರೈತರೂ ಕೈಹಾಕಿದರು.

ಪಂಡಿತರು ಬೀಡಿ ಮುಟ್ಟಲೇ ಇಲ್ಲ. 'ಅವರು ಬಹುಶಃ ಸಿಗರೇಟು ಸೇದ್ಬಹುದು' ಎಂದು ಚಿರುಕಂಡ ಭಾವಿಸಿದ. ಆದರೆ ಸಿಗರೇಟನ್ನೂ ಅವರು ಸೇದಲಿಲ್ಲ.

ಧಾಂಡಿಗ, ಹುಡುಗರನ್ನು ನೋಡುತ್ತ ಹೇಳಿದ:

"ನೀವು ಸೇದದೇ ಇದ್ರೂ ಒಂದೊಂದು ತಗೋಬೇಕು ಕಣ್ರೋ, ತಗೊಂಡು ನನ್ನಂಥವನಿಗೆ ಕೊಡ್ಬೇಕು."

ಪ್ರಭು ಮುಷ್ಟಿಯಿಂದ ಧಾಂಡಿಗನ ಬೆನ್ನಿನ ಮೇಲೆ ಗುದ್ದಿದ. ಆದರೆ ಆ ದೇಹ ಮಿಸುಕಲಿಲ್ಲ. "ಅಯ್ಯೋ ನನ್ನ ಕೈ ಬೆರಳು ಮುರಿದೋಯ್ತು" ಎಂದು ಗುದ್ದಿದವನೇ ಗೋಳಾಡಿದ.

ಎಳನೀರು ತಂದ ರೈತ ಪಂಡಿತರನ್ನು ನೋಡುತ್ತ ಹೇಳಿದ:

"ನೀವೇ ಪುಣ್ಯವಂತರು. ಬೀಡಿ ಸೇದೋ ಈ ಕೆಟ್ಟ ಹವ್ಯಾಸ ನಿಮಗಿಲ್ಲ."

ಪಂಡಿತರು ಸುಮ್ಮನೆ ನಕ್ಕು. ತಲೆಯ ಹಿಂಭಾಗದಲ್ಲಿ ಅಂಗೈಗಳನ್ನಿರಿಸಿ, ಮರದ ಕಾಂಡಕ್ಕೆ ಒರಗಿಕೊಂಡು ಮೇಲಿದ್ದ ರೆಂಬೆಗಳನ್ನೂ ಎಲೆಗಳನ್ನೂ ನೋಡಿದರು. ಹಣ್ಣೆಲೆಯೊಂದು ಕೆಳಕ್ಕುದುರಿ ಅವರ ಎದೆಯ ಮೇಲೆ ಒರಗಿತು. ಅಪ್ಪು ಕೈಚಾಚಿ ಅದನ್ನೆತ್ತಿ ಬದಿಗೆ ಸರಿಸಿದ.

ದೂರದಿಂದ ಯಾರೋ ಕೆಮ್ಮಿದ ಸದ್ದಾಯಿತು. ಅಷ್ಟರವರೆಗೂ ವಿಗ್ರಹದಂತೆ ಕುಳಿತಿದ್ದ ಧಾಂಡಿಗ ಸರಕ್ಕನೆ ತಿರುಗಿ, ಬರುತ್ತಿದ್ದವರು ಯಾರೆಂದು ನೋಡಿ, ಪಂಡಿತರ ಕಾಲಿಗೆ ತನ್ನ ಬೆರಳು ಸೋಂಕಿಸಿದ. ಅವರು ತಕ್ಷಣವೆ ಪಕ್ಕಕ್ಕೆ ಹೊರಳಿ, ತೋಳುಗಳೆಡೆಯಲ್ಲಿ ಮುಖ ಮರೆಮಾಡಿ, ನಿದ್ದೆಹೋದವರಂತೆ ನಟಿಸಿದರು. ಉಳಿದವರು ಗಾಬರಿಯಾಗಲಿಲ್ಲ.

ಕೆಮ್ಮಿದ ವ್ಯಕ್ತಿ ನಡು ವಯಸ್ಸಿನ ಒಬ್ಬ ಬಡಕಲು ಜೀವಿ, ಆತ ಸಂಶಯದ ದೃಷ್ಟಿಯಿಂದಲೆ ಕುಳಿತಿದ್ದವರನ್ನೆಲ್ಲ ನೋಡುತ್ತ, ಅತ್ತ ಬಂದು ಮೆಲ್ಲನೆ ಹೇಳಿದ:

"ಬಹಳ ಜನ ಸ್ನೇಹಿತರು ಬಂದಹಾಗಿದೆಯಲ್ಲ ಕೇಳಪ್ಪ."

ಎಳನೀರು ತಂದ ರೈತ ಎದ್ದು, ಹೊಸಬನತ್ತ ಸರಿದು, ಸುಳ್ಳಿನ ಸರಮಾಲೆ ನೇಯಲು ಸಿದ್ಧನಾಗುತ್ತ, ಉತ್ತರವಿತ್ತ:

"ಯಾರೂ ಇಲ್ಲಪ್ಪೋ. ನೀಲೇಶ್ವರದಿಂದ ನಮ್ಮ ಹುಡುಗನ ಮಾಸ್ತುಗಳು ಹಳ್ಳಿ ನೋಡೋದಕ್ಕೇಂತ ಬಂದಿದ್ರು. ಇವತ್ತು ಅವರಿಗೆಲ್ಲ ರಜಾ ನೋಡು."

"ಹಾಗೋ? ಯಾರು ಮಲಕೊಂಡಿರೋದು?"

"ಅವರೂ ಒಬ್ರು ಮಾಸ್ಟ್ರೇ."

"ನಿಮ್ಮ ಹುಡುಗ ಎಲ್ಲೋದ?"

"ಇಷ್ಟೊತ್ತಿನವರೆಗೂ ಇಲ್ಲೇ ಇದ್ದ. ಈಗ ಯಾವ ಕಡೆ ಹೋದ್ನೋ ಕಾಣೆ."

ಆ ಮನುಷ್ಯ ಮತ್ತೂ ಸಂಶಯದಿಂದಲೆ ಕುಳಿತವರನ್ನು ನೋಡುತ್ತ ಧಾಂಡಿಗನನ್ನು ಗುರುತಿಸಿ ಹೇಳಿದ:

"ಓಹೋ, ನೀನೂ ಇದ್ದೀಯೋ?"

"ನಾನಿಲ್ಲದ ಜಾಗವಿಲ್ಲ; ನಾನಿಲ್ಲದ ದೇಶವಿಲ್ಲ!"

ಮಹತ್ವದ ತತ್ವವನ್ನು ಬೋಧಿಸುವವನಂತೆ ಧಾಂಡಿಗ ಉತ್ತರವಿತ್ತ.

"ಸರಿ, ಸರಿ. ಒಂದು ಬೀಡಿ ಕೊಡಿ ಯಾರಾದರೂ."

ಬಂದವನು ಮುಂದಕ್ಕೆ ಕೈ ಚಾಚಿದ.

ರೈತ ಕೇಳಪ್ಪನ್ ಒಂದು ಬೀಡಿಯನ್ನೊಯ್ದು ಕೊಟ್ಟ. ಉರಿಯುತ್ತಿದ್ದ ತನ್ನ ಬೀಡಿಯ ಬೆಂಕಿಯಿಂದಲೇ ಅದನ್ನು ಹಚ್ಚಿದ. ಆತ ಹೊಗೆ ಬಿಡುತ್ತ ಮತ್ತಷ್ಟು ಕೆಮ್ಮಿ ಮುಂದೆ ನಡೆಯತೊಡಗಿದ.

"ಜಮೀನ್ದಾರರು ಊರಲ್ಲಿದ್ದಾರೋ?"

ಕೇಳಪ್ಪ ಆತನನ್ನು ಕೇಳಿದ.

"ಹೂನಪ್ಪ. ಹೊಸದುರ್ಗದಿಂದ ನಿನ್ನೆ ಬಂದ್ರು. ಈಗ ಅವರಲ್ಲಿಗೆ ಹೋಗ್ತಾ ಇದ್ದೇನ."

ಆತ ದೂರ ಹೋದಮೇಲೆ, ಧಾಂಡಿಗ ಮತ್ತೊಮ್ಮೆ ಕಾಲಿಗೆ ಬೆರಳು ಸೋಂಕಿಸಿ ಸಂಜ್ಞೆ ಮಾಡಿದ ಬಳಿಕ, ಪಂಡಿತರು ಮಗ್ಗುಲು ಹೊರಳಿ ಎದ್ದರು.

ಪರಿಸ್ಥಿತಿಯ ಗಂಭೀರತೆಯನ್ನು ಆಗಲೇ ಊಹಿಸಿಕೊಂಡಿದ್ದ ಅಪ್ಪು ಮತ್ತು ಚಿರುಕಂಡ ಉಸಿರು ಬಿಗಿಹಿಡಿದೇ ಕುಳಿತಿದ್ದರು. ಕೆಮ್ಮುತ್ತ ಬಂದವನು ತಮ್ಮ

ವಿರೋಧಿ ಎಂಬುದು ಸ್ಪಷ್ಟವಾಗಿತ್ತು. ಎದ್ದು ಕುಳಿತ ಪಂಡಿತರ ಮುಖವನ್ನು ಹುಡುಗರು ಕಾತರದಿಂದ ನೋಡಿದರು.

ಆ ಮುಖದ ಮೇಲೆ ಗಾಬರಿಯ ಯಾವ ಚಿಹ್ನೆಯೂ ಇರಲಿಲ್ಲ. ಹಿಂದಿದ್ದ ಹಾಗೆಯೇ ಮುಖ ಶಾಂತವಾಗಿತ್ತು. ಆ ಮುಗುಳುನಗೆಯೂ ಮಾಯವಾಗಿರಲಿಲ್ಲ.

ಅಪ್ಪು ಮತ್ತು ಚಿರುಕಂಡನತ್ತ ನೋಡಿ ಮಾಸ್ತರು ಕೇಳಿದರು:

"ಅವನು ಯಾರು ಗೊತ್ತಾಯ್ತೇನ್ರೋ?"

ಇಬ್ಬರಿಗೂ ಗೊತ್ತಾಗಿತ್ತು. ಚಿರುಕಂಡ ಹೇಳಿದ:

"ಗೊತ್ತಾಯ್ತು. ಅವನು ಸರ್ಕಾರದ ಕಡೆಯೋನು. ಜಮೀನ್ದಾರರ ಕಡೆಯೋನು."

ಪಂಡಿತರು ನಕ್ಕು ಅಂದರು:

"ಸರಿಯಾಗಿ ಊಹಿಸ್ಕೊಂಡಿದ್ದೀರಿ, ಪರವಾಗಿಲ್ಲ. ಒಬ್ಬ ಮನುಷ್ಯನನ್ನು ನೋಡಿದ ತಕ್ಷಣ ಅವನು ಒಳ್ಳೆಯವನೇ ಕೆಟ್ಟವನೇ ಅಂತ ತಿಳಿಯೋದನ್ನು ಕಲೀಬೇಕು. ಅವನು ಮಾಡುವ ಒಂದು ಮುಖಭಂಗಿ, ಆಡುವ ಒಂದು ಮಾತು, ಅಷ್ಟರಿಂದ್ಲೇ ಆತ ಎಂಥವನು ಅನ್ನೋದನ್ನ ಗೊತ್ಮಾಡ್ಬೇಕು."

ಹುಡುಗರೂ ಇತರರೂ ಆ ಮಾತುಗಳನ್ನು ಕಿವಿಗೊಟ್ಟು ಕೇಳಿದರು.

ಹುಡುಗರತ್ತ ನೋಡುತ್ತ ಪಂಡಿತರೆಂದರು:

"ನೀವು ಕಯ್ಯೂರಿನಿಂದ ಹ್ಯಾಗ್ಬಂದ್ರಿ ಹೇಳ್ಲೇ ಇಲ್ವಲ್ಲಾ...."

ಅಪ್ಪುವಿನ ಮುಖ ಅರಳಿತು. ಚಿರುಕಂಡ ಮತ್ತು ಮಾಸ್ತರರತ್ತ ಆತ ಒಮ್ಮೆ ದೃಷ್ಟಿ ಹರಿಸಿದ. ಆದರೆ ಅವರ ಪ್ರತಿಕ್ರಿಯೆಯ ಹಾದಿ ನೋಡದೆ, ತನ್ನ ಗೆಳೆಯನೊಡನೆ ತಾನು ದಾಟಿಬಂದ ಸಾಹಸ ಕಥೆಯನ್ನು ಇದ್ದಂತೆಯೆ ತಿಳಿಸಿದ... ಹೇಳಬೇಕಾಗಿದ್ದ ವಿಷಯಗಳು ಮುಗಿಯುತ್ತ ಬಂದಾಗ ಅಪ್ಪು ಎಂದ:

"ಚಿರುಕಂಡ ಬಹಳ ಸೂಕ್ಷ್ಮ. ಸ್ವಲ್ಪ ಗಟ್ಟಿಯಾಗಿ ಮಾತನಾಡಿದರೂ ಸಾಕು. ನನ್ನ ಬಾಯಿ ಮುಚ್ಚಿಸ್ತಿದ್ದ. ಪ್ರತಿಯೊಂದು ವಿಷಯದಲ್ಲೂ ಅವನಿಗೆ ದೂರಾಲೋಚನೆಯೇ."

ಸ್ನೇಹಿತನ ಬಾಯಲ್ಲಿ ತನ್ನ ಹೊಗಳಿಕೆ ಕೇಳುತ್ತ ಚಿರುಕಂಡನಿಗೆ 'ಒಂದು ವಿಧ'ವಾಯಿತು. ಪ್ರಶಂಸೆ ಅವನಿಗೆ ಯಾವ ಕಾಲದಲ್ಲೂ ಇಷ್ಟವಿರಲಿಲ್ಲ. ಆದರೆ ಅಪ್ಪು ಹಾಗಲ್ಲ. ಮಾಡಿದ ಕೆಲಸದ ಬಗೆಗೆ ಹೆಮ್ಮೆಪಡುತ್ತ ತನ್ನ ಪ್ರಶಂಸೆಯನ್ನು ತಾನೇ ಮಾಡಿಕೊಳ್ಳುತ್ತಿದ್ದ; ಇತರರನ್ನೂ ಅದೇ ರೀತಿಯಲ್ಲಿ ಮುಕ್ತಕಂಠದಿಂದ ಹೊಗಳುತ್ತಿದ್ದ. ಆದರೆ ಹಾಗೆ ಮಾಡುವಾಗ, ಸತ್ಯಕ್ಕೆಂದೂ ಚ್ಯುತಿ ಬರುತ್ತಿರಲಿಲ್ಲ.

ಅಪ್ಪು ಹೇಳಿದುದನ್ನು ಕೇಳಿ ಎಲ್ಲರಿಗೂ ಸಂತೋಷವಾಯಿತು.

ಪಂಡಿತರು ಆ ಎಳೆಯರನ್ನು ಹೆಮ್ಮೆಯಿಂದ ನೋಡುತ್ತ ಅಂದರು:

"ನಮ್ಮ ಹುಡುಗರು ಯಾವಾಗಲೂ ಹೀಗೆಯೇ ಇರಬೇಕು—ಹೀಗೆಯೇ, ನಮ್ಮಲ್ಲಿ, ಚಿರುಕಂಡನಲ್ಲಿರೋ ಹಾಗೆ ದೂರಾಲೋಚನೆಯೂ ಇರಬೇಕು; ಅಪ್ಪುವಿನಲ್ಲಿರುವಂಥ ಧೈರ್ಯ ಉತ್ಸಾಹಗಳೂ ಇರಬೇಕು. ಅಂತಹ ಗುಣಗಳು ಇದ್ದರೇನೇ ಮನುಷ್ಯ ಕ್ರಾಂತಿಕಾರಿಯಾಗ್ತಾನೆ."

ಕ್ರಾಂತಿಕಾರಿ ಎಂಬ ಪದ ಕೇಳಿ ಅಪ್ಪುವಿಗೂ ಚಿರುಕಂಡನಿಗೂ ಮೈ ಪುಲಕ ಗೊಂಡಿತು. ತಮ್ಮಲ್ಲಿ, ಕ್ರಾಂತಿಕಾರಿಗಳಿಗಿರಬೇಕಾದ ಒಳ್ಳೆಯ ಗುಣಗಳಿವೆ ಎಂದು ತಿಳಿದು, ಅವರಿಗೆ ಆನಂದವಾಯಿತು.

ಅಷ್ಟರಲ್ಲೇ ಕೇಳಪ್ಪನ ಏಳು ವರ್ಷದ ಮಗಳು ಓಡುತ್ತ ಬಂದಳು.

"ಏನೇ ಅದು?"

ತಂದೆ ಕೇಳಪ್ಪ ಮಗಳನ್ನು ಪ್ರಶ್ನಿಸಿದ.

ಅಷ್ಟೊಂದು ಜನ ಅಲ್ಲಿದ್ದರೆಂದು ಆ ಹುಡುಗಿ ಸಂಕೋಚಗೊಂಡು, ತಂದೆಯ ಬಳಿ ಸಾರಿ, ಮೆಲ್ಲನೆ—ಆದರೆ ಎಲ್ಲರಿಗೂ ಕೇಳಿಸುವಂತೆ—ಹೇಳಿದಳು:

"ಅಮ್ಮ ಹೇಳಿದ್ಲು—ಅಡುಗೆ ತಯಾರಾಗಿದೆಯಂತೆ. ಊಟದ ಹೊತ್ತಾಗಿದ್ರೆ ಎಲ್ರೂ ಬರ್ಬೌದಂತೆ. ಹೋಗಿ ಹೇಳು ಅಂದ್ಲು."

ಕೇಳಪ್ಪ ಪಂಡಿತರ ಮುಖ ನೋಡಿದ. ಪಂಡಿತರೆದ್ದು, ಉಳಿದವರಿಗೆಲ್ಲ 'ಏಳಿ' ಎಂದರು. ಹುಡುಗಿಯ ಕೈಹಿಡಿದು, ಅವರು ಕೇಳಿದರು:

"ಅದ್ಯಾತರದೆ ನಾಚಿಕೆ? ಹೋದಸಲ ನಿಮ್ಮನೆಗೆ ಬಂದಾಗ ನೀನು ಅಷ್ಟೊಂದು ಮಾತಾಡಿದ್ದೆ. ಈಗಾಗ್ಲೆ ಮರೆತ್ಹೋಯ್ತೆ?"

ಹುಡುಗಿ ನಾಚಿಕೊಂಡರೂ ಪಂಡಿತರ ಹಿಡಿತದಿಂದ ಬಿಡಿಸಿಕೊಳ್ಳಲಿಲ್ಲ. ಅವರ ಜತೆಯಲ್ಲೆ ನಡೆದಳು.

ಅಪ್ಪು ಮತ್ತು ಚಿರುಕಂಡ ಹಿಂದಿದ್ದುದನ್ನು ಕಂಡು ಪಂಡಿತರೆಂದರು:

"ಎಲ್ಲಿ ಕಯ್ಯೂರು ವೀರರು ಎದುರಿಗ್ಬನ್ನಿ. ಮೊದಲೇ ನಡೀರಿ."

ತಮ್ಮನ್ನು ಕುರಿತು ಹಾಗೆ ಹೇಳಿದುದಕ್ಕಾಗಿ ಹುಡುಗರು ಹೆಮ್ಮೆಪಡುತ್ತ ಕೇಳಪ್ಪನನ್ನನುಸರಿಸು ಮುಂದೆ ಸಾಗಿದರು.

....ಅವರಿಗಾಗಿ ಕಾದಿದ್ದುದು ಹಬ್ಬದ ಅಡುಗೆಯಲ್ಲ, ಬಡವರ ಹಟ್ಟಿಯ ಸಾದಾ ಊಟ. ಅಪ್ಪುವಿನ ತಾಯಿಗೆ ಅದಕ್ಕಿಂತ ರುಚಿಕರವಾದ ಅಡುಗೆ ಮಾಡುವುದು ಬರುತ್ತಿತ್ತು. ಆದರೆ ಅಪ್ಪು ಒಂದಕ್ಕೊಂದನ್ನು ಹೋಲಿಸ ಬಯಸಲಿಲ್ಲ. ಚಿರುಕಂಡನಂತೂ ಊಟದಲ್ಲಿನ ತರತಮಗಳ ಯೋಚನೆಯನ್ನು ಎಂದೂ

ಮಾಡಿದವನಲ್ಲ.... ಊಟಕ್ಕಿಂತಲೂ ಮುಖ್ಯವಾಗಿ, ಸ್ನೇಹದ ಬಾಂಧವ್ಯದ ವಾತಾವರಣ ಅವರೆಲ್ಲರನ್ನೂ ಹರ್ಷಚಿತ್ತರನ್ನಾಗಿ ಮಾಡಿತು.

ಕೇಳಪ್ಪನೇ ಅಳುಕುತ್ತ ಪ್ರಭುವನ್ನು ಕುರಿತು ಕೇಳಿದ:

"ಇಂಥ ಊಟ ನಿಮಗೆ ರುಚಿಸ್ತದೋ ಇಲ್ಲವೋ?"

"ನಮ್ಮ ಮನೆ ಅಡುಗೆಗೆಲ್ಲ ಈ ರುಚಿ ಎಲ್ಲಿಂದ ಬಂತು?"

ಎಂದ ಪ್ರಭು, ನಗುತ್ತ.

ಪಂಡಿತರೂ ನಕ್ಕರು.

"ಅಡುಗೆ ಚೆನ್ನಾಗಿ ಮಾಡಿದೀರಮ್ಮಾ"

ಎಂದು, ಮುಖವರಳಿಸಿ ನಿಂತಿದ್ದ ಮನೆಯಾಕೆಯನ್ನು ಅವರು ಹೊಗಳಿದರು.

ಆಕೆ ಮತ್ತೂ ಒಂದೆರಡು ಸೌಟು ಅನ್ನ ತಂದು ಧಾಂಡಿಗನಿಗೆ ಬಡಿಸಿದಳು. ಆತ ಗಂಭೀರವಾಗಿಯೇ ನುಡಿದ:

"ಇನ್ನು ಊಟ ಮಾಡಮ್ಮ ನೀನು. ಬೇಕಾದರೆ ನಿನ್ನ ಊಟ ಆಗೋವರೆಗೂ ಕಾದಿರ್ತೇನೆ. ನನಗೇನೂ ಅವಸರವಿಲ್ಲ."

ಉಳಿದವರು ಆ ಮಾತು ಕೇಳಿ ನಕ್ಕರು.

ಊಟ ಮುಗಿಯಿತು. ಕೆಲವರು ವೀಳ್ಯ ಜಗಿದರು. ಕೆಲವರು ಬೀಡಿ ಸೇದಿದರು. ಕೆಲವರು ಎರಡನ್ನೂ ಮಾಡಿದರು. ಪಂಡಿತರೊಬ್ಬರೆ ಹುಲ್ಲು ಹೊದಿಸಿದ್ದ ಛಾವಣಿಯ ಬಡಬೊಂಬುಗಳನ್ನೆಣಿಸುತ್ತ ಸುಮ್ಮನಿದ್ದರು. ಹುಡುಗರಿಬ್ಬರು, ಅವರ ಮೇಲೆ ತಾವು ನೆಟ್ಟ ದೃಷ್ಟಿಯನ್ನು ಕದಲಿಸಲಿಲ್ಲ.

ಒಮ್ಮೆಲೆ ಪಂಡಿತರು ಕೇಳಿದರು:

"ಬೇರೆ ಯಾರಾದರೂ ಬರ್ತಾರಾ?"

ಹೆಚ್ಚಾಗಿ ಮೌನವಾಗಿಯೇ ಇರುತ್ತಿದ್ದ ವಯಸ್ಸಾದ ರೈತ ಹೇಳಿದ:

"ಊಟ ಮಾಡ್ಕೊಂಡು ಬರ್ತೇವೇಂತ ಹೇಳಿದೋರು ಇಬ್ಬರಿದ್ದಾರೆ."

ಸ್ವಲ್ಪ ಹೊತ್ತಿನಲ್ಲೆ ಆ ಇಬ್ಬರೂ ಒಬ್ಬೊಬ್ಬರಾಗಿ ಬಂದರು.

ಮಾಸ್ತರತ್ತ ನೋಡಿ ಪಂಡಿತರು ಕೇಳಿದರು:

"ಶುರು ಮಾಡೋಣ್ವ ಇನ್ನು?"

"ಹೂಂ."

ಅದೇನೆಂದು ಅಪ್ಪುವಿಗೆ ಅರ್ಥವಾಗಲಿಲ್ಲ. ಭಾಷಣವಿರಬಹುದು ಎಂದು ಚಿರುಕಂಡ ಭಾವಿಸಿದ. ಹಿಂದೊಮ್ಮೆ ತಂದೆಯ ಜತೆಯಲ್ಲಿ ನೀಲೇಶ್ವರದ ಪೇಟೆಗೆ ಹೋಗಿದ್ದಾಗ, ಬಿಳಿಯ ನೀಳ ಅಂಗಿ ತೊಟ್ಟದ್ದ, ತಲೆಯ ಮೇಲೆ ಬಿಳಿಯ ಟೋಪಿ

ಧರಿಸಿದ್ದ ಒಬ್ಬರು, ಸುತ್ತುವರಿದಿದ್ದ ಜನರು ನಡುವೆ ನಿಂತು, ಭಾಷಣ ಕೊಡುವುದನ್ನು ಆತ ಕಂಡಿದ್ದ. ಅದೇನೋ ತಮಾಷೆ ಇರಬಹುದೆಂದು ಬಾಗಿ ಇಣಕಿ ನೋಡಿದ್ದ ತಂದೆಗೂ ಮಗನಿಗೂ ನಿರಾಶೆಯಾಗಿತ್ತು. ಪಂಡಿತರೂ ಈಗ ಎದ್ದುನಿಂತು ಹಾಗೆಯೇ ಭಾಷಣ ಕೊಡುವರೇನೋ ಎಂದು ಚಿರುಕಂಡ ಕುತೂಹಲದಿಂದ ಇದಿರು ನೋಡಿದ.

ಪಂಡಿತರು ಎದ್ದು ನಿಲ್ಲಲಿಲ್ಲ. ಕುಳಿತಲ್ಲೆ ಮಾತನಾಡಿದರು. ತೋಳು ಕೈ ಬೀಸಿ, ಮುಷ್ಟಿ ಬಿಗಿದು, ಅಂಗವಿನ್ಯಾಸಗಳನ್ನು ಮಾಡಲಿಲ್ಲ. ಸರಳವಾಗಿ ಒಬ್ಬರೊಡನೊಬ್ಬರು ಸಂಭಾಷಣೆ ನಡೆಸುವಂತೆ, ನಡುನಡುವೆ ತಡೆದು ನಿಂತು ಯಾವುದಾದರೂ ಒಂದಂಶವನ್ನು ಹೆಚ್ಚಾಗಿ ವಿವರಿಸುತ್ತ, ಮಾತುಗಳನ್ನಾಡಿದರು.

ಲೋಕ ಸೃಷ್ಟಿಯಾಗಿ, ಈ ಲೋಕದಲ್ಲಿ ಮನುಷ್ಯ ಹುಟ್ಟಿದ ಕಥೆ . ಮಾನವರು ಆರಂಭದಲ್ಲಿ ಬದುಕಿದ ರೀತಿ.... ಆಗಿನ ಸಮಾಜ.... ಬಳಿಕ ಸಮಾಜದಲ್ಲಿ ಉಂಟಾದ ಗುಂಪುಗಳು.... ಆ ಗುಂಪುಗಳೊಳಗೆ ಕದನ... ಮನುಷ್ಯ ಮನುಷ್ಯನನ್ನು ಗುಲಾಮನನ್ನಾಗಿ ಮಾಡಿಕೊಂಡುದು.... ಬಲ ಉಳ್ಳವರು ಮತ್ತು ಬಲವಿಲ್ಲದವರು.... ಹಸಿದವರು ಮತ್ತು ಕಸಿದವರು... ಮಣ್ಣಿಗಾಗಿ ಹೋರಾಟ... ಮಾನವ ವಿಶೇಷ ಜ್ಞಾನವನ್ನು ಸಂಪಾದಿಸಿದ ಬಗೆ.... ಯಂತ್ರಗಳ ರಚನೆ... ವರ್ಗ ಸಂಘರ್ಷ... ಮುಂದುವರಿದ ದೇಶದ ಜನ ವ್ಯಾಪಾರಕ್ಕೆಂದು ತಕ್ಕಡಿ ಹಿಡಿದು ಲೋಕದ ನಾನಾ ಕಡೆಗೆ ಹೋದುದು... ಅಲ್ಲಿ ಆ ದೇಶಗಳನ್ನು ಪದಾಕ್ರಾಂತ ಮಾಡಿದುದು... ಭಾರತ ಪರತಂತ್ರವಾದ ಕರ್ಮಕಥೆ.... ಎಡೆಬಿಡದೆ ಇಲ್ಲಿ ನಡೆದ ಸುಲಿಗೆ... ಕಳೆದ ಶತಮಾನದ ಕೊನೆಯಲ್ಲಿ ನಡೆದ ಪ್ರಥಮ ಸ್ವಾತಂತ್ರ್ಯಸಮರ.... ಜನತೆಯ ಸೋಲು.... ಮತ್ತೆ ಕ್ರಾಂತಿಯ ಕಿಡಿಗಳು.... ಈ ಶತಮಾನದಲ್ಲಿ ರಷ್ಯಾ ದೇಶದಲ್ಲಿ ಜಗತ್ತಿನ ಆರರಲ್ಲೊಂದು ಭಾಗದಲ್ಲಿ ದುಡಿಯುವ ಕಾರ್ಮಿಕನೇ ಆಳುವ ಪ್ರಭುವಾದದ್ದು.... ವಿದೇಶೀಯ ಸುಲಿಗೆಗಾರರಿಗಿದಿರು ನಮ್ಮಲ್ಲೂ ಬೆಂಕಿ ಭುಗಿಲೆಂದುದು.... ರಾಷ್ಟ್ರೀಯ ಸಂಘಟನೆ.... ಜನತೆಯ ಮಹಾ ಹೋರಾಟಗಳು.

ಹುಡುಗರಿಗೆ ಅದೆಲ್ಲವೂ ಅರ್ಥವಾಗಲಿಲ್ಲ. ಚಿರುಕಂಡ ಒಂದೊಂದು ಪದವನ್ನೂ ಆತುರದಿಂದ ಕೇಳಿದ. ಅರ್ಥವಾದುದು ಮನಸ್ಸಿಗೆ ಇಳಿಯಿತು. ಅರ್ಥವಾಗದುದು ನೆನಪಿನಲ್ಲಿ ಉಳಿಯಿತು. ಅಪ್ಪುವಿಗೆ ಹಾಗಲ್ಲ. ಆತನೆದುರು ಹರಿದುಹೋಗುತ್ತಿದ್ದುದೊಂದು ವಾಕ್‌ಪ್ರವಾಹ. ಒಮ್ಮೊಮ್ಮೆ ಪ್ರಶಾಂತ ಹೊನಲು ಮತ್ತೆ ಒಮ್ಮೊಮ್ಮೆ ಧುಮುಧುಮಿಸುವ ಜಲರಾಶಿ—ಎಲ್ಲವೂ ತೇಜಸ್ವಿನಿ ನದಿಯ ಹಾಗೆ. ಆತನಿಗೆ ಸ್ಪಷ್ಟವಾದುದೊಂದೇ—ಜನರು ಕಷ್ಟದಲ್ಲಿದ್ದಾರೆ. ಜನರಿಗೆ

ಅನ್ಯಾಯವಾಗಿದೆ. ನಾವು ಗುಲಾಮರು. ಪರಕೀಯರು ನಮ್ಮನ್ನು ಆಳುತ್ತಿದ್ದಾರೆ. ನಾವು ಹೋರಾಡಿ ಗುಲಾಮಗಿರಿಯಿಂದ ಮುಕ್ತರಾಗಬೇಕು.

ಪಂಡಿತರ ಸ್ವರ ಈಗ ಏಕಪ್ರಕಾರವಾಗಿ ಕೇಳಿಸಿತು:

"ದುಡಿಯುವ ಜನರೆಲ್ಲ ಒಂದಾದರೆ, ಸುಲಿಯುವ ಜನರೆಲ್ಲ ಸೋತು ಹೋಗ್ತಾರೆ. ನಮ್ಮನ್ನು ಬಿಗಿದಿರುವ ಬೇಡಿಗಳು ಪುಡಿಪುಡಿಯಾಗ್ತವೆ. ನಮ್ಮ ದೇಶದಲ್ಲಿ ಜನಕ್ರಾಂತಿ ಬೇರೆಯಲ್ಲ. ನಮ್ಮ ರೈತರೆಲ್ಲ ಎಚ್ಚರವಾಗ್ಬೇಕು, ಒಗ್ಗಟ್ಟಾಗ್ಬೇಕು.... ಹಳ್ಳಿಹಳ್ಳಿಯಲ್ಲಿ ರೈತಸಂಘ ಸ್ಥಾಪಿಸ್ಬೇಕು...."

ಅಂತಹ ಸಂಘಟನೆಯ ಮೂಲಕ ನಡೆಯುವ ಹೋರಾಟವನ್ನು ಕಲ್ಪಿಸುತ್ತ ಅಪ್ಪು ಕುಳಿತ.

ಒಮ್ಮೆಲೆ ನಾಲ್ಕಾರು ಸ್ವರಗಳು ಕೇಳಿಸಿದಂತಾಗಿ ಅಪ್ಪು ಬೆಚ್ಚಿಬಿದ್ದು ಪಂಡಿತರತ್ತ ನೋಡಿದ. ಅವರೀಗ ಮಾತನಾಡುತ್ತಿರಲಿಲ್ಲ. ಯಾವಾಗ ಅವರು ಮಾತು ನಿಲ್ಲಿಸಿದರೆಂಬುದೇ ಆತನಿಗೆ ತಿಳಿಯದೆಹೋಗಿತ್ತು. ಅಪ್ಪು ಚಿರುಕಂಡನ ಮುಖ ನೋಡಿದ. ಆತನ ಲಕ್ಷ್ಯ ಇತರರ ಮಾತುಗಳ ಮೇಲೂ ನೆಟ್ಟಿತ್ತು. ಅಪ್ಪು ತಾನೂ ಅತ್ತ ಕಿವಿಗೊಟ್ಟ.

ಆಗ ಮಾಸ್ತರು ಮಾತನಾಡಿದರು:

ಮೊದಮೊದಲು ಗುಪ್ತವಾಗಿಯೇ ಪ್ರಚಾರ. ಹೆಚ್ಚು ರೈತರ ಬೆಂಬಲ ಪಡೆದ ಮೇಲೆ ಬಹಿರಂಗವಾಗಿ ರೈತಸಂಘದ ಸ್ಥಾಪನೆ. ಜನಜಾಗೃತಿಯನ್ನುಂಟು ಮಾಡುವುದು; ರಾಜಕೀಯ ಜ್ಞಾನ ಪಡೆಯುವುದು. ಅದಕ್ಕೋಸ್ಕರ ಮೊದಲು ಹಳ್ಳಿಗೊಂದು ದಿನಪತ್ರಿಕೆ ತರಿಸಬೇಕು. ಓದು ಬರುವವರು ಅದನ್ನೋದಿ ಇತರರಿಗೆ ಹೇಳಬೇಕು. ಆಮೇಲೆ ಹಳ್ಳಿಗೋಸ್ಕರ ಒಂದು ವಾಚನಾಲಯ ತೆರೆಯಬೇಕು... ಆಗ, ದೇಶದಲ್ಲಿ ಹೋರಾಟವಾದಾಗ ರೈತರು ಭಾಗವಹಿಸುವುದು ಸಾಧ್ಯ. ಆಳುವವರ ಲಾಠಿಗುಂಡುಗಳನ್ನು ಇದಿರಿಸುವುದು ಸಾಧ್ಯ... ಸ್ವಾತಂತ್ರ್ಯ ಬಾವುಟವನ್ನು ಹಾರಿಸಿ ರಕ್ಷಿಸುವುದು ಸಾಧ್ಯ...

ಚಿರುಕಂಡ ಆ ಮಾತುಗಳನ್ನು ಒಂದನ್ನೂ ಬಿಡದೆ ಕೇಳಿದ. ಅಪ್ಪು ಮತ್ತೆ ಹೋರಾಟವನ್ನು ಚಿತ್ರಿಸುವ ಭಾವಸಮಾಧಿಯಲ್ಲಿ ಮುಳುಗಿದ.

ಕೊನೆಗೊಮ್ಮೆ ಮಾತು ಮುಗಿಯಿತು. ಪಂಡಿತರ ಮೇಲೆಯೇ ದೃಷ್ಟಿ ನೆಟ್ಟಿದ್ದ ಅಪ್ಪು, ಅವರು ವೃತ್ತಾಕಾರದ ಗಡಿಯಾರವೊಂದನ್ನು ಜೇಬಿನಿಂದ ಹೊರತೆಗೆದು ಹೊತ್ತು ಎಷ್ಟಾಯಿತೆಂದು ನೋಡುತ್ತಿದ್ದುದನ್ನು ಕಂಡ. ಪಕ್ಕದಲ್ಲಿದ್ದ ಚಿರುಕಂಡನನ್ನು ಬೆರಳಿನಿಂದ ತಿವಿದು ಆತನಿಗೂ ಅದನ್ನು ತೋರಿಸಿದ.

ಪಂಡಿತರು ಮಾಸ್ತರೊಡನೆ ಮೆಲ್ಲನೆ ಅಂದರು:

"ಆಗಲೇ ಘಂಟೆ ಐದಾಯ್ತು. ಆರೂವರೆಗೆಲ್ಲ ಕತ್ತಲಾಗ್ತದೆ ಅಲ್ವ?"

"ಹೌದು; ಹೊರಟ್ಬಿಡೋಣ ಇನ್ನು."

ಅಲ್ಲಿದ್ದವರಲ್ಲಿ ಒಂದು ತಂಡ ಹೊರಟುಹೋದಮೇಲೆ, ಪಂಡಿತರೂ ಉಳಿದವರೂ ಎದ್ದರು. ಗಂಡಸರು ಆಡುತ್ತಿದ್ದ ಮಾತುಗಳನ್ನೆಲ್ಲ ಅಡುಗೆಯ ಮೂಲೆಯಿಂದಲೆ ಕೇಳುತ್ತಿದ್ದ ಮನೆಯೊಡತಿ, ಚಹ ಮಾಡಲೆಂದು ಚಡಪಡಿಸಿದಳು. ಮಾತು ಅರ್ಥವಾಗದೆ ತನ್ನ ಬಳಿಯಲ್ಲೆ ನಿದ್ದೆಹೋಗಿದ್ದ ಮಗಳನ್ನು ಅವಳು ಎಬ್ಬಿಸಿದಳು. ಚಹ ತಡವಾಗುತ್ತದೆಂದು, "ಇಷ್ಟು ಹೊತ್ತು ಸುಮ್ಮಗೆ ಇದ್ದೆಯಲ್ಲ.... ಏನೂ ಬುದ್ಧಿ ಇಲ್ಲ ನಿನಗೆ!" ಎಂದು ಕೇಳಪ್ಪನ್ ಕೂಗಾಡಿದ.

ಪಂಡಿತರು ಮೃದುವಾದ ಸ್ವರದಲ್ಲಿ ಅಂದರು:

"ಈಗೇನೂ ಬೇಡೀಮ್ಮ, ಹೋಗ್ತ ರಾಮುಣ್ಣಿ ಹೋಟ್ಲಲ್ಲಿ ಚಾ ಕುಡಿದು ಹೋಗ್ತೇವೆ ಅಲ್ವೆ, ಹೊತ್ತಾಯ್ತು ಬೇರೆ. ಇನ್ನೊಂದ್ಸಲ ಬರ್ತೇವಲ್ಲ, ಆಗ ಇವತ್ತಿಂದೂ ಸೇರಿಸಿ ಚಾ ಕೊಟ್ಬಿಡಿ."

"ಸಕ್ರೆ ಚಾಪುಡಿ ಜಾಸ್ತಿ ಇದೇಂತಾದ್ರೆ ನಾನೇನೋ ನಾಳೇನೇ ಬರ್ತೇನಪ್ಪೋ!" ಎಂದು ಧಾಂಡಿಗ ನುಡಿದು ಎಲ್ಲರೂ ನಗುವಂತೆ ಮಾಡಿದ.

ಅಂತೂ ಅವರು ಹೊರಟರು.

ಬೆಳಗ್ಗಿನ ಹೊತ್ತು ಮರದ ಕೆಳಗೆ ಕುಳಿತಿದ್ದ ಜಾಗಕ್ಕೆ ಬಂದಾಗ, ಅಪ್ಪು ಪಿಸುದನಿಯಲ್ಲಿ ಚಿರುಕಂಡನನ್ನು ಕೇಳಿದ:

"ಈಗ ಪಂಡಿತರು ಎಲ್ಲಿಗೆ ಹೋಗ್ತಾರೋ?"

ಚಿರುಕಂಡನಿಗೆ ರೇಗಿತು.

"ಶ್! ಹಾಗೆಲ್ಲ ಕೇಳ್ಬಾರ್ದು."

"ನಮ್ಮ ಹಳ್ಳಿಗೆ ಬರೋದಾದ್ರೆ ನಾವೇ ಕರಕೊಂಡು ಹೋಗ್ಬಹುದಲ್ಲಾಂತ."

ಆ ಯೋಚನೆ ಅರ್ಥಪೂರ್ಣವಾಗಿತ್ತು. ಏನೂ ಹೇಳಲು ತೋಚದೆ ಚಿರುಕಂಡ ಸುಮ್ಮನೆ ನಿಂತ.

"ಮಾಸ್ತರು ಬಂದೇ ಬರ್ತಾರೆ. ಅವರನ್ನಾದರೂ ಕರಕೊಂಡು ಹೋಗೋಣ" ಎಂದು ಅಪ್ಪುವೇ ಮಾತು ಮುಂದುವರಿಸಿದ.

"ಏನು, ಆ ಒಡಕು ದೋಣೀಲೇ?"

"ಓ.... ಆ ಜವಾಬ್ದಾರಿ ನನಗೆ ಬಿಟ್ಬಿಡು. ನೀನು ಸರಿಯಾಗಿ ನೀರು ತೆಗೀತಾ ಇದ್ರೆ ಸಾಕು."

"ಬೇಡ ! ಏನಾದರೂ ಆದರೆ?"

ಅಪ್ಪುವಿಗೆ ರೇಗಿತು. ಆದರೆ ಮರುಕ್ಷಣವೆ, ಚಿರುಕಂಡನ ಮಾತಿನಲ್ಲಿ ಸತ್ಯಾಂಶ ಇದೆ ಎಂಬುದನ್ನು ಮನಗಂಡು, ಆತ ಸುಮ್ಮನಾದ.

ಅಷ್ಟರಲ್ಲಿ ಮಾಸ್ತರು, ಹುಡುಗರ ಯೋಚನೆಗಳಿಗೆಲ್ಲ ಪೂರ್ಣ ವಿರಾಮ ಇತ್ತರು.

"ನೋಡಿರೊ—ಎಡಕ್ಕೆ ಈ ಹಾದಿ ಹೋಗ್ತದಲ್ಲ? ಇದರಲ್ಲಿ ಹೊರಟ್ಹೋಗಿ. ಇದು ನೀವು ಬಂದ ದಾರಿಗೇ ಸೇರ್ತದೆ."

ಅಪ್ಪು ಅಳುಕುತ್ತ ಕೇಳಿದ: "ನೀವು ಸರ್?"

ಮಾಸ್ತರು ಸ್ವರ ತಗ್ಗಿಸಿ ಹೇಳಿದರು:

"ನಾನು ಇವರ ಜತೆ ಈಗ ನೀಲೇಶ್ವರಕ್ಕೆ ಹೋಗ್ತೇನೆ. ಬೆಳಿಗ್ಗಿನ ರೈಲಲ್ಲಿ ಚೆರ್ವತ್ತೂರಿಗೆ ಬಂದು, ಅಲ್ಲಿಂದ ನಡ್ಕೊಂಡು ಬರ್ತೇನೆ. ಹೊತ್ತಾಗ್ತಾ ಬಂತು. ನೀವಿನ್ನು ಹೊರಡೀಪ್ಪ."

ಅವರನ್ನು ಬಿಟ್ಟು ಹೊರಡಲೇಬೇಕಾದುದು ಅನಿವಾರ್ಯವಾದಾಗ ಹುಡುಗರಿಗೆ ದುಃಖವೆನಿಸಿತು. ಪಂಡಿತರು ಹುಡುಗರ ಅಂಗೈಗಳನ್ನು ಹಿಸುಕಿ, ಬೆನ್ನು ತಟ್ಟಿ, ಮುಗುಳುನಕ್ಕರು. ಪ್ರಭು ದೂರದಲ್ಲೆ ನಿಂತು, ತಲೆಬಾಗಿ, ಹುಡುಗರ ವಂದನೆ ಸ್ವೀಕರಿಸಿದ. ಧಾಂಡಿಗ ಗೊಗ್ಗರ ಧ್ವನಿಯಲ್ಲಿ ಹೇಳಿದ:

"ನನ್ನನ್ನು ಮರೀಬೇಡ್ರೊ ಮರಿಗಳ್ರಾ, ಒಂದ್ಸಲ ಕಯ್ಯೂರಿಗೆ ಬಂದು ನಿಮ್ಮನ್ನೆಲ್ಲ ನೋಡ್ತೇನೆ."

ಆಮೇಲೂ ಹುಡುಗರು ಹೋಗದೆ ನಿಂತಾಗ, ಮಾಸ್ತರೆಂದರು:

"ಹೋಗೀಪ್ಪಾ.... ಇಲ್ಲಿಗೆ ಬಂದದ್ದು ಯಾರಿಗೂ ಹೇಳ್ಬೇಡಿ."

ಅದು ಅನಗತ್ಯ ಎಚ್ಚರಿಕೆ ಎಂದು ಗೊತ್ತಿದ್ದರೂ, ಹುಡುಗರು ಪ್ರತಿಭಟಿಸಲಿಲ್ಲ. 'ಹೇಳೋದಿಲ್ಲ' ಎನ್ನುವಂತೆ ತಲೆ ಅಲ್ಲಾಡಿಸಿದರು.

ತಿರುತಿರುಗಿ ನೋಡುತ್ತ ಹುಡುಗರು ಹೊರಟಾಗ ಮಾಸ್ತರು ನುಡಿದರು:

"ಹೊಳೆ ದಾಟುವಾಗ ಹುಷಾರಿ. ಒಡಕು ದೋಣಿ ಬೇರೆ. ನೀರು ಸರಿಯಾಗಿ ಎತ್ತುತ್ತ ಇರಪ್ಪ ಚಿರುಕಂಡ. ಅಪ್ಪು, ಕತ್ತಲಾಗೋಕ್ಮುಂಚೆ ಆಚೆ ದಡ ಸೇರ್ಬೇಕು ಕಣೋ."

ಹುಡುಗರು ನಡಿಗೆಯನ್ನು ತೀವ್ರಗೊಳಿಸುತ್ತ "ಹೂಂ" ಅಂದರು.

ತೇಜಸ್ವಿನಿ ನದಿಯನ್ನು ದಾಟಿ ಹುಡುಗರು ಆಚೆಯ ದಡ ಸಮೀಪಿಸಿದಾಗ ಇನ್ನೂ ಕತ್ತಲಾಗಿರಲಿಲ್ಲ.

"ಆ ಮುದುಕಪ್ಪನ ಕೈಯಿಂದ ಹ್ಯಾಗಪ್ಪಾ ತಪ್ಪಿಸ್ಕೊಳ್ಳೋದು?"

ಎಂದು ಅಪ್ಪು, ಚಿರುಕಂಡನಿಗೆ ತಮ್ಮ ಮುಂದಿದ್ದ ಸಮಸ್ಯೆಯ ನೆನಪು ಹುಟ್ಟಿಸಿದ.

"ಮುದುಕಪ್ಪನ ಮಗ—ಸೊಸೆ ಬೇರೆ ಮನೆಗೆ ಬಂದಿರ್‍ತಾರೆ ಈಗ."

ಎಂದು ಚಿರುಕಂಡ ಸಮಸ್ಯೆಯ ಚಿತ್ರವನ್ನು ಪೂರ್ಣಗೊಳಿಸಿದ.

ಇಬ್ಬರಿಗೂ ಹೊಳೆದುದೊಂದೇ ಉಪಾಯ—ಕತ್ತಲಾಗುವ ತನಕ ದಡ ಸೇರದೆ ಇರುವುದು. ಅಪ್ಪು, ಮೇಲಿನ ತೋಟವಿದ್ದ ಜಾಗದಿಂದಲೂ ಸ್ವಲ್ಪ ಮೇಲಕ್ಕೆ ದೋಣಿಯನ್ನು ತಿರುಗಿಸಿದ. ತೋಟದ ನಡುವೆ ಇದ್ದ ಗುಡಿಸಲಿನ ಹೊರಗೆ ಹೆಂಗಸೊಬ್ಬಳು ನಿಂತು ನದಿಯತ್ತ ನೋಡುತ್ತಿದ್ದುದು ಚಿರುಕಂಡನಿಗೆ ಕಂಡಿತು. ಆತ ಅಪ್ಪುವನ್ನು ಉದ್ದೇಶಿಸಿ ಹೇಳಿದ:

"ಆ ಮುದುಕಪ್ಪನ ಸೊಸೆ ನಮ್ಮನ್ನೇ ನೋಡ್ತಿದ್ದಾಳೆ ಕಣೊ."

"ಪಾಪ! ನೋಡದೇನು ಮಾಡಿಯಾಳು? ಅಂತೂ ಮೀನು ಬರ್‍ತದೇಂತ ಮೆಟ್ಟುಗತ್ತಿ ಹಿಡಕೊಂಡು ಸಿದ್ಧವಾಗಿದ್ದಾಳೆ—ಅನ್ನು!"

ಮೇಲುಗಡೆ ದಡ ಸಮೀಪಿಸಿ ಅಲ್ಲೇ ಸ್ವಲ್ಪ ಹೊತ್ತು ಅವರು ನಿಂತರು. ಕೆಲ ನಿಮಿಷಗಳಲ್ಲೇ ಕತ್ತಲಾಯಿತು. ಬಳಿಕ ಮೆಲ್ಲನೆ ದಂಡೆಯುದ್ದಕ್ಕೂ ಕೆಳಗೆ ಬಂದು, ತೋಟದ ಬಳಿ ಸದ್ದಿಲ್ಲದೆ ನೆಲ ಸೇರಿದರು. ದೋಣಿಯನ್ನು ಇಬ್ಬರೂ ಎತ್ತಿ ದಡದ ಮೇಲಿರಿಸಿದರು.

ಹುಡುಗರು ಎಷ್ಟು ಎಚ್ಚರವಹಿಸಿದರೂ ಸ್ವಲ್ಪ ಸದ್ದಾಯಿತು. ಆಗ ಗುಡಿಸಲಿನ ಹೊರಗೆ ಕಂದೀಲಿನೊಡನೆ ನಿಂತು, ಮುದುಕಪ್ಪನ ಮಗ ಗಟ್ಟಿಯಾಗಿ ಹೇಳಿದ:

"ಯಾರೋ ಅದು? ಅಪ್ಪುವೇನೋ? ದೀಪ ತರಲಾ?"

'ಒಳ್ಳೆಯ ಗಂಡಾಂತರ ಇದು' ಎಂದು ಹುಡುಗರ ಎದೆಗುಂಡಿಗೆ ಡವಡವನೆ ಹೊಡೆದುಕೊಂಡಿತು. ಅವರು ಉಸಿರು ಬಿಗಿ ಹಿಡಿದು ಅತ್ತಿತ್ತ ಚಲಿಸದೆ ಅಲ್ಲೇ ನಿಂತರು.

ಎರಡು ನಿಮಿಷ ಹಾಗೆಯೇ ನಿಂತಿದ್ದು, ಉತ್ತರ ಬರದಿದ್ದುದನ್ನು ಕಂಡು, ದೋಣಿಯ ಒಡೆಯ ಗುಡಿಸಲಿನೊಳಕ್ಕೆ ಕಂದೀಲಿನೊಡನೆ ಹಿಂತಿರುಗಿದ.

ಹುಣ್ಣಿಮೆ ಕಳೆದು ನಾಲ್ಕು ದಿನಗಳಾಗಿದ್ದುವು. ಚಂದಿರ ಮೂಡಲು ಇನ್ನೂ ಹೊತ್ತಿತ್ತು. ಆದರಿಂದ ಸಮಾಧಾನಪಡುತ್ತ, ಆ ಕತ್ತಲೆಯಲ್ಲಿ ಹಾದಿ ಹುಡುಕಿ ಕೊಂಡು, ಹುಡುಗರು ತಮ್ಮ ಮನೆಗಳ ಕಡೆಗೆ ಬೇಗಬೇಗನೆ ನಡೆದರು.

ಅಪ್ಪುವಿನ ಗುಡಿಸಲು ಹತ್ತಿರ ಬಂದಂತೆ ಚಿರುಕಂಡನೆಂದ:

"ಎಲ್ಲಿಗೆ ಹೋಗಿದ್ದೆ ಅಂತ ಕೇಳಿದ್ರೆ ಏನ್ಹೇಳ್ತೀಯಾ ಮನೇಲಿ?"

'ಅದೆಲ್ಲಾ ನೋಡ್ಕೋತೇನೆ ಬಿಡು' ಎಂದು ಹೇಳಲು ಬಾಯಿ ತೆರೆದಿದ್ದ ಅಪ್ಪು ತಡೆದು ನಿಂತು ಕೇಳಿದ:

"ಏನಪ್ಪ ಹೇಳೋದು?"

"ಮಾಸ್ತರು ಸಿಕ್ಕಿದ್ರು; ಅದೇನೋ ಶಾಲೆಯ ಸಾಮಾನು ಚರ್ವತ್ತೂರಿನಿಂದ ತರೋದಿತ್ತು; ಅವರ ಜತೇಲಿ ಹೋದೆವೂಂತ ಹೇಳು. ನಾಳೆ ಬೆಳಿಗ್ಗೆ ಮಾಸ್ತರು ಬಂದ ತಕ್ಷಣ, ಹೀಗೆ ಹೇಳಿದೇವೆಂತ ತಿಳಿಸಿದರಾಯ್ತು."

"ಹೂಂ... ನಾಳೆ ನನಗೆಲ್ಲಿ ಸಿಗ್ತೀಯಾ?"

"ನೀನು ಹೊಲಕ್ಕೆ ಹೋಗ್ತೀಯೇನು?"

"ಹೌದು."

"ಸರಿ, ಅಲ್ಲಿಗೇ ಬರ್ತೇನೆ. ನಿನ್ನೆ ಪಂಡಿತರು ಹೇಳಿದ್ರಲ್ಲ—ಅದನ್ನು ನಾವಿಬ್ಬರೂ ಚರ್ಚೆ ಮಾಡ್ಬೇಕು."

ಚಿರುಕಂಡನ ಆ ಮಾತು ಪಿಸುದನಿಯಲ್ಲಿ ಬಂತು.

"ಆಗಲಿ" ಎಂದು ಹೇಳಿ ಅಪ್ಪು, ತನ್ನ ಗುಡಿಸಲಿನ ಕಡೆಗೆ ತಿರುಗಿದ.

ಅಲ್ಲಿ ಬಾಗಿಲು ತೆರೆದವಳು ಅವನ ಅಜ್ಜಿ. ಬಡಕಲು ದೇಹ, ನೆರಿಗೆ ಕಟ್ಟಿದ ಮುಖ. ತಾಳೆಯ ಗರಿಯನ್ನು ಉರುಟಾದ ಓಲೆಮಾಡಿ ಇರಿಸಿದ್ದ ಕಿವಿಯ ತೂತುಗಳು ದೊಡ್ಡದಾಗಿ ಕೆಳಕ್ಕೆ ಜೋತುಕೊಂಡಿದ್ದುವು.

ತಾನು ನಿರೀಕ್ಷಿಸಿದ್ದ ಬಯ್ಗುಳನ್ನು ತಪ್ಪಿಸುವುದಕ್ಕಾಗಿ ಅಪ್ಪುವೇ ಮೊದಲು ಕೇಳಿದ:

"ಅರೇ! ಯಾವಾಗ್ಬಂದೆ ಅಜ್ಜಿ? ನೀನು ಇಷ್ಟು ಬೇಗ ಬರ್ತೀಂತ ನನಗೆ ಗೊತ್ತೇ ಇರ್ಲಿಲ್ಲ."

ನಾಲ್ಕು ದಿನಗಳಿಂದ ತಾನು ಕಂಡಿರದೆ ಇದ್ದ ಮೊಮ್ಮಗನನ್ನು ತುಂಬು ದೃಷ್ಟಿಯಿಂದ ನೋಡುತ್ತ ಅಜ್ಜಿಯೆಂದಳು:

"ಮಧ್ಯಾಹ್ನವೇ ಬಂದೆನಪ್ಪ. ನಿನ್ನ ಅವತಾರ ಇದೇನು? ಎಲ್ಲಿಗೆ ಹೋಗಿದ್ದೆ? ನಾನು ಇಲ್ದೇ ಇದ್ರೆ ನಿನಗೆ ಹೇಳೋರು ಕೇಳೋರು ಯಾರೂ ಇಲ್ಲಾಂತ ತಿಳಕೊಂಡ್ಯೋ?'

ಅಪ್ಪು, ತಾನು ಮಲಗುವ ಮೂಲೆಗೆ ದೃಷ್ಟಿ ಹರಿಸಿದ. ಅವನ ತಮ್ಮಂದಿರು ಆಗಲೆ ಅಲ್ಲಿ ನಿದ್ದೆ ಹೋಗಿದ್ದರು. ಇನ್ನೊಂದು ಮೂಲೆಯಲ್ಲಿ ತಣ್ಣನೆಯ ನೆಲದ ಮೇಲೆ ಬರಿಮೈ ಚಾಚಿ ಅಪ್ಪುವಿನ ತಂದೆ ಮಲಗಿದ್ದ. ಆತ ಕುಡಿದು ಬಂದಿರಲಿಲ್ಲ ಎಂಬುದು ನೋಡಿದೊಡನೆಯೆ ಅಪ್ಪುವಿಗೆ ಗೊತ್ತಾಯಿತು. ಕುಡಿಯದೆ ಇದ್ದ ದಿನಗಳಲ್ಲಿ ಮಾತ್ರ ಹಾಗೆ ಆತ ಊಟಕ್ಕೆ ಮುಂಚೆ ನೆಲದ ಮೇಲೆ ಮಲಗಿ ದಣಿವಾರಿಸಿಕೊಳ್ಳುವ ಪದ್ಧತಿ... ಆ ದಿನವಷ್ಟೇ ಅಜ್ಜಿ ಬಂದುದರಿಂದ ತನಗೆ ಹೊಡೆತ ತಪ್ಪಿತೆಂಬುದೂ ಅಪ್ಪುವಿಗೆ ಗೊತ್ತಿತ್ತು.

ಮಗ ಬಂದುದನ್ನು ಕಂಡೊಡನೆಯೆ ಮತ್ತೊಮ್ಮೆ ತಾಯಿ ಹೇಳಿದಳು:

"ಬೆಳಗಾಗ್ಬೇಕಾದರೆ ಆ ಚಿರುಕಂಡ ಬಂದು ಕರಕೊಂಡು ಹೋದ. ಅದೇನು ಕಥೆಯೋ, ಏನು ಕೆಲಸವೋ..."

"ಎಲ್ಹೋಗಿದ್ದೆ?"

ಎಂದು ಕೇಳಿದ ಅಪ್ಪುವಿನ ತಂದೆ, 'ಏಟು ತಪ್ಪಿದರೂ ಮಾತು ತಪ್ಪೋಲ್ಲ' ಎನ್ನುವುದನ್ನು ತನ್ನ ನೋಟದಲ್ಲೆ ಸ್ಪಷ್ಟಗೊಳಿಸುತ್ತ.

ಅಪ್ಪು ತನ್ನ ಅಂಗಿ ತೆಗೆದು ಗೂಟಕ್ಕೆ ನೇತು ಹಾಕಿದ. ಅದರ ಕೆಳಗೇ ನೆಲದ ಮೇಲೆ ಉರಿಯುತ್ತಿದ್ದ ದೀಪವನ್ನು ಹೊಗೆ ಅಂಗಿಗೆ ತಗಲದಂತೆ, ಬದಿಗೆ ಸರಿಸಿದ.

ಪ್ರಶ್ನೆಗೆ ಉತ್ತರ ಬರಲಿಲ್ಲವೆಂದು ಅಪ್ಪುವಿನ ತಂದೆಗೆ ರೇಗಿತು.

"ಅದು ಯಾವ ಸುಡುಗಾಡಿಗೊ ಹೋಗಿದ್ದೆ ನೀನು?ಎಲ್ಲಿ ಪೋಲಿ ಅಲೀತಿದ್ದೆ?"

ಪೋಲಿ ಅಲೆಯುವ ಮಾತಿನಿಂದ ಅಪ್ಪುವಿಗೆ ಅವಮಾನವಾಯಿತು. ಆತ ಬಾಯಿ ತೆರೆದ. ಚಿರುಕಂಡ ಹೇಳಿದುದನ್ನೇ ಏನೂ ತಡವರಿಸದೆ ತಿಳಿಸಿದ.

"ಹುಂ!"

ಎಂದು ಅವನ ತಂದೆ ಹುಂಕರಿಸಿದ. ಮಾಸ್ತರರ ಹೆಸರು ಹೇಳಿದ್ದರಿಂದ ಆತ ಸುಮ್ಮನಾದನೆಂದು ಅಪ್ಪುವಿಗೆ ಸ್ಪಷ್ಟವಾಯಿತು.

ಅಜ್ಜಿಗೂ ಮಾಸ್ತರೆಂದರೆ ಇಷ್ಟ. ಒಂದೆರಡು ಸಾರೆ ಆಕೆ ಹಗಲು ಹೊತ್ತು ಅಂಗಳದಲ್ಲಿ, ತಾಳೆಯ ಗರಿಯಿಂದ ತಡಿಕೆ ಹೆಣೆಯುತ್ತ ಕುಳಿತಿದ್ದಾಗ, ಆ ಹಾದಿಯಾಗಿ ಬಂದ ಮಾಸ್ತರು ತಡೆದು ನಿಂತು ಆಕೆಯನ್ನು ಮಾತನಾಡಿಸಿದ್ದರು. ತುಂಬಾ ವಿನಯಸಂಪನ್ನ. "ಚಾ ಕುಡಿದು ಹೋಗಿ" ಎಂದರೂ ಬೇಡ ಎಂದಿದ್ದರು.

ಆ ಮಾಸ್ತರರ ಮಾತು ಬಂತೆಂದು ಅಜ್ಜಿ ಕೇಳಿದಳು:

"ಅವರಿನ್ನೂ ಸ್ವಂತ ಅಡುಗೆ ಮಾಡ್ಕೊಂಡೆ ಇದ್ದಾರಾ ?"

"ಹೂಂ. ಇನ್ನಾರು ಮಾಡ್ತಾರೇಂತ ತಿಳ್ಕೊಂಡೆ?"

ತನ್ನ ಪ್ರಶ್ನೆಯ ಅರ್ಥ ಅಪ್ಪುವಿಗೆ ಹೇಗೆ ಆಗಬೇಕು?—ಅಜ್ಜಿ ನಕ್ಕಳು.

ಅಪ್ಪುವಿನ ತಾಯಿ ಹೊರಗೆ ತಲೆ ಹಾಕಿ ಕೇಳಿದಳು:

"ಮಧ್ಯಾಹ್ನ ಊಟ ಮಾಡಿದ್ಯೇನೋ?"

"ಹೂಂ. ಊಟ ಮಾಡದೆ ಇರ್ತಾರಾ ಯಾರಾದರೂ?"

ತಂದೆ ಗೊಣಗಿದ:

"ಮಹಾ ಅಧಿಕಪ್ರಸಂಗಿ, ಹೇಳಿದ್ದಕ್ಕೆಲ್ಲಾ ಮರುಪ್ರಶ್ನೆ ಕೇಳದೆ ಇರೋದಿಲ್ಲ."

"ಎಲ್ಲಿ ಮಾಡಿದೆ?"

ಎಂದು ತಾಯಿ ಇನ್ನೊಂದು ಪ್ರಶ್ನೆ ಕೇಳಿದಳು.

"ಚರ್ವತ್ತೂರಲ್ಲೇ. ಈಗ ನಿಮ್ಮದೆಲ್ಲಾ ಆಯ್ತೋ ಇಲ್ಲವೋ?"

ಅಜ್ಜಿಗೆ ರೇಗಿತು:

"ಘಟಿಂಗ! ನೋಡು. ಅವನು ಪ್ರಶ್ನೆ ಕೇಳೋ ರೀತಿ.... ಹುಂ. ಹುಡುಗರೆಲ್ಲ ಮನೆಗೆ ಬರದೆ ದೊಡ್ಡೋರು ಊಟ ಮಾಡ್ತಾರೇನೋ?"

ಅಪ್ಪು ಸುಮ್ಮನಾದ.

"ಹೋಗು ಕಂಬದ ಹಾಗೆ ನಿಂತ್ಕೋಬೇಡ. ಕೈಕಾಲು ತೊಳಕೋ...." ಎಂದು ತಂದೆ, ಎದ್ದು ಕುಳಿತುಕೊಳ್ಳುತ್ತ ಹೇಳಿದ.

....ಅಲ್ಲೇ ಬಾಗಿಲು ಮರೆಮಾಡಿ, ಅಜ್ಜಿಯೂ ಮಗನೂ ಮೊಮ್ಮಗನೂ ಊಟಕ್ಕೆ ಕುಳಿತರು. ಅಪ್ಪುವಿನ ತಾಯಿ ಆ ಮೂವರಿಗೂ ಬಡಿಸಿದಳು. ದಣಿದಿದ್ದ ಆತನಿಗೆ ಚೆನ್ನಾಗಿ ಹಸಿವೆಯಾಗಿತ್ತು. ಉಣ್ಣುತ್ತಲಿದ್ದಂತೆ, ಮಧ್ಯಾಹ್ನ ಮಾಡಿದ ಊಟದ ಚಿತ್ರ ಆತನ ಕಣ್ಣಮುಂದೆ ಕಟ್ಟಿತು. ಅಲ್ಲಿ ಊಟದ ವೇಳೆಯಲ್ಲಿ ನಡೆದ ಮಾತುಕತೆ ಮತ್ತೆ ನೆನಪಿಗೆ ಬಂತು. ಆ ನೆನಪನ್ನು ಸವಿಯುತ್ತಿದ್ದ ಅಪ್ಪುವಿಗೆ ತಾಯಿ ತನ್ನ ಮುಂದೆಯೆ ನಿಂತಿದ್ದುದೂ ಕಾಣಿಸಲಿಲ್ಲ.

"ಸಾರು ಬೇಕೇನೋ?"

ಮಗನಿಂದ ಉತ್ತರ ಬರಲಿಲ್ಲವೆಂದು ಆಕೆ ಮತ್ತೊಮ್ಮೆ ಕೇಳಿದಳು:

"ಬೇಕೇನೋ ಸಾರು?"

ಅಪ್ಪು ಬೆಚ್ಚಿಬಿದ್ದವನಂತೆ ತಲೆ ಎತ್ತಿದ. ತಾಯಿಯ ಮುಖವನ್ನು ಕಂಡು ನಕ್ಕು ಹೇಳಿದ: "ಬೇಡ."

ಅಜ್ಜಿ ಮೊಮ್ಮಗನನ್ನು ನೋಡುತ್ತ ಕೇಳಿದಳು:

"ಅದೇನು ಯೋಚ್ನೆ ಮಾಡ್ತಿದ್ದೆ?"

"ಏನೂ ಇಲ್ಲಜ್ಜಿ."

"ಸುಳ್ಳು ಹೇಳ್ತೀಯಾ?"

ಯಾವ ಸುಳ್ಳನ್ನು ಹೇಗೆ ಹೇಳಬೇಕೆಂದು ಯೋಚಿಸುತ್ತ ಅಪ್ಪುವೆಂದ:

"ಮಾಸ್ತರು ಶಾಲೆ ವಿಷಯ ಅದೇನೋ ಹೇಳಿದ್ರು. ಅದು ನೆನಪಾಯ್ತು."

"ಯಾವಾಗ ನೋಡಿದ್ರೂ ಮಾಸ್ತರು ಮಾಸ್ತರು: ಮಾಸ್ತರು ಅಂದ್ರೆ ಅದ್ಯಾಕೆ ಹೀಗೆ ಸಾಯ್ತೀರೋ?"—ತಂದೆ ಹೇಳಿದ.

ತನ್ನ ಮಗನ ಮಾತನ್ನು ತಿದ್ದುವುದಕ್ಕೋ ಎಂಬಂತೆ ಅಜ್ಜಿ ಅಂದಳು:

"ಒಳ್ಳೆಯವರು—ಪಾಪ!"

ಅಪ್ಪುವಿನ ತಾಯಿ ಕೆಲವು ದಿವಸಗಳಿಂದ ತನ್ನ ಮನಸ್ಸನ್ನು ಕಾಡುತ್ತಿದ್ದೊಂದು ವಿಷಯ ಪ್ರಸ್ತಾಪಿಸಿದಳು:

"ಮಾಸ್ತರು ಮೊನ್ನೆ, ಕುಟ್ಟಿಯನ್ನೂ ಶಾಲೆಗೆ ಕರಕೊಂಡ್ಬಾ; ಅಂತ ಚಿಕ್ಕವನ ಕೈಲಿ ಹೇಳಿದ್ರಂತೆ."

ಕುಟ್ಟಿ ಅಪ್ಪುವಿನ ಕಿರಿಯ ತಮ್ಮ—ಅವರ ಬಳಗದಲ್ಲಿ ಮೂರನೆಯವನು. ತಾಯಿಯ ಮಾತಿಗೆ ತಂದೆ ಏನು ಹೇಳುವರೋ ಎಂದು ಕುತೂಹಲದಿಂದ ಅಪ್ಪು ಆತನ ಮುಖವನ್ನು ನೋಡಿದ.

ಆಶ್ಚರ್ಯಪಡುವಂತಹ ಉತ್ತರವೇನೂ ಆತನಿಂದ ಬರಲಿಲ್ಲ.

"ಕುಟ್ಟಿ ಈಗ್ಲೇ ಶಾಲೆಗೆ ಹೋಗಿ ಏನಂತೆ ಮಾಡೋದು? ಅವನಿಗಿನ್ನೂ ಆರು ವರ್ಷ. ಇಲ್ಲೇ ಇದ್ದರೆ ಹೋರಿಗಳನ್ನಾದರೂ ಒಂದಿಷ್ಟು ನೋಡ್ಕೊಬಹುದು. ಹುಡುಗರನ್ನೆಲ್ಲಾ ಕಳಿಸ್ಕೊಟ್ರೆ, ಇಲ್ಲಿ ಹೊಲದ ಕೆಲಸ ಮಾಡೋರು ಯಾರು? ಮಾಸ್ತರು ಮಾಡ್ತಾರೇನು ಬಂದು?"

ಮಾಸ್ತರ ವಿಷಯದಲ್ಲಿ ತಂದೆ ಸಾಕಷ್ಟು ಆದರ ತೋರುತ್ತಲಿಲ್ಲ ಎಂದು ಅಪ್ಪುವಿನ ಮನಸ್ಸು ನೊಂದಿತು. ಅವನು ಅಸಹನೆಯಿಂದಲೇ ಅಂದ:

"ಮಾಸ್ತರು ಯಾಕ್ಮಾಡ್ತಾರೆ ನಮ್ಮನೇ ಕೆಲಸ?"

"ಮತ್ತೆ!"

"ಕುಟ್ಟಿ ಶಾಲೆಗೆ ಹೋಗ್ಲಿ. ಇಲ್ಲಿ ನೋಡ್ಕೋಳ್ಳೋದಕ್ಕೆ ನಾನಿದ್ದೇನಲ್ಲ?"

ಆಗಲೇ ಕುಟ್ಟಿಯನ್ನು ಕಳುಹಿಸಿಕೊಡಲು ತಾಯಿಗೆ ಇಷ್ಟವಿರಲಿಲ್ಲವಾದರೂ ಅಪ್ಪು ಜವಾಬ್ದಾರಿಯ ಮಾತನ್ನಾಡಿದನೆಂದು ಆಕೆಗೆ ಸಂತೋಷವಾಯಿತು.

ಆದರೆ ತಂದೆಗೆ ಹಾಗನಿಸಲಿಲ್ಲ.

"ಓಹೋಹೋ. ಭಾರೀ ನೋಡ್ಕೋತಿದ್ದೀಯಾ ನೀನು. ಇವತ್ತೆಲ್ಲ ನೋಡ್ಕೊಂಡೇ ಇದ್ದೆ, ಅಲ್ಲ?"

ಅಪ್ಪು ಮಾತಾಡಲಿಲ್ಲ. ಆ ದಿನವೆಲ್ಲ ತಾನು ಮಾಡಿದ ಕೆಲಸಗಳು ಮತ್ತೆ ನೆನಪಿಗೆ ಬಂದು, ಆತ ಮೌನ ತಳೆದ.

ಸ್ವಲ್ಪ ಹೊತ್ತಿನಲ್ಲಿ ಎಲ್ಲರ ಊಟವೂ ಮುಗಿಯಿತು. ಸೀಮೆಎಣ್ಣೆ ಖರ್ಚಾಗುತ್ತದೆಂದು ದೀಪ ಆರಿಸಿ ಎಲ್ಲರೂ ಮಲಗಿಕೊಂಡರು.

ತ್ರಿಕರಪುರದಲ್ಲಿನ ತನ್ನ ಇನ್ನೊಬ್ಬಳು ಅಜ್ಜಿಯ ವಿಷಯ ಈ ಅಜ್ಜಿ ಪ್ರಸ್ತಾಪಿಸುವಳೇನೋ ಎಂದು ಅಪ್ಪು ನಿರೀಕ್ಷಿಸಿದ್ದ. ತನ್ನ ಅಮ್ಮನ ಅಮ್ಮನೂ ಅಪ್ಪನ ಅಮ್ಮನೂ ಸಣ್ಣಸಣ್ಣ ವಿಷಯಗಳನ್ನೆತ್ತಿಕೊಂಡು ಜಗಳಾಡುತ್ತಾರೆ ಎಂದು, ತನ್ನ ತಾಯಿ ಬೇಸರದಿಂದ ಒಮ್ಮೆ ಹೇಳಿದ್ದುದು ಅಪ್ಪುವಿಗೆ ನೆನಪಿತ್ತು. ಅಲ್ಲದೆ, ಈ ಅಜ್ಜಿಯ ಜತೆಯಲ್ಲಿ ತಾನೂ ಒಮ್ಮೆ ತ್ರಿಕರಪುರಕ್ಕೆ ಹೋಗಿದ್ದಾಗ, ಅಂತಹ ಜಗಳವಾಗಿದ್ದುದನ್ನು ಆತ ಕಂಡಿದ್ದ. ಈ ಸಲವೂ ವಿರಸದ ಮಾತುಗಳಾಗಿ ಅಜ್ಜಿ ಬೇಗನೆ ಅಲ್ಲಿಂದ ಹೊರಟುಬಂದಿರಬಹುದೆ? ಎಂದು ತಿಳಿಯಲು ಅಪ್ಪು ಕುತೂಹಲಿಯಾಗಿದ್ದ. ಎಳೆಯ ಮಕ್ಕಳ ಹಾಗೆ ವಯಸ್ಸಾದವರೂ ಆಡಿಕೊಳ್ಳುವ ಜಗಳ ತಮಾಷೆಯಾಗಿರುತ್ತಿತ್ತು. ಆದರೆ ಅಜ್ಜಿ ಮೌನವಾಗಿಯೆ ಇದ್ದುದನ್ನು ಕಂಡು ಅಪ್ಪುವಿಗೆ ನಿರಾಸೆಯಾಯಿತು. ಈಗಾಗಲೇ ಒಮ್ಮೆ ತನ್ನ ತಂದೆಗೂ ತಾಯಿಗೂ ಎಲ್ಲ ವಿಷಯಗಳನ್ನೂ ಅಜ್ಜಿ ಹೇಳಿರಬೇಕು; ಪುನಃ ಅದನ್ನೇ ಈಗ ಹೇಳಲಾರಳು: ನಾಳೆ ಹಗಲುಹೊತ್ತು ಆಕೆಯೊಬ್ಬಳೊಡನೆಯೇ ಹರಟೆ ಹೊಡೆಯುತ್ತ ಆ ಊರಿನ ಸಮಾಚಾರ ತಿಳಿಯಬೇಕು—ಎಂದು ಲೆಕ್ಕಹಾಕಿದ. ಆದರೆ ಒಂದು ವಿಷಯವನ್ನು ಮಾತ್ರ ಈಗಲೇ ಪ್ರಸ್ತಾಪಿಸಬೇಕೆನ್ನಿಸಿತು. ಅದು, ತ್ರಿಕರಪುರದಲ್ಲಿ ಆತನಿಗಿದ್ದ ಒಬ್ಬನೇ ಸ್ನೇಹಿತನೂ ಓರಗೆಯ ಸಂಬಂಧಿಕನೂ ಆದ ಚಂದುವಿನ ವಿಷಯ.

"ಅಜ್ಜೀ..."

ಅಜ್ಜಿಗೆ ನಿದ್ದೆ ಬಂದಿರಲಿಲ್ಲ. ಸಮೀಪದಲ್ಲೇ ಇದ್ದ ಆಕೆ ಮಗ್ಗುಲು ಹೊರಳಿ ಕೇಳಿದಳು:

"ಏನೋ ? ನಿದ್ದೆ ಬಂದಿಲ್ವೇನೋ?"

"ಇಲ್ಲ ಅಜ್ಜೀ...."

"ಹೆದರಿಕೆಯಾಗ್ತದೇನೋ? ನನ್ನ ಹತ್ತಿರ ಮಲಕೋತ್ಯಾ?"

ಅಪ್ಪುವಿಗೆ ನಗೆ ಬಂತು. ಅಜ್ಜಿಯ ದೃಷ್ಟಿಯಲ್ಲಿ ತಾನಿನ್ನೂ ಎಳೆಯ ಕೂಸೇ.

"ಊ ಹುಂ. ಅದಲ್ಲ ಅಜ್ಜಿ. ಚಂದೂನ ನೋಡಿದ್ಯಾ?" ಮೊಮ್ಮಗ ಹತ್ತಿರ ಬರಲಿಲ್ಲವೆಂದು ಬೇಸರಗೊಂಡರೂ ವೃದ್ಧೆ ಹೇಳಿದಳು:

"ಹೂಂ ಕಣೋ. ಚೆನ್ನಾಗಿದ್ದಾನೆ."

"ನನ್ನ ವಿಷಯ ಏನಾದರೂ ಕೇಳಿದ್ನಾ?"

"ನಿನ್ನ ವಿಷಯ ಹೇಳೋಕೆ ಕೇಳೋಕೆ ಅಂಥಾದೇನೋ ಇರೋದು?"

ವಿಷಯಗಳೆಷ್ಟೋ ಇದ್ದುವು. ಅಜ್ಜಿಗೆ ಗೊತ್ತಿರಲಿಲ್ಲ, ಅಷ್ಟೆ. ಆಕೆಯ ಅಜ್ಞಾನಕ್ಕಾಗಿ ಕನಿಕರಿಸಿ ಅಪ್ಪು ಸಣ್ಣಗೆ ನಕ್ಕ.

ಮೊಮ್ಮಗ ಸುಮ್ಮನಿದ್ದುದನ್ನು ಕಂಡು ಅಜ್ಜಿಯೇ ಹೇಳಿದಳು:

"ಚಂದು ಈಗ ಬೀಡಿಯಂಗಡಿ ಇಟ್ಟಿದ್ದಾನೆ. ದಿನಕ್ಕೆ ಎರಡಾಣೆ ಮೂರಾಣೆ ಸಂಪಾದನೆಯಾಗ್ತದೆ."

"ಓ!" ಎಂದು ಅಪ್ಪು ಉದ್ಗಾರವೆತ್ತಿದ.

ಈ ಸಂಭಾಷಣೆಯೊಂದು ಇಷ್ಟವಾಗದೆ ಆತನ ತಂದೆಯೆಂದ:

"ಸಾಕು ಮಾತಾಡಿದ್ದು, ಮಲಕ್ಕೊಳ್ಳಿ!"

ಮತ್ತೆ ಅಪ್ಪು ಮಾತನಾಡಲಿಲ್ಲ. ಅಜ್ಜಿಯೂ ಮುಂದುವರಿಯಲಿಲ್ಲ.

ಚಂದುವಿನ ಬಗೆಗೆ ಅಜ್ಜಿ ಕೊಟ್ಟ ಸುದ್ದಿಯನ್ನು ಅಪ್ಪು ಮೆಲುಕುಹಾಕಿದ. ಆತನ ನೆನಪಿನ ಚಿತ್ರಶಾಲೆಯೊಳಗೆ ನುಸುಳಿಬಿಟ್ಟನ್ವ, ಚಂದು. ಒಮ್ಮೆಲೆ ಅಪ್ಪುವಿಗೆ, ಚಂದುವನ್ನು ಕಾಣಬೇಕೆಂಬ ಬಯಕೆಯಾಯಿತು. ಆತನೊಡನೆ ಮಾತನಾಡುವುದು ಸುಲಭ. ಅವನು ಚಿರುಕಂಡನ ಹಾಗಲ್ಲ. ತನ್ನ ಈಗಿನ ಅನುಭವಗಳನ್ನೆಲ್ಲ, ತಲೆಯೊಳಗೆ ಸುತ್ತುತ್ತಿದ್ದ ವಿಚಾರಗಳನ್ನೆಲ್ಲ ಚಂದುಗೆ ಹೇಳಿದರೆ, ಆತ ಎಲ್ಲವನ್ನೂ ಕೇಳಿ ಬೆಕ್ಕಸಬೆರಗಾಗುವುದು ಖಂಡಿತ. ತಾನು ಆತನ ದೃಷ್ಟಿಯಲ್ಲಿ ಪ್ರಮುಖನಾಗಿ ತೋರುವುದರಲ್ಲಿ ಸಂದೇಹವಿಲ್ಲ.

ಆ ಬೆಳಗ್ಗೆ ಬೇಗನೆ ಏಳಬೇಕೆಂದು ಹಿಂದಿನ ರಾತ್ರಿ ಚಿರುಕಂಡ ಹೇಳಿದ್ದರೂ ಏಳುವೆನೆಂದು ತಾನು ಮಾತುಕೊಟ್ಟಿದ್ದರೂ ಅಪ್ಪುವಿಗೆ ಎಚ್ಚರವಾಗಿರಲಿಲ್ಲ, ಚಿರುಕಂಡನೇ ಬಂದು ಎಬ್ಬಿಸಿದ್ದ. ತಾಯಿ, ಬೇಯಿಸಿದ ನೇಂದ್ರಬಾಳೆಯ ಹಣ್ಣುಗಳನ್ನು ತಮಗೆ ಕೊಟ್ಟಿದ್ದಳು. ಅಲ್ಲಿಂದ ಅವರಿಬ್ಬರೂ ಹೊರಟಿದ್ದರು. ಯಾವುದೋ ದೇಶಕ್ಕೆ ಯಾತ್ರೆ ಹೋದಹಾಗೆ, ನದಿ ದಾಟಿದುದು, ಚಹದಂಗಡಿ ರಾಮುಣ್ಣಿ, ಧಾಂಡಿಗ—ಬಳಿಕ ತಾವು ಕಂಡ ನಾಯಕ ಪಂಡಿತರು, ಜಮೀನ್ದಾರರ ಬಂಟನೊಬ್ಬ ಕೆಮ್ಮುತ್ತ ಬಂದುದು, ಆ ಊಟ, ಪಂಡಿತರು, ನಡೆಸಿದ ಸಭೆ.... ಒಂದೊಂದೂ ಎಂತಹ ಅನುಭವವಾಗಿತ್ತು! ಈ ದಿನವೇ ಬೆಳಗ್ಗಿನಿಂದ ಹಿಡಿದು ಸಂಜೆಯೊಳಗೆ ಇಷ್ಟೆಲ್ಲ ಆಯಿತೆ? ಎಂಬುದನ್ನು ನಂಬುವಂತೆಯೇ ಇರಲಿಲ್ಲ. ಆದರೂ ಅದು ನಿಜವಾಗಿತ್ತು. ಜನರ ಸಂಘಟನೆ, ಹೋರಾಟ, ಕ್ರಾಂತಿ, ದೇಶದ ಸ್ವಾತಂತ್ರ್ಯ.... ಪಂಡಿತರ ವಾತ್ಸಲ್ಯಪೂರ್ಣ ದೃಷ್ಟಿ... ಆ ಧಾಂಡಿಗ...

ಧಾಂಡಿಗನ ಯೋಚನೆ ಬಂದಾಗ ಅಪ್ಪು ಸದ್ದು ಮಾಡದೆ ಕತ್ತಲಲ್ಲೆ ನಕ್ಕ. ನೋಡಲು ಭಯೋತ್ಪಾದಕ. ಮನಸ್ಸು ಮಗುವಿನ ಹಾಗೆ. ಆಡುತ್ತಿದ್ದುದೆಲ್ಲ ಪರಿಹಾಸ್ಯದ ಮಾತು. ಒಂದೊಂದನ್ನು ಕೇಳಿದಾಗಲೂ ನಗುಬರುತ್ತಿತ್ತು.

ಅಪ್ಪು ಈಗ ನಕ್ಕಾಗ ಸದ್ದಾಗಿರಲಿಲ್ಲ, ನಿಜ. ಆದರೆ ದೇಹ ಕುಲುಕಿ ಮಿಸುಕಿದ ಹಾಗಾಯಿತು.

ಹೊರಗಿನ ಬೆಳದಿಂಗಳು ಒಳಗೆ ತೂರಿ ಉಂಟಾದ ಮಬ್ಬು ಬೆಳಕಿನಲ್ಲಿ ಆ ಸೂಕ್ಷ್ಮ ಚಲನವನ್ನು ಇನ್ನೂ ಎಚ್ಚರವಿದ್ದ ಆತನ ತಂದೆ ಗಮನಿಸಿ ಹೇಳಿದ:

"ಅಪ್ಪು, ನಿದ್ದೆ ಬಂದಿಲ್ವೇನೋ?"

ಅಪ್ಪು ಉಸಿರು ಬಿಗಿಹಿಡಿದ. ಮಾತನಾಡಲಿಲ್ಲ. ಹುಡುಗ ನಿದ್ದೆಹೋಗಿರಬೇಕು, ಎಂದುಕೊಂಡ ತಂದೆ.

ಆದರೆ ಅಜ್ಜಿ ತನ್ನ ಮಗನನ್ನು ಕೇಳಿದಳು:

"ನಿನಗೆ ನಿದ್ದೆ ಬಂದಿಲ್ವ ಇನ್ನೂ?"

"ಇಲ್ಲ.... " ಎಂದ ತಂದೆ ಕ್ಷೀಣಸ್ವರದಲ್ಲಿ.

"ಏನು ಯೋಚಿಸ್ತಿದ್ದೀಯಾ?"

"ಏನೂ ಇಲ್ಲ."

ಹಾಗೆ ಹೇಳಿದಮೇಲೆ ಒಂದು ನಿಮಿಷ ಸುಮ್ಮನಿದ್ದು ತಂದೆಯೇ ಅಂದ :

"ಏನಾದರೂ ಮಾಡಿ ಅಪ್ಪೂನ ನೀಲೇಶ್ವರದ ಹೈಸ್ಕೂಲಿಗೆ ಕಳಿಸ್ಬೇಕಾಗಿತ್ತಮ್ಮ. ಮೆಟ್ರಿಕ್ಕು ಮಾಡ್ಕೊಂಡಿದ್ರೆ ಮಾಸ್ತರ ಕೆಲಸ ಸುಲಭವಾಗಿ ಸಿಗ್ತಾ ಇತ್ತು. ಈ ಗೇಣಿ ಹೊಲ ನೆಚ್ಕೊಂಡು ಎಷ್ಟು ಜನ ಇರೋಕಾಗ್ತದೆ?"

ಮಗನ ಮಾತು ನಿಜವೆಂದು ತಿಳಿದಿದ್ದ ಅಜ್ಜಿ ಮರುಮಾತನಾಡಲಿಲ್ಲ. ತಂದೆಯೇ ಮುಂದುವರಿಸಿದ :

"ಈಗೇನೂ ಮಾಡೋಹಾಗಿಲ್ಲ. ಹೊಲಕ್ಕಾದರೂ ಅವನನ್ನು ದಿನಾ ಕರ ಕೊಂಡು ಹೋಗ್ಬೇಕು. ಇಲ್ದಿದ್ರೆ ಮೈಗಳ್ಳನಾಗ್ತಾನೆ. ಪೋಲಿ ಸಹವಾಸಕ್ಕೆ ಬಿದ್ದು ಕೆಟ್ಹೋಗ್ತಾನೆ..."

ಅಜ್ಜಿಯೆಂದಳು: "ಹಾಗೇ ಮಾಡಿದರಾಯ್ತು. ಈಗ ಅದೆಲ್ಲಾ ಯೋಚ್ನೆ ಮಾಡ್ದೆ ಸುಮ್ನೆ ಮಲಕೋ ನೀನು."

ಮತ್ತೆ ಮೌನ ನೆಲಸಿತು. ತಂದೆಯ ಮಾತುಗಳನ್ನು ಕೇಳಿ ಅಪ್ಪುವಿನ ಹೃದಯದಲ್ಲಿ ವಿವಿಧ ಭಾವನೆಗಳು ಮೂಡಿದುವು. ತನ್ನ ಬಗೆಗೆ, ಭವಿತವ್ಯದ ಬಗೆಗೆ, ತಂದೆ ಅಷ್ಟೊಂದು ಆಳವಾಗಿ ಯೋಚಿಸುತ್ತಿದ್ದನೆಂಬ ವಿಷಯವೇ ಆತನಿಗೆ

ತಿಳಿದಿರಲಿಲ್ಲ. ಈ ರಾತ್ರಿಯೂ, ತನಗೆ ಎಚ್ಚರವಿದ್ದುದು ಗೊತ್ತಿದ್ದರೆ ಆತ ಮಾತನಾಡುತ್ತಲೇ ಇರಲಿಲ್ಲವೇನೋ... ಹೈಸ್ಕೂಲಿಗೆ ಕಳಿಸದೇ ಇದ್ದುದು ತಪ್ಪು ಎನ್ನುತ್ತಾನೆ ತಂದೆ. ಹಾಗೆ ಆತ ಹೇಳಿದುದೇ ಎಷ್ಟೋ ಸಮಾಧಾನದ ವಿಷಯ. ತಾನು ಮತ್ತು ಉಪಾಧ್ಯಾಯ ವೃತ್ತಿ! ತಮ್ಮ ಪ್ರೀತಿಪಾತ್ರ ಮಾಸ್ತರರ ಹಾಗೆ ತಾನೂ ಹುಡುಗರಿಗೆ ಪಾಠ ಹೇಳಿಕೊಡುವುದು. ಆ ಯೋಚನೆ ಸ್ವಾರಸ್ಯಕರವಾಗಿತ್ತು. ಆ ಬಳಿಕ ತಂದೆ ವ್ಯಕ್ತಪಡಿಸಿದ ಭೀತಿ—ತಾನು ಮೈಗಳ್ಳನಾಗುವುದು ಇಲ್ಲವೆ ಪೋಲಿ ಸಹವಾಸಕ್ಕೆ ಬಿದ್ದು ಕೆಟ್ಟುಹೋಗುವುದು. ತಾನು ಮತ್ತು ಮೈಗಳ್ಳತನ—ಪೋಲಿ ಸಹವಾಸ... ತಂದೆ ಹಾಗೆ ಹೇಳಿದನೆಂದು ಅಪ್ಪುವಿಗೆ ಕೆಡುಕೆನಿಸಿತು. ಆದರೆ ತಾನು ಪೋಲಿಯಾಗುವುದನ್ನು ಚಿತ್ರಿಸಿಕೊಂಡು ನಗುಬಂತು.... ಮಿಂಚಿಹೋದುದಕ್ಕೆ ಚಿಂತಿಸಿ ಫಲವಿಲ್ಲ—ಎನ್ನುವಂತೆ ತಂದೆ ಮಾತನಾಡಿದ. ಅರ್ಥವಿಲ್ಲದ ಮಾತು. ಏನೂ ಮಿಂಚಿಹೋಗಿರಲಿಲ್ಲ. ಪ್ರತಿಯೊಂದು ಇದೇ ಈಗ ಆರಂಭವಾಗಿತ್ತು—ಇದೇ ಈಗ.

ತನ್ನ ಮನಸ್ಸಿನಲ್ಲಿದ್ದುದನ್ನೆಲ್ಲ, ತನ್ನ ಯೋಚನೆಗಳನ್ನೆಲ್ಲ, ತಂದೆಗೆ ಹೇಳಬೇಕೆಂದು ಅಪ್ಪುವಿಗೆ ಆಸೆಯಾಯಿತು. ಆದರೆ ಆ ಆಸೆಯ ಜತೆಯಲ್ಲೆ, ಆತ ತನಗೆ ಅಡ್ಡಿ ಒಡ್ಡಬಹುದೆಂಬ ಭಯ ಮೂಡಿತು.

ಅಪ್ಪು ನಿಧಾನವಾಗಿ ಯೋಚಿಸಿದ:

ತನ್ನ ಪಾಲಿಗೆ ಶಾಲೆಯ ಓದು ಇನ್ನಿಲ್ಲವಾದರೂ ತಾನು ಓದಬೇಕು; ತುಂಬಾ ಓದಬೇಕು. ತಾನು ದುಡಿಯಬೇಕು; ತುಂಬಾ ದುಡಿಯಬೇಕು. ತನ್ನ ಮನೆಗೋಸ್ಕರ ಮಾತ್ರವಲ್ಲ, ಜನರಿಗೋಸ್ಕರ—ರಾಷ್ಟ್ರಕ್ಕೋಸ್ಕರ ದುಡಿಯಬೇಕು. ಸಾಹಸದ ಕೆಲಸಗಳನ್ನು ಮಾಡಿ ತಾನು ಒಳ್ಳೆಯವನಾಗಿ ಪ್ರಸಿದ್ಧಿಗೆ ಬರಬೇಕು—ಮಾಸ್ತರರ ಹಾಗೆ. ಪಂಡಿತರ ಹಾಗೆ, ಅವರು ಹೇಳಿದ ಎಷ್ಟೋ ವೀರರ ಹಾಗೆ. ಪೋಲಿ! ಪೋಲಿಯಲ್ಲ—ಕ್ರಾಂತಿಕಾರಿ ತಾನು....!

....ತಣ್ಣನೆ ಗಾಳಿ.... ಹಸುರು ಬಯಲು... ತುಂಬಿ ಹರಿಯುವ ನದಿ... ಬಾಣದಂತೆ ಅದನ್ನು ಸೀಳಿ ದಾಟುತ್ತಿದ್ದ ಪುಟ್ಟ ದೋಣಿ... ಅದರಲ್ಲಿ ಸಾಹಸಿಯಾದ ತಾನು—ತಾನೊಬ್ಬನೇ—ಅಪ್ಪುವೊಬ್ಬನೇ....

ತಿಳಿವು, ಕಲ್ಪನೆ ಭ್ರಮೆಗಳೊಡನೆ ಬೆರೆತು ಕರಗಿ ಮಾಯವಾಯಿತು. ಅರಿವು, ತೂಗುಸೇತುವೆಯಲ್ಲಿ ಜೋಲಿ ಹೊಡೆಯುತ್ತ ಮರೆವಿನೊಡನೆ ಸೇರಿಕೊಂಡಿತು.

ಅಪ್ಪುವಿಗೆ ನಿದ್ದೆ ಬಂತು.

ಅಪ್ಪು ನಿದ್ದೆಹೋದ ಹೊತ್ತಿಗಿನ್ನೂ ಚಿರುಕಂಡ ಎಚ್ಚರವಾಗಿಯೆ ಇದ್ದ. ದೀಪ ವಿರಲಿಲ್ಲ. ಮಲಗಿದ್ದರು ನಿಜ. ಆದರೂ ಚಿರುಕಂಡನ ತಾಯಿ ತಂದೆ ಇಳಿಸ್ವರದಲ್ಲಿ ಮಾತುಕತೆ ನಡೆಸಿಯೇ ಇದ್ದರು. ಆತ ಅದನ್ನು ಕೇಳುತ್ತಲೇ ಇದ್ದ.

.... ಚಿರುಕಂಡ ಗುಡಿಸಲು ಸಮೀಪಿಸಿದಾಗ ಅಲ್ಲಿ ಬೆಳಕು ಇರಲಿಲ್ಲ. ಆತನ ಎದೆ ಚುಳ್ಳೆಂದಿತು. ಹಿಂದಿನ ರಾತ್ರೆಯೇ ಮುಗಿದುಹೋಗಿತ್ತು ಸೀಮೆಎಣ್ಣೆ. ಉಣ್ಣುತ್ತಿದ್ದಾಗಲೇ ದೀಪ ಕಣ್ಣುಮುಚ್ಚಿತ್ತು. ಹಗಲು ಹೊತ್ತು ಅಂಗಡಿಯಿಂದ ಚಿರುಕಂಡ ಎಣ್ಣೆ ತರಬೇಕಾಗಿತ್ತು. ಆದರೆ ಈ ಹಗಲೆಲ್ಲ ಆತ ಮನೆಯಲ್ಲೆ ಇರಲಿಲ್ಲ... ಹೀಗಾಗಿ ಗುಡಿಸಲಲ್ಲಿ ದೀಪವಿರಲಿಲ್ಲ.

ತಾಯಿಯನ್ನು ಹೇಗೆ ಇದಿರಿಸಬೇಕೆಂದು ತಿಳಿಯದೆ ಚಿರುಕಂಡನಿಗೆ ಭಯವಾಯಿತು. ಅಳುಕುತ್ತ, ಆತ ಮನೆಯ ಬಳಿ ಸಾರಿದ.

ಒಲೆಯ ಬೆಂಕಿಯ ಬೆಳಕಿನೆದುರು ಕುಳಿತಿದ್ದ ತಾಯಿ, ಕಳ್ಳಹೆಜ್ಜೆಯ ಕಾಲ ಸಪ್ಪಳದಿಂದಲೇ ಮಗ ಬಂದನೆಂದು ತಿಳಿದು, ಎದ್ದು ನಿಂತಳು.

ಕತ್ತಲೆಯನ್ನೂ ಮಗನನ್ನೂ ಜತೆಯಲ್ಲೆ ಇರಿಸುವ ಸ್ವರ ಕೇಳಿಸಿತು:

"ಬಂದಿಯಾ ಪಾಪಿ!"

ಚಿರುಕಂಡ ಎರಡು ಅಪರಾಧಗಳನ್ನು ಮಾಡಿದ್ದ. ಒಂದು, ತಡವಾಗಿ ಬಂದುದು. ಇನ್ನೊಂದು, ಸೀಮೆಎಣ್ಣೆ ತಂದುಕೊಡದೆ ಮನೆ ಕತ್ತಲಲ್ಲೆ ಇರುವಂತೆ ಮಾಡಿದುದು. ಎರಡಕ್ಕೂ ದೊರೆಯಬೇಕಾದ ಉಗ್ರದಂಡನೆ ಎಂದರೆ ಬೆತ್ತದ ಛಡಿ ಏಟು. ತಾಯಿ ಹೊಡೆಯಲು ಬಂದರೆ ಕತ್ತಲೆಯಲ್ಲಿದ್ದರೂ ಚಿರುಕಂಡ ತಪ್ಪಿಸಿಕೊಳ್ಳುವವನಲ್ಲ. ಒಂದು ವರ್ಷವಾಗಿತ್ತು ಆತ ಬೆತ್ತದ ಏಟಿನ ರುಚಿ ನೋಡಿ. ಆದರೆ ಈ ದಿನ, ತನ್ನ ಪಾಲಿಗೆ ಸ್ಮರಣೀಯವಾದ ಈ ದಿನ, ಅಂತಹ ಏಟು ತಿನ್ನುವ ಸಂದರ್ಭ ಬಂತಲ್ಲ ಎಂದು ಅವಮಾನವೆನಿಸಿ, ದುಃಖ ತಡೆಯದೆ ಹೋಯಿತು.

ತಾಯಿ ತನ್ನನ್ನು ಹಿಡಿಯಲು ಬರದೆ ಮುಂದುವರಿಯದೆ ನಿಂತಲ್ಲೆ ನಿಂತುದನ್ನು ಕಂಡು, ಚಿರುಕಂಡ ಆಶ್ಚರ್ಯಗೊಂಡ.

ಬೈಗಳಾದರೂ ಬರಬಹುದು ಎಂದು ಆತ ನಿರೀಕ್ಷಿಸಿದ. ಆ ನಿರೀಕ್ಷೆಯೂ ಸಫಲವಾಗದಿದ್ದಾಗ, ಚಿರುಕಂಡನಿಗೆ ಸಮಾಧಾನವೇನೂ ಆಗಲಿಲ್ಲ, ಬದಲು 'ಏನೋ ಅನಾಹುತವಾಗಿರಬೇಕು' ಎಂದು ಗಾಬರಿಯಾಯಿತು.

ಆ ವಿಷಯ ನೇರವಾಗಿ ಪ್ರಶ್ನಿಸಲಾಗದೆ ಆತ ಕೇಳಿದ :

"ಬೇಗ್ನೆ ಹೋಗಿ ಸೀಮೆಎಣ್ಣೆ ತಂದುಬಿಡ್ಲಾ, ಅಮ್ಮಾ?"

ಪ್ರತಿ ಸಲವೂ ತರುತ್ತಿದ್ದುದು ಆರುಕಾಸಿನ ಸೀಮೆಎಣ್ಣೆ. ಸಿಗರೇಟಿನ ಒಂದು ಡಬ್ಬದಲ್ಲಿ. ಹತ್ತು ದಿನಗಳವರೆಗೂ ಅದು ಸಾಕಾಗುತ್ತಿತ್ತು.

"ಬೇಗ್ನ ಹೋಗಿ ಸೀಮೆಎಣ್ಣೆ ತರ್‍ತಾನಂತೆ, ಸೀಮೆಎಣ್ಣೆ...." ಎಂದು ತಾಯಿ ಅಣಕದ ಧ್ವನಿಯಲ್ಲಿ ಸಿಡಿಮಿಡಿಗುಟ್ಟುತ್ತ ಅಂದಳು. ಅಣಕಿಸಿದುದು ಆದಮೇಲೆ, ಪ್ರಶ್ನೆಗೆ ಉತ್ತರವಿತ್ತಳು:

"ಬೇಡ! ಇವತ್ತೂ ಒಂದು ರಾತ್ರೆ ಹೀಗೇ ಕಳೆದ್ಹೋಗ್ಲಿ."

"ಎಣ್ಣೆ ಮುಗಿದದ್ದು ನೆನಪಾಗ಼್ಲೇ ಇಲ್ಲ" ಎಂದು ನಿಜ ಸಂಗತಿಯನ್ನೆ ಚಿರುಕಂಡ ಹೇಳಿದ.

"ಎಲ್ಲಿಗ್ಹೋಗಿದ್ದೆ ಬೇಡ್ಕೊಂಡು?"

ಉಳಿದ ನಿಜಸಂಗತಿಯನ್ನು ಹೇಳಿ ಹಿರಿಯರ ಮನಸ್ಸನ್ನು ಎಂದಾದರೂ ಒಲಿಸುವುದು ಸಾಧ್ಯವೆ?—ಎಂದು ಚಿರುಕಂಡನ ಮನಸ್ಸು ಚಿಂತಿಸಿತು.... ಪ್ರಶ್ನೆಗೆ ಉತ್ತರವಾಗಿ, ಅಪ್ಪುವಿನ ಜತೆಯಲ್ಲಿ ಗೊತ್ತುಮಾಡಿದುದನ್ನೇ ಚಿರುಕಂಡನೂ ಹೇಳಿದ. ಮಾಸ್ತರರ ಹೆಸರಿನ ಮರೆಯಲ್ಲಿ ಪಡೆದ ರಕ್ಷಣೆ ಯಶಸ್ವಿಯಾಯಿತು. ಮಾಸ್ತರರ ಹೆಸರು ಕೇಳಿದ ಮೇಲೆ, ಸದ್ಯ, ಕೆಟ್ಟವರ ಸಂಗದಲ್ಲಿ ಹುಡುಗ ಇರಲಿಲ್ಲವಲ್ಲ ಎಂದು ಸಮಾಧಾನವೆನಿಸಿತು ಹೆತ್ತ ಕರುಳಿಗೆ.

ಆದರೂ ಅದನ್ನು ತೋರಿಸದೆ ತಾಯಿ ಅಂದಳು:

"ಇನ್ನೊಂದ್ಸಲ ಹೀಗೆಲ್ಲ ಬಿಟ್ಟ್ ಚಾಕರಿ ಮಾಡೋದಕ್ಕೆ ಹೋಗು, ನಿನ್ನ ಬೆನ್ನಿನ ಚರ್ಮ ಸುಲೀತೇನೆ."

ಅದು ತಾಯಿ ಕೊಟ್ಟ ಎಚ್ಚರಿಕೆ. ಆದರೆ ಅಂಥ ಸಂದರ್ಭಗಳಲ್ಲಿ ಇರಬೇಕಾದಷ್ಟು ಭೀಷಣವಾಗಿರಲಿಲ್ಲ ಆಕೆಯ ಧ್ವನಿ. ಆ ಮಾತಿನಲ್ಲಿ ತೀವ್ರತೆ ಇರಲಿಲ್ಲ. ಅದನ್ನು ಕಂಡು, ಮನೇಲಿ ಏನೋ ಆಗಿದೆ' ಎಂಬ ಚಿರುಕಂಡನ ಸಂದೇಹ ಬಲವಾಯಿತು.

ತಂದೆ ಮನೆಯಲ್ಲಿಲ್ಲವೆಂಬುದಂತೂ ಆಗಲೆ ಸ್ಪಷ್ಟವಾಗಿತ್ತು. ಈಗ, ಹೊಸತಾದ ಸಂಕಷ್ಟವೇನಾದರೂ ಒದಗಿಬಂತೆ? ಎಂದು ಆತನಿಗೆ ದಿಗಿಲಾಯಿತು.

ಚಿರುಕಂಡ, ಕಾತರವನ್ನು ತಡೆಹಿಡಿಯಲಾರದೆ ತಾಯಿಯನ್ನು ಕೇಳಿದ :

"ಅಪ್ಪ ಬಂದಿಲ್ವ?"

ಆಕೆ ಕೊಟ್ಟುದು ಚಟುಕು ಉತ್ತರ: "ಇಲ್ಲ."

ಆ ಉತ್ತರದಿಂದೇನೂ ಸಂದೇಹ ನಿವಾರಣೆಯಾಗುವಂತಿರಲಿಲ್ಲ.

"ಹೊಲದಲ್ಲೇ ಇದ್ದಾನ ಇನ್ನೂ?"

"ಹೊಲದಿಂದ ಬೆಳಿಗ್ಗೆನೇ ಬಂದ್ರು. ಅವರನ್ನ ಕರಸ್ಕೊಂಡಿದ್ದಾರೆ."

ಯಾರು ಎಂಬುದನ್ನು ಚಿರುಕಂಡ ಊಹಿಸಿದರೂ ವಿಷಯ ಸ್ಪಷ್ಟವಾಗಲೆಂದು ಕೇಳಿದ: "ಜಮೀನ್ದಾರರೆ?"

"ಬೇರೆ ಯಾರು?"

ಹೊಲದ ವಿಷಯವಿರಬೇಕು, ಆ ಎರಡು ಎಕರೆ ಭೂಮಿ ಅವರದೇ ಹಿರಿಯರಿಂದ ಬಂದುದು. ಆದರೆ ಚಿರುಕಂಡನ ತಂದೆ ತನ್ನ ಮದುವೆಯ ಕಾಲಕ್ಕೆ ಜಮೀನ್ದಾರರಿಂದ ಸಾಲ ಪಡೆದಿದ್ದ, ಆ ಭೂಮಿಯ ಆಧಾರದ ಮೇಲೆ ಸಂದಾಯಮಾಡುತ್ತ ಬಂದ ಹಣವೆಲ್ಲ ಜಮೀನ್ದಾರರ ಪ್ರಕಾರ ಬಡ್ಡಿಗೂ ಸರಿ ಹೋಗಿರಲಿಲ್ಲ. ಇವರದೊಂದು ಜೋಡಿ ಹೋರಿಗಳಿದ್ದುವು. ಒಮ್ಮೆ ಮಳೆಗಾಲದಲ್ಲಿ ಒಂದು ಹೋರಿ ನೀರಿನ ಪಾಲಾಯಿತು. ಉಳಿದುದಕ್ಕೆ ಜತೆಗಾರನನ್ನು ಕೊಳ್ಳಲು ಹಣವಿರಲಿಲ್ಲ. ಹೀಗಾಗಿ ಇನ್ನೊಂದು ಹೋರಿ ಜಮೀನ್ದಾರರ ಪಾಲಾಯಿತು. ಆದರೂ ಚಿರುಕಂಡನ ತಂದೆ, ಹೋರಿಗಳನ್ನು ಎರವಲು ಪಡೆದೇ ಸಾಗುವಳಿ ಮಾಡಿದ. ಜಮೀನ್ದಾರರೇ ತಮ್ಮ ಹೋರಿಗಳನ್ನು ಆತನ ಉಪಯೋಗಕ್ಕೆ ಕೊಟ್ಟರು!....ಸಾಲ ಮಾತ್ರ ತೀರಲೇ ಇಲ್ಲ.

ಅಂಥ ಸಂದರ್ಭದಲ್ಲಿ ಏನಾಗುತ್ತದೆಂಬುದು ಚಿರುಕಂಡನಿಗೆ ಗೊತ್ತಿತ್ತು. ಮಾಸ್ತರು ಅದನ್ನು ಹೇಳಿದ್ದರು. ಹಲವರ ಭೂಮಿ ಕೆಲವರ ಕೈಗೆ ಹೇಗೆ ಹೋಗುತ್ತದೆಂಬುದನ್ನು ಅವರು ವಿವರಿಸಿದ್ದರು. ಆಗ ಚಿರುಕೊಡನೇ ಹೇಳಿದ್ದ:

"ನಮ್ಮ ಮನೆ ಕತೇನೂ ಸ್ವಲ್ಪ ಮಟ್ಟಿಗೆ ಹೀಗೇ ಇದೆ, ಸರ್."

ತಾನು ಕೇಳಿ ತಿಳಿದ ವಿಷಯಗಳನ್ನು ಪರಾಂಬರಿಸಲು ಬೇರೆಯವರ ಬದುಕಿನತ್ತ ನೋಡಬೇಕಾಗಿರಲಿಲ್ಲ. ತನ್ನ ತಾಯಿ ತಂದೆ ನಡೆಸುತ್ತಿದ್ದ ಬಾಳ್ವೆಯ ಹೋರಾಟವೇ—ಅದರಲ್ಲಿ ಅವರಿಗೆ ಆಗುತ್ತಿದ್ದ ಸೋಲೇ—ಒಳ್ಳೆಯ ನಿದರ್ಶನಗಳಾಗಿದ್ದುವು.

ಜಮೀನ್ದಾರರ ದೊಡ್ಡ ಮನೆಯ ಚಾವಡಿಯ ಮುಂದೆ, ನಡುವಿಗೆ ಅಂಗವಸ್ತ್ರ ಸುತ್ತಿ, ಕೈಕಟ್ಟಿ, ಒಂದು ಅಂಗೈಯಿಂದ ಬಾಯಿ ಮುಚ್ಚಿಕೊಂಡು ದೈನ್ಯದ ಮೂರ್ತಿಯಾಗಿ ನಿಂತ ತಂದೆಯ ಚಿತ್ರವನ್ನು ಚಿರುಕಂಡ ಕಲ್ಪಿಸಿದ. ಆ ಕಲ್ಪನೆಯ ಫಲವಾಗಿ, ಆತನ ನರನಾಡಿಗಳಲ್ಲಿ ರಕ್ತ ವೇಗವಾಗಿ ಸಂಚರಿಸಿತು.

ಮೆಲ್ಲನೆ ತಾಯಿಯ ಬಳಿಗೆ ಸರಿಯುತ್ತ ಆತನೆಂದ:

"ಅಮ್ಮಾ, ನಾನು ಹೋಗಿ ಅಪ್ಪನ್ನ ನೋಡ್ಕೊಂಡು ಬರಲಾ? ಇಬ್ರು ಜತೆಯಾಗೇ ಬರ್ತೇವೆ."

ಮಗನ ಆ ಮಾತು ಕೇಳಿ, ತಾಯಿಯ ಮುನಿಸೆಲ್ಲ ಮಾಯವಾಯಿತು. ಮಮತೆಯ ಹನಿ ಒಸರಿತು. ಆಕೆ "ಬೇಡ" ಎಂದಳು. ಹಾಗೆ ಹೇಳುತ್ತ ಮಗನನ್ನು ತನ್ನೆಡೆಗೆ ಎಳೆದುಕೊಂಡಳು.

ಮೊದಲು ತಾಯಿ ತನ್ನನ್ನು ಬೈದಳೆಂದು ಚಿರುಕಂಡನಿಗೆ ಬೇಸರವಾಗಿತ್ತು. ಇವರ ಪ್ರಪಂಚವೇ ಬೇರೆ, ತನ್ನದೇ ಬೇರೆ—ಎಂದು ಆತ ಭಾವಿಸಿದ್ದ. ಆದರೆ ಈಗ ಬೈಗಳ ಹಿಂದಿದ್ದ ಹೃದಯದ ನೋವಿನ ಆಳ ಅರಿವಾದಾಗ, ತನ್ನನ್ನು ಹೆತ್ತವರನ್ನು ಸರಿಯಾಗಿ ತಾನು ಅರ್ಥಮಾಡಿಕೊಳ್ಳುತ್ತಿಲ್ಲವಲ್ಲ ಎಂದು ವ್ಯಥೆಯಾಯಿತು.

ತಾಯಿ ಮಗ ಇಬ್ಬರೂ ಗುಡಿಸಿಲಿನ ಬಾಗಿಲಿಗೆ ಬಂದರು. ಹೊರಗೆ ಮೆಟ್ಟಿಲ ಮೇಲೆ ತಾಯಿ ಕುಳಿತಳು. ಮಗ ಆಕೆಯ ಮಡಿಲಿಗೊರಗಿದ. ತಣ್ಣನೆ ಗಾಳಿ ಬೀಸುತ್ತಿತ್ತು. ಹಿತ್ತಲಲ್ಲಿದ್ದ ಬಾಳೆಯ ಗಿಡಗಳ ಒಣಗಿದ ಉದ್ದನೆಯ ಎಲೆಗಳು ಅಸಹಾಯಕತೆಯಿಂದ ಮಡಚಿ, ಸೋಗೆಯಾಗಿ, ಗಾಳಿಗೆ ಅತ್ತಿಂದಿತ್ತ ಬೀಸುತ್ತಿದ್ದುವು. ಹಸುರೆಲೆಗಳು ಹರಿದು ಚಿಂದಿಯಾದರೂ, ಹೆದರದೆ ನಗುನಗುತ್ತ ಗಾಳಿಯೊಡನೆ ಕದನ ನಡೆಸುತ್ತಿದ್ದುವು. ಅಂಗಳದಲ್ಲಿದ್ದ ಎರಡು ತೆಂಗಿನ ಮರಗಳಿಂದಲೂ ಗರಿಗಳು ಎತ್ತರದಲ್ಲಿ ಟಪಟಪಟಪ ಸದ್ದು ಮಾಡುತ್ತಿದ್ದವು—ಬೇರೆ ತಾಳವೇ ತಿಳಿಯದೆಂಬಂತೆ, ಏಕಪ್ರಕಾರವಾಗಿ. ಆಕಾಶದಲ್ಲಿ ಚಂದ್ರ ಇನ್ನೂ ಬಂದಿಲ್ಲವೆಂದು ಸಹಸ್ರ ನಕ್ಷತ್ರಗಳು ಅರಾಜಕತೆಯ ರಾಜ್ಯಭಾರ ನಡೆಸಿದ್ದುವು.

ತಾಯಿಯ ಮಡಿಲಲ್ಲಿ ತಲೆಯಿಟ್ಟು ಚಿರುಕಂಡ ಆಕಾಶವನ್ನೊಮ್ಮೆ ನೋಡಿದ.

ಆ ವಿಶಾಲತೆಯ ಎದುರಿನಲ್ಲಿ ತಾನೊಂದು ಚುಕ್ಕಿ ಮಾತ್ರ ಎಂದು ಆತನಿಗೆ ತೋರಿತು.

ತಾಯಿ ಮಗನ ತಲೆಗೂದಲನ್ನು ನೇವರಿಸಿದಳು. ಮೂರು ಹಡೆದು ನಾಲ್ಕಾರು ತಿಂಗಳು ಇರದೆ ಅವು ಕಣ್ಣು ಮುಚ್ಚಿದ ಮೇಲೆ, ಚಿರುಕಂಡ ಬಂದಿದ್ದ. ಇದರ ಲೀಲೆ ಎಷ್ಟು ದಿನವೊ?—ಎಂದು ದಂಪತಿ ಚಿಂತೆಯಲ್ಲೇ ಇದ್ದರು. ಎಂಟು ಒಂಭತ್ತು ತಿಂಗಳ ಬಳಿಕ ಅವರಿಗೆ ಧೈರ್ಯ ಬಂತು. ಹಳೆಯದರ ಜತೆಗೆ ಹೊಸ ಹರಕೆಗಳನ್ನು ಹೊತ್ತರು. ಹಾಗೆ ಬೆಳೆದಿದ್ದ ಚಿರುಕಂಡ. ಬಡಕಲು ಮೈ. ಆದರೆ ತಾಯಿಗೆ ಅದೇ ಮೆಚ್ಚಿನದು. ಆತ ಚುರುಕಾದ ವಿದ್ಯಾರ್ಥಿಯೆಂದು ಎಲ್ಲರೂ ಹೇಳುತ್ತಿದ್ದರು. ಮಗನನ್ನು ನೀಲೇಶ್ವರಕ್ಕೆ ಓದಲು ಕಳುಹಬೇಕೆಂದು ತಂದೆಗೆ ಆಸೆಯಿತ್ತು. ಆದರೆ ಮಗನನ್ನು ಬಿಟ್ಟಿರಲು ತಾಯಿ ಒಪ್ಪಲಿಲ್ಲ. ತನ್ನ

ಪುತ್ರವಾತ್ಸಲ್ಯವನ್ನು ಅದಕ್ಕೆ ಕಾರಣವಾಗಿ ಕೊಡದೆ ಆಕೆ ಅಂದಿದ್ದಳು :

"ಇರೋ ಸಾಲ ಮತ್ತಷ್ಟು ಜಾಸ್ತಿಯಾಗಲೀಂತ ಮಾಡಿದ್ದೀರೇನು?"

"ಸಾಲದ್ದೇನು ಬಿಡು. ನಾವು ತೀರಿಸದೇ ಇದ್ದರೆ ದೊಡ್ಡೋನಾದ್ಮೇಲೆ ಅವನೇ ತೀರಿಸ್ತಾನೆ."

ಆಗ ಅಕೆ ಕಣ್ಣೀರಿನ ಬಾಣ ಬಿಟ್ಟು ಹೇಳಿದ್ದಳು:

"ಇರೋ ಒಬ್ಬ ಕಂದ ಕಣ್ಣೆದುರಿಗಿದ್ದಾನೇಂತ ನಿಮಗೆ ನಿದ್ದೆ ಬರೋದಿಲ್ಲ. ಅಲ್ಲ?"

"ಬಿಡ್ತು ಅನ್ನೇ !" ಎಂದು ಹೇಳಿದ ತಂದೆ, ಮಗನನ್ನು ಓದಲು ಕಳುಹುವ ಯೋಚನೆಯನ್ನೆ ಬಿಟ್ಟುಕೊಟ್ಟ.

ಆ ತಾಯಿ ಮಗನನ್ನು ಅತಿಯಾಗಿ ಪ್ರೀತಿಸುತ್ತಿದ್ದಳು. ಆ ಪ್ರೀತಿಯ ಕಾರಣದಿಂದಲೇ ಅವನ ಮೇಲೆ ರೇಗುತ್ತಿದ್ದಳು.

ಈ ವಿಪರೀತ ವರ್ತನೆಗಾಗಿ ಗಂಡ ಆಕೆಯನ್ನು ಟೀಕಿಸಿದರೆ, ಆತನ ಮೇಲೂ ಸಿಟ್ಟಾಗುತ್ತಿದ್ದಳು.

"ನನ್ನ ಒಡವೇನ್ನ ಹ್ಯಾಗೆ ನೋಡ್ಕೋಬೇಕು ಅನ್ನೋದು ನನಗೆ ಗೊತ್ತಿದೆ. ನೀವು ಸುಮ್ನಿರಿ !" ಎಂದು ಹೇಳಿ, ಆತ ತುಟಿ ತೆರೆಯದಹಾಗೆ ಮಾಡುತ್ತಿದ್ದಳು.

ಈ ದಿನ, ತಮ್ಮ ಇರುವಿಕೆಗೆ ಧಕ್ಕೆಯುಂಟುಮಾಡುವ ಸಂಕಟ ಒದಗಿದೆ ಎಂದು ಆಕೆಯ ಹೃದಯ ಬಿರುಕುಬಿಟ್ಟಿತ್ತು. ತನ್ನ ಅಸಹಾಯಕತೆಯನ್ನು ಮರೆಮಾಡಲು ಆಕೆ ಕ್ರೋಧದ ಮುಖವಾಡ ಧರಿಸಿದ್ದಳು. ಅಂಥ ದಿನವೇ ತನ್ನ ಕಂದಮ್ಮ ಬಳಿಯಲ್ಲಿರಲಿಲ್ಲವೆಂದು ಅವಳ ದುಗುಡ ಇಮ್ಮಡಿಸಿತ್ತು.

ಈಗ ಮಗನನ್ನು ಮಡಿಲಲ್ಲಿ ಒರಗಿಸಿಕೊಂಡು, ಆ ಮೈಯ ಶಾಖದಿಂದ ಮನಸ್ಸು ತಣಿಸುತ್ತ ಆಕೆ ಕುಳಿತಳು.

ಮಗ ಸೊರಗಿರುವನೆಂಬ ಯೋಚನೆಯಿಂದ ಒಂದು ಪ್ರಶ್ನೆ ಹುಟ್ಟಿತು:

"ಹೊಟ್ಟೆ ಹಸಿದಿದೆಯೇನೋ ಚಿರೂ?"

ಆದರೆ ಆ ಕ್ಷಣ, ಆತನ ಸುತ್ತಲೂ ಸುಳಿಯುತ್ತಿದ್ದ ಸಹಸ್ರ ಯೋಚನೆಗಳಲ್ಲಿ ಹೊಟ್ಟೆಯ ಹಸಿವಿಗೆ ಮಾತ್ರ ಸ್ಥಾನವಿರಲಿಲ್ಲ.

"ಇಲ್ಲಮ್ಮ."

"ಹಸಿವಾಗಿದ್ರೆ ಬಡಿಸ್ತೇನೆ."

"ಬೇಡ, ಅಪ್ಪ ಬರ್ಲಿ."

"ಅವರು ಬರೋದು ಎಷ್ಟು ಹೊತ್ತೊ?"

"ಪರವಾಗಿಲ್ಲಮ್ಮ , ಮಧ್ಯಾಹ್ನ ಪಟ್ಟಾಗಿ ಹೊಡೆದಿದ್ದೇನೆ."

ಅದು ಪೂರ್ಣ ಸತ್ಯವಾಗಿರಲಿಲ್ಲ; ಆದರೆ ತಾಯಿಗೆ ಆ ಮಾತಿನಿಂದ ಸಮಾಧಾನವಾಗುವುದೆಂದು ಚಿರುಕಂಡನಿಗೆ ಗೊತ್ತಿತ್ತು.

ತಾಯಿ ಸುಮ್ಮನಾದಳು. ಒಂದು ಕ್ಷಣ ಗಾಳಿ ಬೀಸಲಿಲ್ಲ. ತಾಯಿ ಮಗ ಮುಂದೇನು ಮಾತನಾಡುವರೊ ಎಂದು ಕುತೂಹಲ ತಳೆದು ಕಿವಿಯೊಡ್ಡಿ ನಿಂತಂತೆ, ಬಾಳೆಯ ತೆಂಗಿನ ಮರಗಳು ಸ್ತಬ್ಧವಾದುವು. ಮತ್ತೆ ಗಾಳಿ ಬೀಸಿತು. ಮೊದಲಿನದೇ ಕಚಕಚ ಪಟಪಟ ಟಿಪಟಿಪ.

ತಾಯಿ, ನಿಧಾನವಾಗಿ ಬಿಡಿಬಿಡಿಯಾಗಿ ಹೇಳಿದಳು:

"ನಿಮ್ಮ ತಂದೆಗೆ ತುಂಬ ಚಿಂತೆಯಾಗಿದೆ ಚಿರೂ."

"ನನಗೆ ಗೊತ್ತಮ್ಮಾ."

ಆ ಉತ್ತರವನ್ನು ಇದಿರು ನೋಡದೇ ಇದ್ದ ತಾಯಿಗೆ ಆಶ್ಚರ್ಯವಾಯಿತು.

"ಏನು ಗೊತ್ತು?"

"ನಾವೀಗ ತುಂಬಾ ತೊಂದರೇಲಿದ್ದೇವೆ ಅಂತ."

"ಎಂಥಾ ತೊಂದರೆ ಹೇಳು?"

"ನಮ್ಮ ಹೊಲ ಕೈಬಿಟ್ಟು ಹೋಗೋ ಸ್ಥಿತೀಲಿದೆ, ಅಲ್ವ ಅಮ್ಮಾ?"

ಮಾತನಾಡುತ್ತಿದ್ದವನು ನಿಜವಾಗಿಯೂ ತನ್ನ ಮಗನೆ? ಎಂದು ತಾಯಿ ದಿಗ್ಭ್ರಮೆಗೊಳ್ಳುವಹಾಗಿತ್ತು ಆ ಉತ್ತರ.

"ನಿಂಗೆ ಯಾರು ಹೇಳಿದ್ರು ಹಾಗಂತ?"

ಚಿರುಕಂಡ, ತಾನಿನ್ನು ಎಳೆಯ ಕೂಸಲ್ಲ—ಎನ್ನುವಂತೆ ಹೇಳಿದ:

"ನನಗೆ ಅಷ್ಟು ಗೊತ್ತಾಗಲ್ವ ಅಮ್ಮ?"

ಅರೆಕ್ಷಣ ಒದಗಿದ ಸಂಕಟದ ನೆನಪೇ ಮರೆತು, ತಾಯಿ ಮಗನ ಮುಖವನ್ನು ತನ್ನೆದೆಗೆ ಒತ್ತಿಕೊಂಡು, "ನನ್ಕಂದ" ಎಂದಳು.

ಮತ್ತೆ ಆಕೆಗೆ ನೇರವಾಗಿ ಕುಳಿತುಕೊಳ್ಳುವವರೆಗೂ ಚಿರುಕಂಡ ಉಸಿರಿಗಾಗಿ ಚಡಪಡಿಸಿದ.

ಆ ಕತ್ತಲಲ್ಲಿ ಅಸ್ಪಷ್ಟವಾಗಿ ಕಾಣಿಸುತ್ತಿದ್ದ ಮಗನ ಮುಖವನ್ನೇ ನೋಡುತ್ತ ತಾಯಿ ಕೇಳಿದಳು:

"ನಿನಗೆ ಇನ್ನೂ ಏನೇನು ಗೊತ್ತಿದೆ, ಚಿರೂ?"

ಚಿರುಕಂಡ ಸಣ್ಣಗೆ ನಕ್ಕು ಸುಮ್ಮನಿದ್ದ. 'ಎಷ್ಟೋ ವಿಷಯಗಳು ಗೊತ್ತಿವೆ' ಆದರೆ ನಿನಗೆ ಹೇಳೋ ಹಾಗಿಲ್ಲ'—ಎಂದು ಮನಸ್ಸಿನಲ್ಲೇ ಅಂದುಕೊಂಡ.

ತನ್ನೊಳಗಿದ್ದ ಭೀತಿಯನ್ನು ವ್ಯಕ್ತಪಡಿಸುತ್ತ ತಾಯಿ ಅಂದಳು:

"ಇವತ್ತು ಏನಾಗುತ್ತೊ? ಇಷ್ಟು ಹೊತ್ತಿನವರೆಗೂ ಅವರನ್ನು ಯಾಕೆ ಅಲ್ಲಿ ಕೂಡಿಸಿಕೊಂಡರೊ?"

ಚಿರುಕಂಡನಿಗೆ ಉತ್ತರ ತಿಳಿದಿರಲಿಲ್ಲ. ಆದರೂ ಆತನ ಮನಸ್ಸು ಜಮೀನುದಾರರ ಮನೆಯ ಕಡೆ ಸುಳಿಯಿತು.

ನಾಲ್ಕು ವರುಷಗಳಿಗೆ ಹಿಂದೆಯೊಮ್ಮೆ ಅದೇ ಜಮೀನ್ದಾರರ ಚಾವಡಿಯ ಎದುರು ತಾನು ಕಂಡಿದ್ದ ದೃಶ್ಯ ಚಿರುಕಂಡನ ನೆನಪಿಗೆ ಬಂತು.

...ಸಂಜೆಯ ಹೊತ್ತು. ಜನರ ಗುಂಪು ಜಮೀನ್ದಾರರ ಮನೆಯ ಮುಂದೆ ನೆರೆಯುತ್ತಿದ್ದುದನ್ನು ಕಂಡು, ಗೊಂಬೆಯಾಟದವರೊ ಡೊಂಬರೊ ಇರಬಹುದೆಂದು, ತಮಾಷೆ ನೋಡಲು ಚಿರುಕಂಡನೂ ಅಲ್ಲಿಗೆ ಹೋಗಿದ್ದ. ಆದರೆ ಅಲ್ಲಿ ಅಂತಹ ಯಾವ ಆಟವೂ ಇರಲಿಲ್ಲ. ಬದಲು, ಮಧ್ಯವಯಸ್ಸಿನ ರೈತನೊಬ್ಬ ಚಾವಡಿಯ ಕುರ್ಚಿಯ ಮೇಲೆ ಕುಳಿತಿದ್ದ, ವಯಸ್ಸಿನಲ್ಲಿ ತನಗಿಂತಲೂ ಚಿಕ್ಕವರಾದ ಜಮೀನ್ದಾರರೆದುರು, ಹೊರಗೆ ಅಂಗಳದಲ್ಲಿ ಮಣ್ಣಿನ ಮೇಲೆ ಉದ್ದಂಡ ಮೈಚಾಚಿ ಕೈಜೋಡಿಸಿ ನಮಸ್ಕಾರ ಮಾಡಿದ್ದ. ಚಿರುಕಂಡ ಅಲ್ಲಿಗೆ ಹೋಗಿ ನೋಡಿದಾಗ ಮೌನ ನೆಲೆಸಿತ್ತು. ಮುಂದೆ ಜಮೀನ್ದಾರರು ಏನು ಹೇಳುವರೋ ಎಂದು ಆತುರಗೊಂಡು ಕಿವಿ ನಿಗುರಿಸಿ ಎಲ್ಲರೂ ನಿಂತಿದ್ದರು.

ಜಮೀನ್ದಾರರು ಏನೂ ಹೇಳಲೇ ಇಲ್ಲ, ಅವರು ಒಂದೇ ಸಮನೆ ಸಿಗರೇಟು ಸೇದುತ್ತ ಹೊಗೆ ಬಿಟ್ಟರು. ಅವರ ಎಡಬಲಗಳಲ್ಲಿ ಕೈಕಟ್ಟಿ ನಿಂತಿದ್ದ ಆಳುಗಳು ಇದ್ದರು.

ಮೌನವನ್ನು ಮುರಿದು ಜಮಿನ್ದಾರರ ಸ್ವರ ಗುಡುಗಿತು:

"ಏನು ಹೇಳು!"

ರೈತನಿಂದ ಉತ್ತರ ಬರಲಿಲ್ಲ.

"ಆಟ ಆಡ್ತಿದ್ದಾನೆ ಬೋಳೀಮಗ. ಬಿಗಿಯಿರೊ ಇನ್ನೆರಡು."

ಪಕ್ಕದಲ್ಲೇ ಬಾರುಕೋಲು ಹಿಡಿದು ನಿಂತಿದ್ದ ಕಟ್ಟಾಳುವೊಬ್ಬ ಮುಂದೆ ಬಂದು ಮಲಗಿದ್ದವನ ಬೆನ್ನಿನ ಮೇಲೆ ಬಾರಿಸಿದ.

ಆದರೂ ಆ ರೈತ ಏಳಲಿಲ್ಲ. ಭೂಮಿತಾಯಿಯ ಮಡಿಲಲ್ಲಿ ಮುಖವಿಟ್ಟವನು ಮೇಲಕ್ಕೆ ತಲೆ ಎತ್ತಲೇ ಇಲ್ಲ.

ಮತ್ತೂ ಸ್ವಲ್ಪ ಹೊತ್ತಾದ ಮೇಲೆ ಜಮೀನ್ದಾರರೆದ್ದು, ರೈತನನ್ನು ಶಪಿಸುತ್ತ ಆತನ ಸುತ್ತುಮುತ್ತು ನೆಲವನ್ನು ತುಳಿಯುತ್ತ ಬುಸುಗುಟ್ಟುತ್ತ ನಡೆದಾಡಿದರು.

ಚಿರುಕಂಡ ಉಸಿರು ಬಿಗಿಹಿಡಿದು, ಮಲಗಿದವನು ಯಾರೆಂದು ನೋಡಲು ಯತ್ನಸಿದ. ಆದರೆ ಮುಖ ಕಾಣಿಸಲಿಲ್ಲ.

ಕೊನೆಗೆ ಜಮೀನ್ದಾರರ ಆದೇಶದಂತೆ ಆಳುಗಳು, ಆ ರೈತನನ್ನು ಹಿಡಿದೆಬ್ಬಿಸಿದರು. ಆತ ಮುಖ ಜೋತುಹಾಕಿ ನಿಂತುಕೊಂಡ. ಆ ಮುಖದ ತುಂಬ ಮಣ್ಣಿತ್ತು. ಹಣೆಯ ಗಾಯದಿಂದ ಸುರಿದ ರಕ್ತವೂ ಕಣ್ಣೀರೂ ಮಣ್ಣಿನೊಡನೆ ಬೆರೆತು, ಅದನ್ನು ಗಾರೆಯಾಗಿ ಮಾಡಿ ಮುಖಕ್ಕೆ ಅಂಟಿಸಿದ್ದುವು.

ಜಮೀನ್ದಾರರು ಸಿಗರೇಟನ್ನು ಕೆಳಕ್ಕೆಸೆದು ತುಳಿದು, ಆತನ ಬಳಿಗೆ ಹೋಗಿ ಕತ್ತು ಹಿಡಿದು ಕುಲುಕಿದರು.

"ನಾಳೆ ಸಾಯಂಕಾಲದೊಳಗೆ ಇನ್ನೂರು ರೂಪಾಯಿ ತಂದು ಒಪ್ಪಿಸದೇ ಹೋದ್ರೆ ನಿನ್ನನ್ನು ಪೋಲೀಸರಿಗೆ ಕೊಡ್ತೇನೆ !"

ಗುಂಪು ಚೆದುರಿತು. ಕೆಲವರು ಆ ರೈತನನ್ನು ಹಿಂಬಾಲಿಸಿದರು.

ಯಾಕೆ ಹೀಗಾಯಿತೆಂದು ತಿಳಿಯಲು ಬಯಸಿ, ಹತ್ತಿರದಲ್ಲಿದ್ದ ಒಬ್ಬ ಹುಡುಗನನ್ನು ಚಿರುಕಂಡ ಕೇಳಿದ: "ಯಾಕೆ ಹೊಡೆದ್ರು ಅವನಿಗೆ."

"ಯಾಕೊ! ಯಾರಿಗೆ ಗೊತ್ತು!" ಎಂದ ಆ ಹುಡುಗ. ಅವನೂ ತಮಾಷೆ ನೋಡಲು ಬಂದು ನಿಂತಿದ್ದನೇ ಹೊರತು, ಅದೇನೆಂದು ತಿಳಿದುಕೊಂಡಿರಲಿಲ್ಲ.

ಆದರೆ ಜನರ ಬಾಯಿಗಳಿಂದ ವಿವಿಧ ಮಾತುಗಳು ಕೇಳಿಸಿದುವು.

"ಅವನ್ದೇ ತಪ್ಪು, ತೋಟ ಬಿಟ್ಬಿಟ್ಟು ಯಾಕೆ ಹೋಗ್ಬೇಕಾಗಿತ್ತು?"

"ಹೆಂಡ್ತಿಗೆ ಕಾಯಿಲೇಂತ ಹೋದ್ನಂತೆ ಕಣಪ್ಪೋ."

"ತೋಟ ಸೂರೆ ಮಾಡ್ದೋರು ಯಾರೂಂತ?"

"ತೆಂಗಿನಕಾಯಿ, ಹಲಸಿನಕಾಯಿ, ಬಾಳೆಗೊನೆ, ತರಕಾರಿ—ಒಂದೂ ಬಿಟ್ಟಿಲ್ವಂತ ನೋಡಪ್ಪ."

"ರಾತಾರಾತ್ರ ಅದನ್ನೆಲ್ಲಾ ಪರವೂರಿಗೆ ಹ್ಯಾಗೆ ಸಾಗ್ಸಿದ್ರೋ?"

"ಅವನೇ ಕದ್ದು ಮಾರ್ಬಿಟ್ಟು ಬಂದಿದ್ದಾನೋ ಏನೋ."

"ಅಥವಾ, ಕಳುವಿನ ಮಾಲೆಲ್ಲಾ ಜಮೀನ್ದಾರರ ಮನೆಯೊಳಗೇ ಇದೆಯೋ!"

ಆ ಕೊನೆಯ ಮಾತಿಗೆ ಉತ್ತರವಾಗಿ ಮೌನ ನೆಲೆಸಿತು. ಆ ಮೌನಕ್ಕೆ ಭಂಗ ತಂದು ಯಾರೋ ಒಬ್ಬರು ಗಟ್ಟಿಯಾಗಿ ನಕ್ಕರು.

"ಅಲ್ಲ, ನಾಳೆ ಸಾಯಂಕಾಲದೊಳಗೆ ಪರಿಹಾರ ಕೊಡೋಕ್ಕೆ ಅವನಿಗೆ ಇನ್ನೂರು ರೂಪಾಯಿ ಯಾರು ಕೊಡ್ತಾರೇಂತ?"

"ಸಾಲ ತಗೋಬೇಕು."

"ಯಾರಪ್ಪ ನಮ್ಮ ಹಳ್ಳೀಲಿ ಅಷ್ಟು ಸಾಲ ಕೊಡೋರು?"

"ಇನ್ಯಾರು? ಜಮಿನ್ದಾರ್ರು!"

ಆ ಮಾತು ಕೇಳಿ ಈ ಸಲ ಇಬ್ಬರು ಮೂವರು ನಕ್ಕರು.

"ಅಂತೂ ನಾಲ್ಕು ವರ್ಷ ಜಮೀನ್ದಾರರ ಕಾಡು ಕಡಿದೂ ದುಡಿದೂ ಅವನು ತೋಟ ಮಾಡ್ದ. ಈಗ ಕಳ್ಳತನ ಆಯ್ತೂಂತ ಕಾರಣ ಹೇಳಿ ಅವನನ್ನ ಓಡಿಸ್ಬಿಡ್ತಾರೆ."

ಹಾಗೆ ಹೇಳಿದವನು ಮಾತಿನ ಜತೆಯಲ್ಲೇ ನಿಟ್ಟುಸಿರುಬಿಟ್ಟ.

ಆಗ ಚಿರುಕಂಡನನ್ನು ಮುಖ್ಯವಾಗಿ ಬಾಧಿಸಿದ ಸಮಸ್ಯೆಯೊಂದೇ: ದುಡ್ಡು ಒಪ್ಪಿಸದೇ ಹೋದರೆ ಪೋಲೀಸರಿಗೆ ಕೊಡ್ತೇನೆ—ಎಂದಿದ್ದರು ಜಮೀನ್ದಾರರು. ಆದರೆ ಅವರ ಹಳ್ಳಿಯಲ್ಲಿ ಪೋಲೀಸರು ಇರಲಿಲ್ಲ. ಅಂದಮೇಲೆ ಪೋಲೀಸರಿಗೆ ಒಪ್ಪಿಸೋದು ಹೇಗೆ ಸಾಧ್ಯ? ಎತ್ತರದ ಕೆಂಪು ಟೋಪಿ ಇಟ್ಟುಕೊಂಡ ಪೋಲೀಸಿನವನು ದೂರದ ಪಟ್ಟಣದಿಂದ ಎಂದಾದರೊಮ್ಮೆ ಬರುವುದನ್ನು ಚಿರುಕಂಡ ಕಂಡಿದ್ದ. ಆಗ ಹುಡುಗರೆಲ್ಲ ಮರೆಯಾಗಿ ನಿಂತು ಅವನನ್ನು ನೋಡುತ್ತಿದ್ದರು... ಈಗ ರೈತನನ್ನು ಬಂಧಿಸುವುದಕ್ಕೋಸ್ಕರ ಪಟ್ಟಣದಿಂದ ಪೋಲೀಸರು ಬರುವರೊ, ಅಥವಾ ಅಲ್ಲಿಗೇ ಅವನನ್ನು ಒಯ್ದು ಕೊಡುವರೊ? ಈ ಸಂದೇಹ ಪರಿಹಾರವಾಗಲೆಂದು ಹತ್ತಿರದಲ್ಲಿದ್ದೊಬ್ಬ ರೈತನನ್ನು ಆತ ಕೇಳಿದ:

"ಮಾವ, ಪೋಲೀಸರು ಬಂದಿದ್ದಾರಾ?"

"ಎಲ್ಲರೂ ಆ ಪ್ರಶ್ನೆ ಕೇಳಿದ ಹುಡುಗನತ್ತ ನೋಡಿದರು. ಆ ರೈತ ಉತ್ತರವಿತ್ತ:

"ಯಾರಿಗೆ ಗೊತ್ತು?"

ಆದರೆ ಗುಂಪಿನಿಂದ ಬೇರೆ ಯಾರೋ ಒಬ್ಬರು ಹೇಳಿದರು:

"ಬಂದಿದ್ದರೂ ಇರಬಹುದು. ಜಮೀನ್ದಾರರ ಅಪ್ಪಣೆ ಪಡೆಯೋದಕ್ಕೆ ಅವರ ಮನೆಯೊಳಗೆ ಕೂತಿದ್ದಾರೋ ಏನೋ!"

ಕಡು ಬೇಸರವೆನಿಸಿ ಚಿರುಕಂಡ ಮನೆಗೆ ಬಂದ. ಜಮೀನ್ದಾರರು ತುಂಬಾ ಕೆಟ್ಟವರೆಂಬುದು ಆತನ ಅಭಿಪ್ರಾಯವಾಗಿತ್ತು. ಮನೆಗೆ ಬಂದವನೇ ಹೊಲದಿಂದ ಆಗತಾನೆ ಹಿಂದಿರುಗಿದ ತಂದೆಗೆ ತಾನು ನೋಡಿದುದೆಲ್ಲವನ್ನೂ ಹೇಳಿದ. ಆದರೆ ತಂದೆ ಯಾವ ಆಸಕ್ತಿಯನ್ನೂ ತೋರಲಿಲ್ಲ, ಅಸಡ್ಡೆಯಿಂದ "ಹೂಂ" ಎಂದನು ಮಾತ್ರ. ತನ್ನ ತಂದೆ ಜಮೀನ್ದಾರರನ್ನು ಜರೆಯಬಹುದು ಎಂದು ಚಿರುಕಂಡ ಭಾವಿಸಿದ್ದ. ಆದರೆ ತಂದೆ ಅಂಥದೇನನ್ನೂ ಮಾಡಲಿಲ್ಲ. ಆಗ ಮಗನಿಗೆ ನಿರಾಶೆಯಾಗಿತ್ತು.

....ಅದು ತಾನು ಸಣ್ಣವನಾಗಿದ್ದಾಗ ನಡೆದದ್ದು.

ಈಗ ಆಕಾಶ ನೋಡುತ್ತ ಈ ಘಟನೆಯನ್ನು ಸ್ಮರಿಸುತ್ತ ಚಿರುಕಂಡನ ಮೈ ರೋಮ ಮುಳ್ಳಾಯಿತು. ತನ್ನ ತಂದೆಗೆ ಜಮೀನ್ದಾರರ ಮನೆಯಲ್ಲಿ ಏನೂ ಆಗಿರಲಾರದಲ್ಲವೆ?....ಆ ದಿನ ಹಿಂಸೆಗೊಳಗಾಗಿದ್ದ ಬಡ ರೈತನಿಗೆ ಏನಾಯಿತು? ಚಿರುಕಂಡನಿಗೆ ಸರಿಯಾಗಿ ನೆನಪಿರಲಿಲ್ಲ. ಆದರೆ ಆ ರೈತ ಮತ್ತೆ ಎಲ್ಲೂ ಕಾಣಲು ದೊರೆತಿರಲಿಲ್ಲ. ಆ ವರ್ಷವೇ ಊರು ಬಿಟ್ಟು ಹೋದಹಾಗಿತ್ತು. ಈಗ ತನ್ನ ತಂದೆ—

"ಚಿರೂ, ನಿನ್ನಪ್ಪ ಬರ್ತ್ತಿದ್ದಾರೆ, ಏಳು !"

ತಾಯಿ ಮಾತು ಮಗನ ಯೋಚನೆಗಳಿಗೆ ತಡೆಹಾಕಿತು.

ಚಿರುಕಂಡ ಎದ್ದು ಕುಳಿತು, ಕತ್ತಲಲ್ಲಿ ದೂರಕ್ಕೆ ನೋಡಿದ. ಚಂದ್ರಬಿಂಬ ಮೆಲ್ಲನೆ ಉದಿಸುತ್ತಿತ್ತು. ಅದರ ಈಚೆಗೆ ಸಮೀಪದಲ್ಲೆ, ಒಣಗಿದ ತಾಳೆಗರಿಯನ್ನು ಹಿಡಿಮಾಡಿ ಕಟ್ಟಿ ಉರಿಸಿದ ಬೆಳಕು, ಅದನ್ನು ಬೀಸಿಬೀಸಿ ಹಾದಿ ನೋಡುತ್ತ ಬರುತ್ತಿದ್ದ ವ್ಯಕ್ತಿ...

ತಾಯಿ ಒಳಹೋಗಿ, ಮಣ್ಣಿನ ಹಣತೆಗಿಷ್ಟು ಕೊಬ್ಬರಿ ಎಣ್ಣೆ ಸುರಿದು, ಅದರಲ್ಲೇ ಇದ್ದ ಅರಿವೆಯ ಬತ್ತಿಯ ಮುಖವನ್ನು ಮೇಲಕ್ಕೆಳೆದು, ಅಡುಗೆ ಒಲೆಯಿಂದ ಬೆಳಕು ಅಂಟಿಸಿಕೊಂಡು ಬಂದಳು.

ಅಂಗಳ ಸೇರಿದ ತಂದೆ, ಕೈಯಲ್ಲಿದ್ದ ಬೆಳಕು ಆರಿಸಿದ. ಅಲ್ಲೆ ಬಾಳೆ ಗಿಡಗಳ ಬುಡದಲ್ಲಿ ಮಣ್ಣಿನ ಕೊಡದಲ್ಲಿದ್ದ ನೀರಿನಿಂದ ಕೈಕಾಲು ಮುಖ ಹನಿಸಿಕೊಂಡ. ಒಳ ಬಂದು, ನಡುವಿನಲ್ಲಿದ್ದ ಅಂಗವಸ್ತ್ರವನ್ನು ಬಿಚ್ಚಿ ನೀರೊರೆಸಿದ.

ಆತ ಉರಿಯುತ್ತಿದ್ದ ಹಣತೆಯನ್ನು ನೋಡಿದ. 'ಸೀಮೆಎಣ್ಣೆ ಇಲ್ವ ಮನೇಲಿ?' ಎಂದು ಕೇಳಲಿಲ್ಲ.

ಈ ದಿನ ಆತ ನದಿಯಲ್ಲಿ ಸ್ನಾನ ಮಾಡಿರಲಿಲ್ಲವೆಂಬುದು ಚಿರುಕಂಡನ ತಾಯಿಗೆ ಗೊತ್ತಿತ್ತು. ಆದರೆ ಕೈಕಾಲು ತೊಳೆದೇ ಒಳಬಂದುದನ್ನು ಕಂಡು 'ಈಗ ಸ್ನಾನ ಮಾಡ್ತೀರಾ?' ಎಂದು ಅವಳು ಕೇಳಲಿಲ್ಲ.

ಜಮೀನ್ದಾರರ ಮನೆಯಲ್ಲಿ ಏನಾಯಿತೆಂಬುದನ್ನು ತಿಳಿಯಲು ಆಕೆ ಕುತೂಹಲಿಯಾಗಿದ್ದಳು. ಚಿರುಕಂಡ ಕೂಡ. ಆದರೆ ಗಂಡನ ಮುಖದ ಮೇಲಿದ್ದ ಸಂಕಟವನ್ನು ಕಂಡು ತಾಯಿ ನೇರವಾಗಿ ಏನನ್ನೂ ಕೇಳಲಿಲ್ಲ.

"ತುಂಬಾ ಹೊತ್ತಾಯ್ತು, ಅಲ್ವ?" ಎಂದು ಆಕೆ ಊಟಕ್ಕೆ ತಟ್ಟೆಗಳನ್ನು ಇಟ್ಟಳು.

"ಎಲ್ಲಾ ಮುಗಿಸಬೇಕಾದರೆ ಇಷ್ಟು ತಡವಾಯ್ತು, ನೋಡು" ಎಂದು ಉತ್ತರವಿತ್ತು, ತಂದೆ ಊಟಕ್ಕೆ ಕುಳಿತ. ದುಃಖ ತುಂಬಿದ ದೃಷ್ಟಿಯಿಂದ ತನ್ನ ಬಳಿಯಲ್ಲಿ ಕುಳಿತಿದ್ದ ಮಗನನ್ನೊಮ್ಮೆ ನೋಡಿದ.

'ಎಲ್ಲಾ ಮುಗೀಬೇಕಾದರೆ ಇಷ್ಟು ತಡ' ಎಂದಿದ್ದ ತಂದೆ. ಹಾಗೆಂದರೆ ಏನು? ಏನಾಯಿತು?

ತಾಯಿ, ತಟ್ಟೆಗಳಿಗೆ ಗಂಜಿ ಸುರಿದಳು. ಬಾಳೆ ಎಲೆಯ ಒಣಗಿದ ಚೂರುಗಳ ಮೇಲೆ ಉಪ್ಪನ್ನೂ ಉಪ್ಪಿನಕಾಯಿಯ ಸಣ್ಣ ಒಂದೊಂದು ಹೋಳನ್ನೂ ಬಡಿಸಿದಳು.

ಎರಡು ತುತ್ತು ಉಂಡಾದ ಮೇಲೆ ತಂದೆ ಹೇಳಿದ:

"ಇವತ್ತಿನಿಂದ ನಾವು ಜಮೀನ್ದಾರರ ಒಕ್ಕಲು, ಕಲ್ಯಾಣಿ."

ಆ ಸ್ವರ ತಡವರಿಸಿತು. ಕಣ್ಣುಗಳಲ್ಲಿ ನೀರು ತುಂಬಿತು.

ಕಲ್ಯಾಣಿ ಮಾತನಾಡಲಿಲ್ಲ. ತನ್ನ ಕತ್ತನ್ನು ಯಾರೋ ಹಿಸುಕಿದ ಅನುಭವವಾಗಿ ಆಕೆ ಮಂಕು ಕವಿದಂತೆ ನಿಂತಳು.

ಚಿರುಕಂಡ, ತಂದೆಯ ಮಾತಿನ ಅರ್ಥವನ್ನು ಗ್ರಹಿಸಿದ. ತಂದೆ ತಾಯಿಯನ್ನು ಹೆಸರು ಹಿಡಿದು ಕರೆಯುವ ಪದ್ಧತಿಯೇ ಇರಲಿಲ್ಲ. ಆದರೆ ಈಗ ಬದುಕಿನೊಂದು ಇರುಕಟ್ಟಿನ ಕ್ಷಣದಲ್ಲಿ, ತನ್ನನ್ನು ಕೈಹಿಡಿದಿದ್ದ ಹೆಣ್ಣನ್ನು ಆತ ಹೆಸರೆತ್ತಿ ಸಂಬೋಧಿಸಿದ್ದ.

ಮತ್ತೆರಡು ತುತ್ತು ಉಂಡು ತಂದೆ ಎದ್ದುಬಿಟ್ಟ.

"ನನಗೆ ಸಾಕು!"

ಚಿರುಕಂಡನಿಗೂ ಗಂಟಲು ಒತ್ತರಿಸಿ, ಏಳಬೇಕೆನ್ನಿಸಿತು. ಆದರೆ ಹಾಗೆ ಎದ್ದರೆ, ತಾಯಿ ಊಟವನ್ನೇ ಮಾಡಲಾರಳೆಂದು ಭಾವಿಸಿ, ಆತ ಅಲ್ಲಿಯೇ ಕುಳಿತ.

ತಾಯಿ ನಿಟ್ಟುಸಿರು ಬಿಟ್ಟು ಮಗನನ್ನು ಕೇಳಿದಳು:

"ನಿನಗೆ ಇನ್ನೂ ಒಂದಿಷ್ಟು ಗಂಜಿ ಇಕ್ಲೇನೋ ?"

"ಬೇಡ. ಹಸಿವಿಲ್ಲ."

ವಯಸ್ಸಾದವರ ಧ್ವನಿಯ ಹಾಗಿತ್ತು ಚಿರುಕಂಡನ ಆ ಸ್ವರ. ಅದನ್ನು ಕೇಳಿ ಆತನಿಗೇ ಆಶ್ಚರ್ಯವಾಯಿತು.

ತಂದೆ ಬಿಟ್ಟು ಎದ್ದಿದ್ದ ತಟ್ಟೆಯ ಎದುರಲ್ಲೇ ಕುಳಿತು ತಾಯಿ ಉಣ್ಣತೊಡಗಿದಳು. ಆಕೆಯ ಕಣ್ಣುಗಳಿಂದ ಎರಡು ತೊಟ್ಟು ಕಣ್ಣೀರು ಬಟ್ಟಲಿನೊಳಕ್ಕೆ ಧುಮುಕಿದುದನ್ನು ಚಿರುಕಂಡ ನೋಡಿದ. ದುಃಖಕ್ಕೆ ಶ್ರುತಿ ಹಿಡಿಯುತ್ತ ಸಿಂಬಳ ಆಕೆಯ ಮೂಗಿನೊಳಗೆ ಗೂರಗೂರವಾಡುತ್ತಿದ್ದುದೂ ಆತನಿಗೆ ಕೇಳಿಸಿತು.

....ಅಂತೂ ಊಟ ಮುಗಿಯಿತು. ಮಲಗುವುದಕ್ಕೆ ಮುಂಚೆ ಎಲೆ ಅಡಿಕೆ ಹಾಕಿಕೊಳ್ಳುವುದು ಚಿರುಕಂಡನ ತಂದೆಯ ಅಭ್ಯಾಸ. ಈ ರಾತ್ರೆ ಆತ ಅದರ

ಗೊಡವೆಗೆ ಹೋಗಲಿಲ್ಲ. ತಾಯಿಯೂ ತಂದುಕೊಡಲಿಲ್ಲ.

ಅತ್ಯಂತ ದುಃಖದ ಆ ಸನ್ನಿವೇಶದಲ್ಲಿ, ಗೋಳಾಡದೆ ಚೀರಾಡದೆ ಭಾರವಾದ ಹೃದಯಗಳನ್ನು ಬಿಗಿಹಿಡಿದು ತನ್ನ ತಾಯಿ ತಂದೆ ವರ್ತಿಸುತ್ತಿದ್ದುದನ್ನು ಕಂಡ ಚಿರುಕಂಡ ಮೂಕನಾದ.

ಕಲ್ಯಾಣಿ ಎಂದಿನಂತೆ ಅಗಲವಾದ ಎರಡು ಚಾಪೆಗಳನ್ನು ಬಿಡಿಸಿದಳು. ಎರಡನ್ನೂ ಒಂದರ ಬದಿ ಇನ್ನೊಂದಕ್ಕೆ ತಗಲುವಂತೆ ಜೋಡಿಸಿ, ಹರಿದ ಬಟ್ಟೆಗಳನ್ನು ಅದರ ಮೇಲೆ ಹಾಸಿದಳು. ಹೊದೆದುಕೊಳ್ಳಲೆಂದು ನಾಲ್ಕಾರು ತೂತುಗಳಿದ್ದ ಕಂಬಳಿಗಳನ್ನೂ ತಂದಿಟ್ಟಳು. ಹೊರಹೋಗಿ ಬಂದು, ಬಾಗಿಲ ತಡಿಕೆ ಮುಚ್ಚಿ, ಗಂಡನನ್ನು ಆಕೆ ಕೇಳಿದಳು:

"ದೀಪ ಆರಿಸಲಾ?"

"ಹೂಂ."

ಯಾವುದೋ ಆಳದಿಂದೊಂದು ಧ್ವನಿ ಬೇಕೋ ಬೇಡವೋ ಎಂಬಂತೆ ಕ್ಷೀಣವಾಗಿ ಉತ್ತರವಿತ್ತ ಹಾಗೆ.

....ಹಿಂದೆಯಾದರೆ ಚಾಪೆಯ ಮೇಲೆ ಮೈ ಚಾಚಿದೊಡನೆ ಚಿರುಕಂಡ ನಿದ್ದೆ ಹೋಗುತ್ತಿದ್ದ. ಈ ದಿನ ಕತ್ತಲಲ್ಲಿ, ಕಣ್ಣು ತೆರೆದೇ ಮಲಗಿದ. ಹೆತ್ತವರ ಸಂಭಾಷಣೆಯನ್ನು ಕೇಳಬೇಕೆಂದು, ಕಿವಿ ತೆರೆದೇ ಮಲಗಿದ.

ಬೆಳದಿಂಗಳು ಗುಡಿಸಲಿನ ಸುತ್ತಲೆಲ್ಲ ಪಸರಿಸಿತು. ಸೂರುಗಳೆಡೆಯಿಂದಲೂ ಗೋಡೆಯ ಬಿರುಕುಗಳೆಡೆಯಿಂದಲೂ ಚಂದ್ರಕಿರಣಗಳು ಒಳಕ್ಕೆ ಇಣಿಕಿ 'ಸಂತೋಷವಾಗಿದ್ದೀರಾ?' ಎಂದು ಕೇಳಿದುವು. ಆದರೆ ಒಳಗೆ ಯಾರೂ ಉತ್ತರ ಕೊಡುವ ಸ್ಥಿತಿಯಲ್ಲಿರಲಿಲ್ಲ. ಯಾರಿಗೂ ಅವುಗಳ ಕಡೆಗೆ ಗಮನವಿರಲಿಲ್ಲ.

ಒಂದು ಜೀವದ ಜರ್ಜರಿತ ಹೃದಯದಿಂದ, ಮುಟ್ಟಿದರೆ ಮುರಿಯುವ ಎಳೆಯ ತಂತುಗಳಾಗಿ ಮಾತುಗಳು ಹೊರಟು ಇನ್ನೊಂದು ಜೀವದತ್ತ ಸಾಗಿದುವು:

"ಜಮೀನ್ದಾರ ಇಷ್ಟು ಕ್ರೂರಿಯಾಗ್ತಹುದೂಂತ ನಾನು ಭಾವಿಸಿರ್ಲಿಲ್ಲ, ಕಲ್ಯಾಣಿ."

"ಹೋಗಲಿ ಬಿಡಿ. ಅದನ್ನೇ ಮನಸ್ಸಿಗೆ ಹಚ್ಕೊೀಬೇಡಿ....."

"ಹಿರಿಯರಿಂದ ಬಂದ ಆಸ್ತೀನ ಕಳಕೊಂಡೆನಲ್ಲ, ನಾನು ಎಂಥವನೂಂತ ?

"......................"

"ನಿನ್ನೆ ನಾವು ಸ್ವಂತ ಆಸ್ತಿ ಇದ್ದ ರೈತರು. ಊರಲ್ಲಿ ನಮಗೆ ಮಾನ ಮರ್ಯಾದೆ ಸಿಗ್ತಿತ್ತು. ಇವತ್ತು ನಾವು ಧನಿಗಳ ಒಕ್ಕಲು, ಗುಲಾಮರು....."

ಕಲ್ಯಾಣಿ ನಿಟ್ಟುಸಿರು ಬಿಟ್ಟಳು.

"ನೀನು ಯಾವತ್ತಾದರೂ ಲೆಕ್ಕ ಹಾಕಿ ನೋಡಿದ್ಯಾ, ಕಲ್ಯಾಣಿ? ನಾವು ಸಂದಾಯ ಮಾಡಿದ ಬಡ್ಡಿಯೆಲ್ಲ ಆತ ಕೊಟ್ಟ ಸಾಲಕ್ಕಿಂತಲೂ ಜಾಸ್ತಿಯಾಗ್ತದೆ."

"ಸಾಲ ಅಂದ್ಮೇಲೆ ಯಾವಾಗ್ಲೂ ಹಾಗೇ ಅಲ್ವ?"

"ಅವನಿಗ ಸಾಷ್ಟಾಂಗ ನಮಸ್ಕಾರ ಮಾಡಿ ಕೇಳ್ದೆ, ಬೇಡ್ಕೊಂಡೆ, ಇನ್ನು ಸ್ವಲ್ಪ ಅವಧೀನಾದರೂ ಕೊಡೀಂತ. ಅವಧಿ ಕೊಟ್ಟರೂ ಸಾವಿರು ರೂಪಾಯಿ ಎಲ್ಲಿಂದ ತರ್ತೀಯಾ—ಅಂದ. ಅಗತ್ಯ ಬಿದ್ದರೆ ಇರೋ ಹೊಲದಲ್ಲಿ ಒಂದು ಸ್ವಲ್ಪ ಮಾರ್ತೇನೆ ಅಂದೆ. ಅದು ಕೇಳಿದ ತಕ್ಷಣ ರೇಗಿ ಹಾರಾಡಿದ. ಈಗಿಂದೀಗ ಸಂದಾಯ ಮಾಡ್ಬೇಕು, ಇಲ್ದಿದ್ರೆ ಕೋರ್ಟಿಗೆ ಎಳೀತೇನೆ—ಅಂದ. ಕೋರ್ಟಿಗೆ ಹೋಗಿ ರೈತರು ಯಾವತ್ತಾದ್ರೂ ಉದ್ಧಾರವಾಗಿದ್ದಾರಾ ಹೇಳು? ಅಲ್ಲಿ ಎಷ್ಟೋ ಜನ ನಿಂತಿದ್ರು—ಜೀಹುಜೂರ್ ಅನ್ನೋ ಹೊಗಳುಭಟ್ಟರು. ಬಡವ, ಕೋರ್ಟಿಗೆಲ್ಲ ಎಳೀಬಾರ್ದು, ಶಾಂತಿಯಿಂದಲೇ ಇತ್ಯರ್ಥ ಮಾಡೋಣ—ಅಂತ ನನ್ನ ಪರವಾಗಿ ವಾದಿಸುವ ನಾಟಕ ಆಡಿದ್ರು. ಏನಪ್ಪಾ, ಇಂಥ ಧನಿಗಳು ಬೇರೆ ಸಿಗಲಾರರು ; ನೀನಾದರೂ ಹೊಲ ಕಳಕೊಂಡು ಯಾವೂರಿಗೆ ಭಿಕ್ಷೆಗೆ ಹೋಗ್ತೀಯಾ? ಇಲ್ಲಿ ಧನಿಗಳ ಒಕ್ಕಲಾಗಿ ಇದ್ಬಿಡು; ಹೊಲಾನೆಲ್ಲಾ ಅವರಿಗೇ ಬರ್ಕೊಟ್ಟು, ಗೇಣಿಗೆ ನೀನೇ ವಾಪಸು ತಗೊಂಡ್ಬಿಡು—ಅಂದ್ರು.... ಏನ್ಮಾಡ್ಬೇಕೂಂತ ನನಗೆ ತೋಚ್ಲಿಲ್ಲ, ಕಲ್ಯಾಣಿ... ಪೋಲೀಸು—ಕೋರ್ಟು—ಜೈಲು ಅಂತೆಲ್ಲ ಯೋಚಿಸಿ, ನಿನ್ನ—ಚಿರುಕಂಡನ ನೆನಪಾಗಿ, ಭಯವಾಯ್ತು. ಹೊಲ ನಮ್ಮ ಹೆಸರಲ್ಲಿ ಇಲ್ದೇ ಹೋದ್ರೂ ಈ ಹಳ್ಳೀಲೇ ಈ ಹೊಲದಲ್ಲೇ ಇರಬಹುದಲ್ಲಾಂತ, ಅವರ ಹೆಸರಿಗೆ ಹೊಲ ಬರ್ಕೊಟ್ಟು, ಸಾಲ ತೀರಿಸೋಕೆ ತೀರ್ಮಾನ ಮಾಡ್ದೆ."

ಯಾವುದೋ ನೋವಿನಿಂದ ನರಳುತ್ತಿದ್ದವಳಂತೆ ತಾಯಿಯ ದೇಹ ಮೆಲ್ಲನೆ ಹೊರಳಾಡಿತು. ತಂದೆ ಒಂದು ಕ್ಷಣ ಸುಮ್ಮನಿದ್ದು ಮತ್ತೆ ಮುಂದುವರಿಸಿದ:

"ಹಾಗೆ ಒಪ್ಕೊಂಡ್ಮೇಲೆ, ಸ್ವಲ್ಪ ಹೊತ್ತು ಪುರುಸೊತ್ತು ಕೊಡಿ, ಮನೆಗೆ ಹೋಗ್ಬರ್ತೇನೆ ಎಂದೆ. ಅವರಿಗೆ ಅದೇನು ತೋಚಿತೋ ಏನೋ. ಆಗೋದಿಲ್ಲ, ಈಗ್ಲೇ ಆಗ್ಬಿಡ್ಬೇಕು ಅಂದ್ರು. ಪಟೇಲ್ರನ್ನೂ ಶ್ಯಾನುಭೋಗರನ್ನೂ ಕರೆಸಿದ್ರು, ಕಾಗದ ಪತ್ರ ಎಲ್ಲಾ ಆಯ್ತು. ಪಟೇಲ್ರು ಓದಿ ಹೇಳಿ ನನ್ನಿಂದ ಹೆಬ್ಬೆಟ್ಟಿನ ಗುರುತು ಹಾಕಿಸ್ಕೊಂಡ್ರು."

ತಾಯಿ ಮೆಲ್ಲನೆ ಕೇಳಿದಳು:

"ಬರೆದದ್ದೆಲ್ಲ ಸರಿಯಾಗಿತ್ತ?"

"ಸರಿಯೋ ತಪ್ಪೋ ಯಾರಿಗೆ ಗೊತ್ತು? ನನಗೆ ಓದುಬರಹ ಬರ್ತಿದ್ರೆ

ಹೀಗಾಗ್ತಿತ್ತ? ಅಂತೂ ಹೊಲವೇ ಅವರದೂಂತ ಆದ್ಮೇಲೆ ಹ್ಯಾಗೆ ಬರೆದರೇನು ಹೇಳು?..."

ಸ್ವಲ್ಪ ಹೊತ್ತು ಒಬ್ಬರೂ ಮಾತನಾಡಲಿಲ್ಲ.

ಒಳಗಿನೊಂದು ಗಾಯ ಮಿಸುಕಿದಂತಾಗಿ ತಾಯಿ ಕೇಳಿದಳು:

"ಜಮೀನ್ದಾರ್ರು ಒಳ್ಳೆಯವರೂಂತ ಹಿಂದೆ ಹೇಳಿದ್ರಿ, ಅಲ್ಲ?"

ತಂದೆಯ ಮುಖದಿಂದ ಬಿಸಿಯುಸಿರು ಹೊರಟಿತು.

"ಮಹಾನೀಚ, ಬಡ್ಡಿ ಅಲ್ವೆ, ಈವರೆಗೂ ಎಳನೀರು, ತೆಂಗಿನಕಾಯಿ, ತರಕಾರಿ, ಕಬ್ಬು—ಎಲ್ಲ ಕಪ್ಪ ಒಪ್ಪಿಸ್ತಿದ್ವಿ ಅವನಿಗೆ. ನಮ್ಮ ಬಿತ್ತನೆ—ಕುಯ್ಲು ಆದ್ಮೇಲೆ, ಅವನ ಹೊಲದಲ್ಲಿ ಬಿಟ್ಟಿ ದುಡೀತಿದ್ವಿ... ಅದೊಂದರ ನೆನಪೂ ಅವನಿಗಿಲ್ಲ. ಅವತ್ತು ಅವನ ಮಗಳ ಮದುವೆ ಸಮಯದಲ್ಲಿ, ನಾವು ಮದುವೆ ಕಂದಾಯ ಕೊಟ್ಟಿದ್ದಲ್ದೆ ಗುಲಾಮ ಚಾಕರೀನೂ ಮಾಡಿದ್ವಿ....'

"ಬೇಡಿ.... ಅದನ್ನೆಲ್ಲಾ ಯಾತಕ್ಕೇಂತ ಹೇಳ್ತೀರಿ?"

"ಒಳಗೆ ಉರಿ ಎದ್ದಿದೆ ಕಲ್ಯಾಣಿ. ಏನು ಮಾಡಿದರೆ ಅದು ಆರೀತೊ?"

"ನಮ್ಮ ಹಣೇ ಬರಹ. ಏನು ಮಾಡೋದಕ್ಕಾಗ್ತದೆ? ಹಾಗೆ ದೇವರು ಬರೆದಿದ್ದ."

"ದೇವರು ಅದೇನು ಬರೆದಿದ್ನೋ?"

ನೀಳವಾದ ಉಸಿರು. ಹೃದಯದ ನೋವು ಬಾಯಿ ಬಿಟ್ಟಾಗ ಆಗುವ ನರಳಾಟ. ಅವುಗಳ ನಡುವೆ ಮಾತು.

ಆ ದಿನವೆಲ್ಲ ಎಷ್ಟೊಂದನ್ನೋ ಅನುಭವಿಸಿ ಚಿರುಕಂಡ ಬಂದಿದ್ದ. ಇಲ್ಲಿ ಆ ಅನುಭವವೆಲ್ಲವನ್ನೂ ಅಣಕಿಸುವ ಹಾಗೆ, ಬೆಟ್ಟದ ಗಾತ್ರ ದುಃಖವೊಂದು ಬಾಯಿ ತೆರೆದು ಗಹಗಹಿಸುತ್ತಿತ್ತು.

.....ಚಿರುಕಂಡ ಎಚ್ಚರವಾಗಿಯೇ ಇದ್ದ. ದೀಪವಿರಲಿಲ್ಲ. ಮಲಗಿದ್ದರು ನಿಜ. ಆದರೂ ಚಿರುಕಂಡನ ತಂದೆ ತಾಯಿ ಇಳಿಸ್ವರದಲ್ಲಿ ಮಾತುಕತೆ ನಡೆಸಿಯೇ ಇದ್ದರು. ಗಟ್ಟಿಯಾಗಿ ಉಸಿರು ಬಿಡದೆ, ಅತ್ತಿತ್ತ ಮಿಸುಕದೆ, ಆತ ಅದನ್ನು ಕೇಳುತ್ತಲೇ ಇದ್ದ.

೬

ಮಾರನೆಯ ದಿನ ಚಿರುಕಂಡ ಅಪ್ಪುವನ್ನು ಹುಡುಕಿಕೊಂಡು ಹೊಲಕ್ಕೆ ಬಂದಾಗ ಮಧ್ಯಾಹ್ನವಾಗಿತ್ತು. ಸ್ನೇಹಿತನನ್ನು ಬೆಳಗಿನಿಂದಲ್ಲ ಇದಿರು ನೋಡುತ್ತಲೇ ಇದ್ದ ಅಪ್ಪುವಿಗೆ ಸಂತೋಷವಾಯಿತು.

ಅಷ್ಟರಲ್ಲೇ ಅಪ್ಪುವಿನ ತಾಯಿ, ಗಂಡನಿಗಾಗಿಯೂ ಮಗನಿಗಾಗಿಯೂ ಬುತ್ತಿ ತಂದಳು.

"ಬಿಸಿಲಲ್ಲಿ ನೀನ್ಯಾಕಮ್ಮ ಹೊತ್ಕೊಂಡು ಬಂದೆ? ಕುಟ್ಟೀನ ಕಳಿಸಿದ್ರೆ ಆಗ್ತಿರ್ಲಿಲ್ವ?" ಎಂದು ಅಪ್ಪು ತಾಯಿಯನ್ನು ಕುರಿತು ಕೇಳಿದ:

ಆ ರೀತಿ ಬುತ್ತಿ ತರುವುದರಿಂದ ತನಗೆ ದೊರೆಯುವ ಸುಖ ಎಂಥದೆಂದು ಈ ಪೋರನಿಗೆ ಹೇಗೆ ತಿಳಿಯಬೇಕು?—ಎಂದು ಮನಸ್ಸಿನಲ್ಲೆ ಅಂದುಕೊಂಡು, ತಾಯಿ ನಕ್ಕಳು. ಆಕೆ ಚಿರುಕಂಡನತ್ತ ತಿರುಗಿ ಕೇಳಿದಳು:

"ನಿಮ್ಮಮ್ಮ ಚೆನ್ನಾಗಿದ್ದಾಳೇನೊ?"

ಚಿರುಕಂಡ, "ಹೂಂ" ಎಂದ.

"ಮೂರು ಹೊತ್ತೂ ಮನೇಲೇ ಇರ್ತ್ತಾಳಲ್ಲ.. ನಮ್ಮಲ್ಲಿಗೆ ಒಂದು ಸಲ ಬಂದು ಹೋಗ್ಬಾರ್ದಾ?"

ತನ್ನ ಸ್ನೇಹಿತನ ಅಮ್ಮನ ವಿಷಯದಲ್ಲಿ ತನ್ನ ತಾಯಿ ತೋರಿದ ಅದರವನ್ನು ಕಂಡು ಅಪ್ಪುವಿಗೆ ಸಮಾಧಾನವೆನಿಸಿತು.

"ಹೇಳ್ತೇನೆ" ಎಂದ ಚಿರುಕಂಡ.

ಹುಡುಗನ ಸ್ವರ ಕ್ಷೀಣವಾಗಿತ್ತೆಂದು ತಾಯಿ ಕೇಳಿದಳು:

"ಯಾಕೆ ಸಪ್ಪಗಿದ್ದಿಯಾ?"

"ಅವನು ಇರೋದೇ ಹಾಗೆ" ಎಂದ ಅಪ್ಪು, ಸ್ನೇಹಿತನ ಪರವಾಗಿ ಆತನ ಕಡೆ ನೋಡಿ ನಗುತ್ತ.

ಹೋರಿಗಳನ್ನು ನೆರಳಿಗೊಯ್ದು ಕಟ್ಟಿ, ಮೇವು ಹಾಕಿ, ತಾನು ತೋಡಿಗೆ ಇಳಿದು ಕೈ ಬಾಯಿ ತೊಳೆದು, ಅಪ್ಪುವಿನ ತಂದೆ ಬಂದ, ಹಲಸಿನ ಮರದ ಕೆಳಗೆ ನಿಂತಿದ್ದ ಮೂವರನ್ನೂ ಆತನೊಮ್ಮೆ ನೋಡಿದ ತಾಯಿ ಅಲ್ಲೇ ಬುತ್ತಿ ಬಿಚ್ಚುತ್ತ ಚಿರುಕಂಡನನ್ನೂ ಕರೆದಳು:

"ಬಾರೋ, ಒಂದು ತುತ್ತು ಊಟಮಾಡು."

"ನನಗ್ಬೇಡಿ" ಎಂದ ಚಿರುಕಂಡ, ತಲೆ ಬೀಸುತ್ತ.

"ಸಾಕು ಬಡಿವಾರ, ಬಾ!" ಎಂದು ಅಪ್ಪುವಿನ ತಂದೆ ಅಧಿಕಾರದ ಧ್ವನಿಯಲ್ಲಿ ಹೇಳಿದ.

"ನಾನೊಲ್ಲೆ. ಮನೆಯಿಂದ ಊಟ ಮಾಡ್ಕೊಂಡೇ ಬಂದೆ. ಈಗ್ತಾನೆ ಊಟವಾಯ್ತು."

"ಹಾಗಾದರೆ ಬಿಡು" ಎಂದಳು ತಾಯಿ, ಮತ್ತೂ ಒತ್ತಾಯಿಸಬಯಸದೆ.

ಬುತ್ತಿ ಉಣ್ಣುತ್ತ, ತಂದೆ ಚಿರುಕಂಡನನ್ನು ಉದ್ದೇಶಿಸಿ ಹೇಳಿದ:

"ಊಟವಾದ್ಮೇಲೆ ಇನ್ನೇನು ? ಅಲೆಯೋಕೆ ಹೊರಡೋದೇ! ನಿಮ್ಮಪ್ಪ ಬಹಳ ಸಲಿಗೆ ಕೊಟ್ಟಿದ್ದಾನೆ ನಿಂಗೆ, ಅಲ್ಲ."

ಚಿರುಕಂಡ ಏನೂ ಹೇಳಲಿಲ್ಲ. ಮೌನವಾಗಿ ನಗುತ್ತ, ಕಲ್ಲುಗಳೊಡನೆ ಆಟವಾಡುತ್ತ, ಹೊಲಗಳತ್ತ ನೋಡುತ್ತ ಕುಳಿತ.

"ಸಲಿಗೆ ಕೊಡದೆ ಇನ್ನೇನು? ಒಬ್ನೇ ಮಗ" ಎಂದಳು ಅಪ್ಪುವಿನ ತಾಯಿ ರಾಗವಾಗಿ.

"ಈಗೀಗ ಹುಡುಗರು ಪೂರಾ ಕೆಟ್ಹೋಗ್ತಿದಾರೆ" ಎಂದು ಗೊಣಗಿ, ಚಿರುಕಂಡನತ್ತ ನೋಡುತ್ತ ತಂದೆ ಕೇಳಿದ:

"ಬೀಡಿಗೀಡಿ ಸೇದೋಕೆ ಸುರುಮಾಡಿದೀರೇನ್ರೋ?"

ಅಪ್ಪುವಿಗೆ ರೇಗಿತು.

"ನಾವು ಬೀಡಿಗೀಡಿ ಸೇದೋರಲ್ಲ" ಎಂದು ಆತ ಸಿಟ್ಟಿನಿಂದ ಉತ್ತರವಿತ್ತ. ತಾವು ಎಂಥವರು ಎಂಬುದನ್ನು ಆಗಲೇ ಅಲ್ಲಿಯೇ ಹೇಳಿಬಿಡಬೇಕೆನ್ನುವಷ್ಟು ಕೋಪ ಬಂತು ಆತನಿಗೆ.

ತಾಯಿ ನಕ್ಕಳು.

"ಬೀಡಿಗೀಡಿ ಅವರು ಯಾಕೆ ಸೇದ್ತಾರೆ? ಕೆಟ್ಟ ಚಾಳಿಯೆಲ್ಲ ಇರೋದು ದೊಡ್ಡವರ್ಗೇನೆ!"

ಕುಡಿಯುವ ಚಟವಿದ್ದ ತನ್ನನ್ನು ಟೀಕಿಸಿ ಹೆಂಡತಿ ಹಾಗೆ ಅಂದಳೆಂದು, ಆತ ಬಿರುನೋಟದಿಂದ ಆಕೆಯನ್ನು ನೋಡಿದ. ಆಕೆ, ಯಾತಕ್ಕೋಸ್ಕರ ಹಾಗೆ ಹೇಳಿದಳೆಂಬುದನ್ನು ತಿಳಿದು, ಹುಡುಗರು ಪರಸ್ಪರರನ್ನು ನೋಡಿ ನಕ್ಕರು.

ತಂದೆ-ಮಗ ಊಟ ಮುಗಿಸಿ, ತೋಡಿನ ಬಳಿಗೆ ಹೋಗಿ ಕೈ ಬಾಯಿ ತೊಳೆದರು. ಹರಿಯುತ್ತಿದ್ದ ಆ ಸ್ವಚ್ಛ ನೀರನ್ನೆ ಕುಡಿದರು. ತಾಯಿ ಆ ನೀರಿನಲ್ಲೇ ಬುತ್ತಿಯ ಪಾತ್ರೆಯನ್ನು ಬೆಳಗಿದಳು. ಹೆಂಡತಿ ತಂದಿದ್ದ ಎಲೆ ಅಡಿಕೆ ಸ್ವೀಕರಿಸಿ, ಗಂಡ ಅದರಲ್ಲಿ ಆಕೆಗೂ ಒಂದಿಷ್ಟು ಪಾಲು ಕೊಟ್ಟ.

ಮರದ ಕೆಳಗೆ ನೆರಳಿದ್ದರೂ ಹೊರಗೆ ಬಿಸಿಲು ಥಕಥಕ ಕುಣಿಯುತ್ತಿತ್ತು.

ಗಂಡ ಹೆಂಡತಿಗೆ ಹೇಳಿದ: "ನೀನು ಹೋಗಿನ್ನು."

"ಹೂಂ. ಹೊರಡ್ತೇನೆ."

ಮಗನನ್ನೊಮ್ಮೆ ದಿಟ್ಟಿಸಿ ಆತ ಹೇಳಿದ:

"ಅಮ್ಮನ ಒಟ್ಟಿಗೆ ನೀನೂ ಹೋಗ್ತೀಯೇನೋ ಅಪ್ಪು?"

ಚಿರುಕಂಡನ ಜತೆಯಲ್ಲಿ ಹೊರಟುಹೋಗಲು ಅದೊಂದು ಅವಕಾಶ. ಒಡನೆಯೇ ಹೂಂ ಎನ್ನು—ಎಂದಿತು ಮನಸ್ಸು. ಆದರೆ ತಂದೆಯೊಬ್ಬನನ್ನೇ ದುಡಿಯಲು ಬಿಟ್ಟು ಹೊರಟುಹೋಗುವುದೂ ಸರಿಯಲ್ಲವೆನಿಸಿತು.

"ಹೋರಿಗಳ ಮೈತೊಳೆದು ಹಟ್ಟಿಗೆ ಹೊಡಕೊಂಡು ಹೋಗೋದು ಬೇಡ್ವಾ?"

"ನಾನು ನೋಡ್ಕೊಳ್ತೇನೆ. ಹೋಗೋಹಾಗಿದ್ರೆ ಹೋಗು. ಆದರೆ ಬಿಸಿಲಲ್ಲಿ ಅಲೆಯೋಕೆ ಹೊರಡ್ಬೇಡ. ತೆಪ್ಪಗೆ ಮಲಕೋ."

ಅಪ್ಪು 'ಹೂಂ' ಎಂದ.

"ಚಿರುಕಂಡನನ್ನೂ ಕರಕೊಂಡು ಹೋಗು. ಸಾಯಂಕಾಲದ ತನಕ ಇಬ್ಬರೂ ಮನೇಲೆ ಇದ್ಬಿಡಿ. ಕೇಳಿಸ್ತೇನ್ರೋ?"

ಅಪ್ಪು ಮತ್ತೊಮ್ಮೆ "ಹೂಂ" ಅಂದ.

ತಾಯಿ ಮಗನೊಡನೆಯೂ ಮಗನ ಸ್ನೇಹಿತನೊಡನೆಯೂ ಗುಡಿಸಲಿಗೆ ಹೊರಟಳು. ಅಪ್ಪುವಿನ ತಂದೆ, ನೆರಳಲ್ಲಿ ಮೆಲುಕಾಡಿಸುತ್ತ, ಮಲಗಿದ್ದ ಹೋರಿಗಳತ್ತ ಒಮ್ಮೆ ದೃಷ್ಟಿ ಬೀರಿ, ತೋಳನ್ನ ದಿಂಬಾಗಿ ಮಾಡಿ, ವಿಶ್ರಾಂತಿ ಸುಖ ಅನುಭವಿಸಿದ.

....ಹಿಂದಿನ ದಿನ ತಾವು ಎಲ್ಲಿಗೆ ಹೋಗಿದ್ದವೆಂಬುದನ್ನು ಮನೆಯಲ್ಲಿ ಹೇಳದೆಯೇ ಯಶಸ್ವಿಯಾಗಿ ಸುಳ್ಳಾಡಿದ ವಿಷಯ, ಚಿರುಕಂಡನಿಗೆ ತಿಳಿಸಬೇಕೆಂಬ ಆತುರ ಅಪ್ಪುವಿಗೆ . ಹಾಗೆಯೇ ಹುಡುಗ ಪೋಲಿಯಾಗಬಹುದು ಎಂದೆಲ್ಲ ತಂದೆ ಆಡಿದುದನ್ನು ಚಿರುಕಂಡನಿಗೆ ಹೇಳಿ, ಒಟ್ಟಾಗಿಯೇ ಇಬ್ಬರೂ ನಗಬೇಕೆಂಬ ಆಸೆ. ಆದರೆ ತಾಯಿ ಜತೆಯಲ್ಲೇ ಇದ್ದುದರಿಂದ, ಅದು ಸಾಧ್ಯವಿರಲಿಲ್ಲ.

ಚಿರುಕಂಡನೊಳಗೆ ರೋದಿಸುತ್ತಿದ್ದೊಂದು ಹೃದಯವಿತ್ತು. ಅದನ್ನು ತೆರೆದು ಆ ನೋವನ್ನು ಅಪ್ಪುವಿಗೆ ತೋರಿಸಿದರೇ ಆತನಿಗೆ ಸಮಾಧಾನ. ಅಮ್ಮನ ಜತೆಯಲ್ಲಿ ಹೊರಡಲು ಅಪ್ಪುವಿಗೆ ಅವನ ತಂದೆ ಸೂಚನೆ ಕೊಟ್ಟಾಗ, ಚಿರುಕಂಡನಿಗೆ ಸಂತೋಷವಾಗಿತ್ತು. ಆದರೆ ಇಷ್ಟವಿದ್ದಂತೆ ಮಾತಾಡಲು ಆಗಲೇ ಅವಕಾಶವಿರಲಿಲ್ಲ.

ಸ್ನೇಹಿತರು ಮೌನವಾಗಿ ನಡೆದರು. ಆ ಮೌನ ಕಂಡು ಇಬ್ಬರಿಗೂ ಸೋಜಿಗವೆನಿಸಿತು. ಒಂದು ವರ್ಷದ ಹಿಂದೆ-ಯಾಕೆ, ಕೆಲವು ತಿಂಗಳ ಹಿಂದೆ ಕೂಡ— ಹೀಗಾಗುತ್ತಿರಲಿಲ್ಲ. ಒಂದರಿಂದ ಇನ್ನೊಂದಕ್ಕೆ ಕುಪ್ಪಳಿಸುತ್ತ, ಒಂದಕ್ಕೊಂದು ಸಂಬಂಧವಿಲ್ಲದ ನೂರಾರು ವಿಷಯಗಳನ್ನೆತ್ತಿಕೊಂಡು ದಿನಗಟ್ಟಲೆ ಮಾತನಾಡಲು ಅವರು ಸಮರ್ಥರಾಗಿದ್ದರು. ಆದರೆ ಈಗ ಅಂಥ ಮಾತುಕತೆ ಕಷ್ಟವಾಗಿತ್ತು. ಯಾವ

ವಿಷಯವನ್ನೆತ್ತಿಕೊಂಡರೂ ಮಾತು ಮಾಸ್ತರಲ್ಲಿಗೆ ತಲಪಿ ಗಹನ ವಿಚಾರವಾಗಿ ಮಾರ್ಪಡುತ್ತಿತ್ತು. ಆದರೆ ಆ ಸಂಬಂಧವಾಗಿ ಹೆಚ್ಚೇನು ಮಾತನಾಡಬೇಕೆಂಬುದು ಅವರಿಗೆ ತಿಳಿದಿರಲಿಲ್ಲ.

ಒಬ್ಬೊಬ್ಬರೇ ಹೋಗುವಂತಹ ಕಾಲುಹಾದಿಯಲ್ಲಿ ತನ್ನನ್ನು ಹಿಂಬಾಲಿಸಿ ಬರುತ್ತಿದ್ದ ಹುಡುಗರತ್ತ ಅಪ್ಪುವಿನ ತಾಯಿಯೊಮ್ಮೆ ನೋಡಿ, ಕೇಳಿದಳು:

"ಯಾಕೆ ಸುಮ್ಮಿದ್ದೀರಾ ? ಬಿಸಿಲು ತಡೆಯೋಕೆ ಆಗೋದಿಲ್ವೇನು?"

"ಇಲ್ಲವಮ್ಮ. ನಮಗೆ ಇಂಥ ಬಿಸಿಲೆಲ್ಲ ಯಾವ ಲೆಕ್ಕ? ಅಲ್ಲವೇನೋ ಚಿರುಕಂಡ?" ಎಂದು ಸ್ನೇಹಿತನತ್ತ ನೋಡಿ ಕಣ್ಣುಮಿಟುಕಿಸಿ ಅಪ್ಪು ಹೇಳಿದ.

ಕೊನೆಯದಾಗಿ ಬರುತ್ತಿದ್ದ ಚಿರುಕಂಡನೆಂದ:

"ಈ ಬಿಸಿಲೆಲ್ಲ ಇರೋದು ನಾಲ್ಕು ನಿಮಿಷ ನೋಡಿ ಬೇಕಾದರೆ, ಇನ್ನು ಸ್ವಲ್ಪ ಹೊತ್ನಲ್ಲೇ ತಂಪಾದ ಗಾಳಿ ಬೀಸ್ತದೆ."

ಆಕೆ ತಮ್ಮಿಬ್ಬರ ಮಾತನ್ನೂ ಅಲ್ಲಗಳೆಯಲಿಲ್ಲವೆಂದು ಹುಡುಗರಿಗೆ ಸಂತೋಷವಾಯಿತು. ಮನೆಗೆ ಹೋದ ಸ್ವಲ್ಪ ಹೊತ್ತಿನಲ್ಲೇ ಅಲ್ಲಿಂದ ಹೊರಬೀಳುವುದು ಕಷ್ಟವಾಗದೆಂಬುದು ಅವರಿಗೆ ಸ್ಪಷ್ಟವಾಯಿತು.

ಎದುರು ದಿಕ್ಕಿನಿಂದ ಯಾರೋ ಬಂದರೆಂದು ಮೂವರು ಬದಿಗೆ ಸರಿದು, ಬಂದವರು ದಾಟಿಹೋಗಲು ಹಾದಿ ಮಾಡಿಕೊಟ್ಟರು. ಹಾಗೆ ಹೋದವರು ರೈತರೇ. ಆದರೆ ಮುಖಗಳು ಅಪರಿಚಿತವಾಗಿದ್ದುವು.

"ಯಾರು ಚಿರುಕಂಡ, ಹೋದವರು?" ಎಂದು ಕೇಳಿದ ಅಪ್ಪು.

"ಗೊತ್ತಾಗಲಿಲ್ಲವಪ್ಪ. ನಮ್ಮ ಹಳ್ಳಿಯವರಂತೂ ಅಲ್ಲ. ಪಕ್ಕದ ಹಳ್ಳಿಯವರೋ ಏನೋ."

"ಗೊತ್ತಾಗಲಿಲ್ಲವಪ್ಪ. ನಮ್ಮ ಹಳ್ಳಿಯವರಂತೂ ಅಲ್ಲ. ಪಕ್ಕದ ಹಳ್ಳಿಯವರೋ ಏನೋ."

"ಚರ್ವತ್ತೂರು ರೈಲು ಸ್ಟೇಷನ್ನಿಗೆ ಹೋಗ್ತಿರ್ಬೇಕು, ಅಲ್ವ?"

"ಅವರ ಕೈಲಿರೋ ಗಂಟು ನೋಡಿದ್ರೆ ಹಾಗೆ ಕಾಣ್ತದೆ. ಊರಿಗೆ ಹೊರಟವರ ಹಾಗಿದ್ದಾರೆ."

ಹುಡುಗರು ಈ ರೀತಿ ತರ್ಕಬದ್ಧವಾಗಿ ಊಹಾಪೋಹ ನಡೆಸಿದುದನ್ನು ಕಂಡು ತಾಯಿಗೆ ಸ್ವಾರಸ್ಯವೆನಿಸಿತು.

ಅಪ್ಪು ತಾಯಿಯನ್ನು ಕೇಳಿದ:

"ಹೊತ್ತಾದ ಮೇಲೆ ಇಂಥ ದಾರೀಲಿ ನಡಕೊಂಡು ಹೋಗೋದು ಕಷ್ಟ ಅಲ್ವ

ಅಮ್ಮ? ಜಾರಿ ಬೀಳೋದೇ ! ಹಾವುಗಳು ಬೇರೆ !"

ತಾಯಿ ಆ ಮಾತನ್ನು ಉಪಯೋಗಿಸಿಕೊಳ್ಳುತ್ತ ಅಂದಳು:

"ಅದಕ್ಕೇ ಹೇಳೋದು, ಹುಡುಗರು ಸೂರ್ಯ ಕಂತೋದರೊಳಗೆ ಮನೆ ಸೇರಬೇಕು ಅಂತ."

"ಹುಡುಗರು ದೊಡ್ಡವರು ಎಲ್ಲ ಒಂದೇ ಅಮ್ಮ. ಕತ್ತಲೇಲಿ ಯಾರಾದರೂ ಅಷ್ಟೆ. ನನ್ನ ಕೇಳಿದರೆ, ಒಂದೊಂದು ಮನೆಗೂ ಒಂದೊಂದು ಸಣ್ಣ ಕೈ ಬ್ಯಾಟರಿ ಇರ್ಬೇಕು, ಅಲ್ವ ಚಿರುಕಂಡ?"

"ರಾತ್ರೆ ತಿರುಗಾಡುವ ಸಾಹಸದ ಸಂಚಾರಗಳಿಗಾಗಿ ಅಪ್ಪು ಬ್ಯಾಟರಿ ಬೇಕೆನ್ನುತ್ತಿದ್ದಾನೆ" ಎಂದು ಚಿರುಕಂಡನೆಂದ:

"ಹೂಂ. ಬ್ಯಾಟರಿ ಇದ್ರೆ ತುಂಬ ಪ್ರಯೋಜನವಾಗ್ತದೆ."

"ಹಾಗೇ ಒಬ್ಬೊಬ್ಬರ ಕೈಲಿ ಒಂದೊಂದು ಒಳ್ಳೇ ಬೆತ್ತವೂ ಇರ್ಬೇಕು. ಅಲ್ವ?"

"ಹೂಂ."

ಈಗ ಅಪ್ಪು ಮಾತಿನ ದಾಳಿಯನ್ನು ತಾಯಿಯತ್ತ ತಿರುಗಿಸಿದ.

"ಈ ಸಲ ನೀಲೇಶ್ವರದ ಜಾತ್ರೇಲಿ ಖಂಡಿತ ನನಗೊಂದು ಬ್ಯಾಟರಿ ತೆಗಸ್ಕೊಡ್ಬೇಕು, ನೋಡಮ್ಮ."

ತಾಯಿ ನಕ್ಕಳು.

"ಅದೇನು ಒಂದಾಣೆಗೆ ಬರ್ತದೇನೋ?"

ಅಪ್ಪುವಿಗೆ ರೇಗಿತು. ಅವನೆಂದ:

"ಒಂದಾಣೆಗೆ ಬರೋದು ಮೋಂಬತ್ತಿ."

"ಒಳ್ಳೇದಕ್ಕೆ ಒಂದು ರೂಪಾಯಿಯಾದರೂ ಆಗ್ತದೆ. ಮಾಸ್ತರ ಹತ್ರ ಇದೆಯಲ್ಲಾ—ಅದಕ್ಕೆ ಅಷ್ಟೇ ಕೊಟ್ಟಿದ್ದಾರಂತೆ...."

.....ಚಿರುಕಂಡ ಆ ಮಾಹಿತಿ ಒದಗಿಸಿದ. ಒಮ್ಮೆ ಕೊಂಡಮೇಲೂ ಸೆಲ್ಲಿಗಾಗಿ ವೆಚ್ಚವಿದೆ ಎಂಬುದನ್ನು ಹೇಳಲು ಹೊರಟಿದ್ದವನು ಹಾಗೆ ಹೇಳಿದರೆ ಅಷ್ಟು ವೆಚ್ಚದ್ದನ್ನು ಅಪ್ಪುವಿನ ತಾಯಿ ಕೊಡಿಸಲಾರಳೆಂದು, ಆ ಮಾತನ್ನು ಆಡಲಿಲ್ಲ.

ತಾಯಿ ಎಂದಳು:

"ನನ್ಹತ್ರ ಎಲ್ಲಿದೆ ದುಡ್ಡು? ನಿಮ್ಮಪ್ಪನನ್ನು ಕೇಳು."

ಅಪ್ಪು ಮೆಲ್ಲನೆ ತಾಯಿಯ ಮುಖಸ್ತುತಿ ಆರಂಭಿಸಿದ:

"ಸರಿಹೋಯ್ತು. ಅವನು ಯಾವತ್ತಾದರೂ ನನಗೆ ಏನನ್ನಾದರೂ ತೆಗೆಸಿಕೊಟ್ಟಿದ್ದಾನ? ನೀನೇ ಹೇಳು!"

"ನಿನ್ನ ಅಜ್ಜೀನ ಕೇಳು ಹಾಗಾದರೆ."

"ಸರಿ, ಸರಿ. ಆಕೇನ ಕೇಳಿ. ಆ ವಸ್ತು ಸಿಕ್ಕಿದ ಹಾಗೇ!"

"ಇದೊಳ್ಳೇ ಗೋಳು ಹೊಯ್ಕೊಳ್ತಿದ್ದೀಯಲ್ಲೋ ನನ್ಹತ್ರ ದುಡ್ಡಿಲ್ಲ."

"ಹಾಗಾದರೆ ನಾನು, ಕಾಸರಗೋಡಿಗೋ ಮಂಗಳೂರಿಗೋ ಹೊರಟ್ಹೋಗಿ ಏನಾದರೂ ಕೂಲಿ ಕೆಲ್ಸಮಾಡಿ ಸಂಪಾದ್ಸಿ, ಬ್ಯಾಟ್ರಿ ಕೊಂಡ್ಕೊಂಡು ಮನೆಗೆ ಬರ್ತ್ತೇನೆ."

ಚಿರುಕಂಡ ನಕ್ಕು ಹೇಳಿದ:

"ಒಂದೇ ತರ್ತೀಯೇನು? ನನಗೂ ಒಂದು ತಂದರೆ ಏನಾದೀತೊ?"

"ಸಾಕು ತಲೆಹರಟೆ !" ಎಂದಳು ತಾಯಿ ಸ್ವರವೇರಿಸಿ.

ಅಪ್ಪು ಹಾಗೆಲ್ಲ ಬಿಟ್ಟುಕೊಡುವವನಲ್ಲ.

"ಹಾಗಾದರೆ, ತೆಗೆಸ್ಕೊಡ್ತೇನೆ ಅನ್ನು ."

"ಜಾತ್ರೆ ಬರಲಿ, ನೋಡೋಣ."

"ನೋಡೋದೇನ್ಬಂತು? ಓಹೋಹೋ. ದುಡ್ಡಿದ್ದೇ ಇರ್ತದೆ ನನಗ್ಗೊತ್ತಿಲ್ವ? ಜಾತ್ರೆ ಖರ್ಚಿಗೇಂತ ಅಪ್ಪ ನಿನ್ನ ಕೈಗೆ ದುಡ್ಡು ಕೊಡದೆ ಇರ್ತಾನಾ?..."

ತಾಯಿ ಮತ್ತೆ ಮಾತನಾಡದಿದ್ದರೂ ಒಂದು ಬ್ಯಾಟರಿ ಬರುವುದು ಖಂಡಿತ ಎಂದು ಅಪ್ಪುವಿಗೆ ಸಂತೋಷವಾಯಿತು.

ಅವರು ಹಾದಿ ಕ್ರಮಿಸುತ್ತಿದ್ದಂತೆ ಒಮ್ಮೆಲೇ ತಣ್ಣಗೆ ಗಾಳಿ ಬೀಸಿತು.

"ನೋಡಿದಿರಾ? ಆಗ್ಲೇ ಹೇಳ್ಲಿಲ್ವ ನಾನು?"

ಮುಂದಾಗಿಯೇ ಸತ್ಯ ನುಡಿದ ಸಂತೃಪ್ತಿಯನ್ನು ಚಿರುಕಂಡ ವ್ಯಕ್ತ ಪಡಿಸಿದ.

"ಈಗ ನದೀಲಿ ಸ್ನಾನ ಮಾಡ್ಬೇಕು, ಅಲ್ವ ಚಿರುಕಂಡ?"

ಇದು ಅಪ್ಪು ನಡೆಸಿದ ಇನ್ನೊಂದು ದಾಳ. ತಾಯಿ, ಮತ್ತೊಮ್ಮೆ ತನಗೆ ಸೋಲುವಂತೆ ಮಾಡುವ ಯತ್ನ.

ಆದರೆ ಈ ಸಲ ಆಕೆ ಬಿಟ್ಟುಕೊಡುವ ಹಾಗಿರಲಿಲ್ಲ. ಗದರಿ ನುಡಿದಳು:

"ನೀನೆಲ್ಲಾದರೂ ನದೀ ಕಡೆ ಹೊರಟ್ಬಿಡು ಇವತ್ತು, ನಿಮ್ಮಪ್ಪನಿಗೆ ಹೇಳಿ ನಿಮಗಿಬ್ಬರಿಗೂ ಶಾಸ್ತಿ ಮಾಡಿಸ್ತೇನೆ."

ಅಪ್ಪುವಿಗೆ ನಗು ಬಂತು.

"ಅವನನ್ಯಾತಕ್ಕೆ ನನ್ನತೇಲಿ ಸೇರಿಸ್ತೀಯ? ಅವನು ನದೀಲಿ ಸ್ನಾನ ಮಾಡೋದೇ ಇಲ್ಲ. ಮೀನು ಕಚ್ತದೆ ಅಂತ ಆತನಿಗೆ ಭಯ.... ಅಲ್ವೇನೋ ?"

ಚಿರುಕಂಡ, ಮುಂದೆ ನಡೆಯುತ್ತಿದ್ದ ಅಪ್ಪುವಿನ ಬೆನ್ನನ್ನು ತನ್ನ ಬೆರಳಿಂದ

ತಿವಿದನೇ ಹೊರತು ಮಾತನಾಡಲಿಲ್ಲ.

ತಾಯಿಯೇ ಬೇಸರಗೊಂಡು ಹೇಳಿದಳು:

"ಅದೆಷ್ಟು ಮಾತಾಡ್ತೀಯೋ, ಅದೇನು ಮಾತಾಡ್ತೀಯೋ—ಆ ಪರಮಾತ್ಮನೇ ಬಲ್ಲ!"

....ಕೆಲವೇ ಹೆಜ್ಜೆಗಳಲ್ಲಿ ಅವರ ಗುಡಿಸಲು ಸಮೀಪಿಸಿತು. ಅಂಗಳದಲ್ಲೇ ನಿಂತಿದ್ದ ಕಿರಿಯವನು ಕುಟ್ಟಿ—ಒಳಗಿದ್ದ ಅಜ್ಜಿಗೆ ತಿಳಿಸಲೆಂದು ಗಟ್ಟಿಯಾಗಿ ಕೂಗಿದ:

" ಅಮ್ಮ ಬಂದ್ರು! ಅಪ್ಪು ಬಂದ !"

"ಇವರೆಲ್ಲ ತ್ರಿಕರಪುರದಿಂದ ನಿನ್ನೇನೇ ಬಂದ್ಬಿಟ್ರು."

'ಅಜ್ಜಿ ಯಾವತ್ತು ಬಂದ್ರು?' ಎಂದು ಚಿರುಕಂಡನಿಂದ ಪ್ರಶ್ನೆ ಬರುವುದಕ್ಕೆ ಮುಂಚಿತವಾಗಿಯೇ ಅಪ್ಪು ಹಾಗೆ ಹೇಳಿದ.

ತ್ರಿಕರಪುರದ ಪ್ರವಾಸ ಕಥನ ಕೇಳುವ ಆತುರ ಅಪ್ಪುವಿಗೆ ಇರುತ್ತದೆಂದು ಅಜ್ಜಿ ತಿಳಿದಿದ್ದಳು. ಹರಟೆ ಹೊಡೆಯಲು ಆಕೆಗೂ ಇನ್ನೊಂದು ಜೀವದ ಅವಶ್ಯಕತೆ ಇತ್ತು. ಆತ ಬೇಗನೆ ಮನೆಗೆ ಬಂದಾಗ ಅವಳಿಗೆ ಸಂತೋಷವಾಯಿತು. ಆದರೆ ಅಪ್ಪುವಿಗೆ ಹಾಗಲ್ಲ. ನಿನ್ನೆ ರಾತ್ರೆ, ಆ ರೀತಿ ಅಜ್ಜಿಯೊಡನೆ ಹರಟೆ ಹೊಡೆಯಬೇಕೆಂದು ಆತನಿಗೆ ಅನಿಸಿದ್ದರೂ ಈಗ ಬಿಡುವಿರಲಿಲ್ಲ. ಯಾವಾಗ ಚಿರುಕಂಡನೊಡನೆ ಮನೆ ಬಿಟ್ಟು ಹೊರಟೇನೋ, ಯಾವಾಗ, ಆತನೊಡನೆ ತಮ್ಮದೇ ಆದ ಮುಖ್ಯ ವಿಷಯಕ್ಕೆ ಸಂಬಂಧಿಸಿ ಮಾತನಾಡೇನೋ—ಎಂದು ಆತ ಚಡಪಡಿಸುತ್ತಿದ್ದ.

ಚಿರುಕಂಡ, ಅಪ್ಪುವಿನ ಅಜ್ಜಿಯನ್ನೂ ನೋಡಿದ, ಕುಟ್ಟಿಯನ್ನೂ ನೋಡಿದ. ಮೊದಲ ಬಾರಿಗೆ ಕಾಣುತ್ತಿರುವೆನೋ ಎಂಬಂತೆ ಆ ಮನೆಯನ್ನೂ ನೋಡಿದ. ತಾವೂ ರೈತರು, ಅಪ್ಪುವಿನ ಮನೆಯವರೂ ರೈತರು. ಆದರೆ ತಮ್ಮ ಹೋರಿಗಳು ಕೈಬಿಟ್ಟು ಹೋಗಿದ್ದುವು. ಇವರಿಗೊಂದು ಜತೆ ಹೋರಿಗಳಿದ್ದವು. ತಮ್ಮ ಹೊಲ ಜಮೀನುದಾರನ ವಶವಾಗಿತ್ತು. ಇವರಿಗೆ ತಮ್ಮದರಷ್ಟೇ, ಅಥವಾ ತಮ್ಮದಕ್ಕಿಂತಲೂ ಸ್ವಲ್ಪ ದೊಡ್ಡದಾದ, ಸ್ವಂತದ ಹೊಲವಿತ್ತು—ಇನ್ನೂ ಸ್ವಂತದ್ದಾಗಿಯೇ ಉಳಿದಿದ್ದ ಹೊಲ. ಈ ಮನೆಯೂ ಅಷ್ಟೆ. ತಮ್ಮದಕ್ಕಿಂತ ಸ್ವಲ್ಪ ವಾಸಿ. ಹಾಗೆ ನೋಡಿದರೆ, ಕಡುದರಿದ್ರರಾದ ಇತರ ಹಲವು ಜನ ರೈತರ ಬಡ ಹಟ್ಟಿಗಳಿಗಿಂತ ಈ ಗುಡಿಸಲುಗಳೇ ಮೇಲು. ಇವುಗಳಿಗಿಂತಲೂ ಸ್ವಲ್ಪ ಮೇಲುಮಟ್ಟದ ಮನೆಗಳು ಬೇರೆ ಇದ್ದುವು. ಅತ್ಯಂತ ಮೇಲುಮಟ್ಟದ್ದೆಂದರೆ—ಆ ಹಳ್ಳಿಯಲ್ಲಿದ್ದ ಇಬ್ಬರು ಬಲಾಢ್ಯ ಧನಾಢ್ಯ ಭೂಮಾಲಿಕರ ಮನೆಗಳು.

ಅಪ್ಪುವಿನ ಅಜ್ಜಿ ಕೇಳಿದಳು:

"ಅದೇನು ಯೋಚಿಸ್ತಾ ನಿಂತ್ಕೊಂಡೆ ಚಿರುಕಂಡ?"

ಚಿರುಕಂಡ ಪ್ರಯಾಸಪಟ್ಟು ಮುಗುಳ್ನಕ್ಕ:

"ಏನೂ ಇಲ್ಲಜ್ಜಿ."

ಮನೆಯೊಳಗೆ ತಿಂಡಿ ಏನಾದರೂ ಇದೆಯೇ ಎಂದು ಹೋಗಿ ನೋಡಿ, ಇಲ್ಲ ಎಂಬುದನ್ನು ಖಚಿತಪಡಿಸಿಕೊಂಡು, ಮತ್ತೆ ಹೊರಬರುತ್ತ ಅಪ್ಪು ಹೇಳಿದ:

"ಲೋ ಚಿರುಕಂಡ, ನಮ್ಮ ಚಂದು ಬೀಡಿ ಅಂಗಡಿ ಇಟ್ಟಿದ್ದಾನಂತೆ ಕಣೋ."

"ಯಾವ ಚಂದುನೋ?"

"ತ್ರಿಕರಪುರದ ಚಂದು. ಆವತ್ತು ಹೇಳಿರ್ಲಿಲ್ವ ನಿಂಗೆ ?"

"ಆಹಾ !" ಅವನಾ ?"

"ಹೂಂ. ನಾವಿಬ್ಬರೂ ಒಂದ್ಸಲ ಅಲ್ಲಿಗೆ ಹೋಗಿ ಬರೋಣ್ವೇನೋ?"

ಹುಡುಗರ ಸಂಭಾಷಣೆಯನ್ನು ಪೂರ್ತಿ ಕಿವಿಯ ಮೇಲೆ ಹಾಕಿಕೊಳ್ಳದೇ ಇದ್ದ ಅಜ್ಜಿ ಈಗ ಒಮ್ಮೇಲೆ ಕೇಳಿದಳು:

"ಎಲ್ಲಿಗೋ ಹೋಗೋದು?"

ಅಜ್ಜಿ ರೇಗುವಳೆಂದು ತಿಳಿದಿದ್ದ ಅಪ್ಪು ನಸುನಕ್ಕು ಹೇಳಿದ:

"ತ್ರಿಕರಪುರಕ್ಕೆ."

"ಏ ಮುಂಡೇಗಂಡ್ರಾ! ಅಷ್ಟು ಧೈರ್ಯ ಬಂತೇನ್ರೋ ನಿಮಗೆ ? ಈ ಹಳ್ಳಿ ಬಿಟ್ಟು ಹೊರಗೆ ಹೆಜ್ಜೆ ಇಟ್ಟಿಡಿ. ನಿಮ್ಮನ್ನು ಬಲಿ ಹಾಕ್ತೇನೆ!"

"ಹೋದಾಗ ನಿನ್ನನ್ನೂ ಕರಕೊಂಡು ಹೋಗ್ತೇವೆ ಬಿಡಜ್ಜಿ."

"ಮುದುಕೀನ ಗೇಲಿ ಮಾಡ್ತಾನೆ. ಥೂ ನಿನ್ನ !"

ಈ ಸಂಭಾಷಣೆಯನ್ನೆಲ್ಲ ಕೇಳಿ ಸಂತೋಷಪಡುವ ಹಾಗಿದ್ದರೂ ಚಿರುಕಂಡನಿಗೆ ತನ್ನ ಮನೆಯ ನೆನಪಾಗಿ ಮುಖ ಬಾಡಿತು.

"ನನಗೆ ತಡವಾಯ್ತು, ಅಪ್ಪು. ಮನೆಗೆ ಹೋಗ್ಬೇಕು. ಸೀಮೆಎಣ್ಣೆ ಆಗ್ಹೋಗ್ಬಿಟ್ಟಿದೆ. ನಿನ್ನೆ ತರೋಕಾಗ್ಲಿಲ್ಲ ನೋಡು. ರಾತ್ರೆ ಕತ್ತಲಲ್ಲೇ ಇದ್ವಿ."

ಗೆಳೆಯ ಹೊರಡುವ ಮಾತನ್ನೆತ್ತಿದನೆಂದು ಅಪ್ಪುವಿಗೆ ಬೇಸರವಾಯಿತು.ಆದರೆ ನಿಮಿಷವೂ ಬಿಡುವಿಲ್ಲದ ಕಳೆದ ನಿನ್ನೆಯ ಪ್ರಸ್ತಾಪ ಬಂತೆಂದು ಸಂತೋಷವಾಯಿತು. ಮನೆಯಿಂದ ತಪ್ಪಿಸಿಕೊಳ್ಳಲು ಇದೇ ಸಂದರ್ಭವೆಂದು ಆತ ತಾಯಿಗೆ ಹೇಳಿದ:

"ಅಮ್ಮಾ, ಚಿರುಕಂಡನೊಟ್ಟಿಗೆ ಒಂದಿಷ್ಟು ದೂರ ಹೋಗ್ಬರ್ತೇನೆ."

ಮಗನನ್ನು ತಡೆ ಹಿಡಿಯುವುದು ದುಸ್ಸಾಧ್ಯವೆಂದು ತಿಳಿದಿದ್ದ ತಾಯಿ ತನ್ನ

ಕರ್ತವ್ಯ ತಾನು ಮಾಡಬೇಕೆಂದು ಅಂದಳು:

"ಅಪ್ಪು ಏನಂದ್ರು ನಿಮಗೆ ? ಬಿಸಿಲಲ್ಲಿ ಎಲ್ಲಿಗೂ ಹೋಗ್ಬೇಡಿ. ಮನೇಲಿ ಮಲಕ್ಕೊಳ್ಳಿ, ಅಂತಲ್ವ ಹೇಳಿದ್ದು?"

"ಹೋಗಲಿ ಬಿಡಮ್ಮ. ಹಗಲು ಹೊತ್ತು ಯಾರು ಮಲಕೊಳ್ತಾರೆ? ರಾತ್ರಿ ನಿದ್ದೆ ಬರಬೇಕೋ ಬೇಡ್ವೊ?"

"ಏನು ಬೇಕಾದರೂ ಮಾಡು. ಅವರ ಕೈಲಿ ಬೈಗಳು ಕೇಳೋದು, ಪೆಟ್ಟು ತಿನ್ನೋದು ನೀನು ತಾನೆ?"

"ಅಲೆಯೋಕೆ ಹೋಗಿದ್ದೆ ಅಂತ ಅಪ್ಪನಿಗೆ ಹೇಳ್ಬೇ ಬೇಡ. ಈಗ್ಲೇ ವಾಪ್ಸು ಬಂದ್ಬಿಡ್ತೇನೆ."

"ಹೂಂ ಹೋಗಪ್ಪ."

ತಾಯಿ ಹಾಗೆ ಹೇಳುತ್ತಿದ್ದಂತೆಯೇ ಹೊರಗಿನಿಂದ ಅಜ್ಜಿ ಕೇಳಿದಳು:

"ಅದೇನು ಕಲಿಸಿಕೊಡ್ತಿದ್ದೀಯೋ ತಾಯಿಗೆ?"

ಅಪ್ಪು ನಗುತ್ತ ಹೊರಬಿದ್ದು ಹೇಳಿದ:

"ಬೇಗ್ನೆ ಬರ್ತೇನೆ, ಅಜ್ಜಿ. ತ್ರಿಕರಪುರದ ವಿಷಯವೆಲ್ಲ ನೀನು ಹೇಳ್ಬೇಕು."

ಅಸಹಾಯಳಾಗಿ ಅಜ್ಜಿ, ಹೊತ್ತು ಕಳೆಯಲು ಉಳಿದಿದ್ದ ಕುಟ್ಟಿಯೊಬ್ಬನೇ ಗತಿಯೆಂದು ಆತನನ್ನು ತನ್ನೆಡೆಗೆ ಎಳೆದುಕೊಂಡಳು...

.....ಹಾದಿ ಸೇರುವಾಗ ಅಪ್ಪು ಕೇಳಿದ:

"ನದಿ ಕಡೆ ಹೋಗೋಣ್ವೇನೊ?"

ತಾಯಿ-ತಂದೆ ಹೋಗಬಾರದು ಎಂದಿದ್ದರೂ ಆತನ ಮನಸ್ಸು ಆ ಕಡೆಗೇ ಹರಿಯುತ್ತಿತ್ತು. ಆದರೆ ಚಿರುಕಂಡ ಯಾವ ಉತ್ಸಾಹವನ್ನೂ ತೋರದೆ ಹೇಳಿದ:

"ಬೇಡ ಅಪ್ಪು ತುಂಬಾ ಬೇಜಾರಾಗಿದೆ, ಇಲ್ಲೇ ಸ್ವಲ್ಪ ಹೊತ್ತು ಕೂತ್ಕೊಂಡು ಮಾತಾಡೋಣ."

ತನ್ನ ಸ್ನೇಹಿತನಿಗೆ ಏನೋ ಆಗಿದೆ ಎಂದು ಅಪ್ಪು ಶಂಕಿಸಿದ. ಇಂಥದೇ ಎಂದು ಊಹಿಸುವುದು ಅವನಿಂದಾಗಲಿಲ್ಲ. ಮನಸ್ಸು ಹೊಸ ವಿಚಾರಗಳಿಂದ ಒಪ್ಪಗೊಂಡಿದ್ದಾಗ ಉತ್ಸಾಹದಿಂದಿರಬೇಕೇ ಹೊರತು, ಸಪ್ಪಗಿರುವುದು ಸರಿಯಲ್ಲವೆಂದಿತು ಆತನ ಒಳದನಿ. ಚಿರುಕಂಡನನ್ನು ಬಾಧಿಸುವಂಥದು ಅದೇನಿರಬಹುದೋ ಎಂದು ಆತನಿಗೆ ಚಿಂತೆಯಾಯಿತು.

ಇಬ್ಬರೂ ಸಮೀಪವೇ ಇದ್ದ ಬೆಟ್ಟದತ್ತ ನಡೆದರು. ಆ ಬೆಟ್ಟದ ಇಳಿಜಾರಿನಲ್ಲಿ ಅಲ್ಲೊಂದು ಇಲ್ಲೊಂದರಂತೆ ಗೋಡಂಬಿ ಮರಗಳಿದ್ದುವು. ಆ ಮರಗಳೆಲ್ಲ

ಹಣ್ಣುಬಿಟ್ಟು ಮೈತಳೆದು ನಿಂತಿದ್ದುವು.

ಅಂಥದೊಂದು ಮರದ ಕೆಳಗೆ ಅವರು ಕುಳಿತರು. ತರಗೆಲೆಗಳಿಂದ ನೆಲ ತುಂಬಿತ್ತು. ಮನುಷ್ಯರು ಬಂದರೆಂದು ಓತಿಯೊಂದು ಎಲೆಗಳೆಡೆಯಿಂದ ಸದ್ದು ಮಾಡುತ್ತ ದೂರ ಹೊರಟು, ಅಲ್ಲಿಯೇ ಇದ್ದೊಂದು ಕಾಡುಗಿಡಗಳ ಪೊದೆಯನ್ನು ಸೇರಿತು. ಅಪ್ಪು ಮರಕ್ಕೆ ಸಮೀಪದಲ್ಲಿ ಕುಳಿತು ಕಾಂಡದ ಒಂದೆಡೆಯಿಂದ ಒಸರಿ ಗಟ್ಟಿಯಾಗಿದ್ದ ಗೋಂದನ್ನು ನೋಡಿದ. ಅದನ್ನು ಮುಟ್ಟುವ ತೆಗೆಯುವ ಮನಸ್ಸಾದರೂ ಚಿರುಕಂಡನತ್ತ ನೋಡಿ ಸುಮ್ಮನಾದ. ಬೇರೆ ದಿನಗಳಲ್ಲಾಗಿದ್ದರೆ ಆ ಅಂಟನ್ನು ಆತ ತೆಗೆಯುವುದು ಪದ್ಧತಿ. ಹಾಗೆ ತೆಗೆದಿಟ್ಟು, ಶಾಲೆಯ ಉಪಯೋಗಕ್ಕೆಂದು ಮಾಸ್ತರಿಗೆ ಅದನ್ನು ತಿಂಗಳಿಗೊಮ್ಮೆ ಆತ ಒಯ್ದು ಕೊಡುತ್ತಿದ್ದ.

ಚಿರುಕಂಡನಿಗೆ ಈ ದಿನ ಸುತ್ತಮುತ್ತಲಿನ ಯಾವುದರಲ್ಲೂ ಆಸಕ್ತಿ ಇರಲಿಲ್ಲ. ಆತ ದೊಡ್ಡದೊಂದು ತರಗೆಲೆಯ ಮೇಲೆ ಬೆರಳಿನಿಂದ ಗೀರು ಹಾಕುತ್ತ ಕುಳಿತ.

ಅಪ್ಪು ಮಾತು ಮುಂದುವರಿಸಿದ:

"ನಿನ್ನೆ ತಡವಾಯ್ತೂಂತ ಮನೇಲಿ ಏನಾದರೂ ಅಂದರಾ ಚಿರುಕಂಡ?"

"ಇಲ್ಲ."

ಚಿರುಕಂಡ ಅಷ್ಟು ಹೇಳಿದನೇ ಹೊರತು ಮುಂದುವರಿಯಲಿಲ್ಲ.

"ಮತ್ತೇನಾಯ್ತು?"

ಆ ಪ್ರಶ್ನೆಗೆ ಉತ್ತರ ಒಮ್ಮೆಲೆ ಬಂತು:

"ನಮ್ಮ ಹೊಲ ಹೋಯ್ತು, ಅಪ್ಪು....."

ಅಪ್ಪುವಿಗೆ ಆ ಮಾತನ್ನು ನಂಬುವುದೇ ಕಷ್ಟವೆಂದು ತೋರಿತು. ಆತ ಬಾಯಿ ತೆರೆದು, ಎವೆಯಿಕ್ಕದೆ, ಗೆಳೆಯನನ್ನು ನೋಡಿದ.

"ನಿಜವಾ?"

"ಹೂಂ, ನಮ್ಮಪ್ಪ ಒಂದು ಸಾವಿರ ರೂಪಾಯಿಯಷ್ಟು ಸಾಲ ಮಾಡಿದ ಅಂತ ಹೇಳಿರ್ಲಿಲ್ವ?"

"ಹೌದು, ಹೌದು."

"ಅದಕ್ಕೆ ಪ್ರತಿಯಾಗಿ ಜಮೀನ್ದಾರರು ಹೊಲ ಕಿತ್ಕೊಂಡ್ರು. ಈಗ ಅವರು ಧನಿಗಳು, ನಾವು ಅವರ ಒಕ್ಕಲು."

ಅಪ್ಪುವೆಂದುಕೊಂಡ: 'ಎಂಥ ಅನ್ಯಾಯ!'

ಅವನ ನರನಾಡಿಗಳಲ್ಲಿ ರಕ್ತ ವೇಗವಾಗಿ ಸಂಚರಿಸಿತು. ಆತ ಮರದ

ಕಾಂಡಕ್ಕೊರಗಿ, ಅಸಹನೆಯಿಂದ ಅತ್ತಿತ್ತ ಮೈ ಹೊರಳಿಸುತ್ತ ಹೇಳಿದ:

"ಈ ಹಳ್ಳಿಯ ಇಬ್ಬರು ಜಮೀನ್ದಾರ್ರು ಆಳೋ ಪಾಳೆಯಗಾರರಾಗಿಹೋದ್ರು! ಅವರು ರಾಜರು—ನಾವು ಪ್ರಜೆಗಳು ! ಹುಂ !"

ಚಿರುಕಂಡ ನಿಧಾನವಾಗಿ ಹೇಳಿದ:

"ಇನ್ನುಮುಂದೆ ಯಾವಾಗಬೇಕಾದರೂ, ಗೇಣಿ ಸರಿಯಾಗಿ ಕೊಡಲಿಲ್ಲ ಅಂತ್ಲೋ ಇನ್ನೇನೋ ನೆಪ ಹೇಳಿ, ಜಮೀನ್ದಾರ ನಮ್ಮನ್ನು ಹೊರಗೆ ಹಾಕ್ಬಹುದು. ಆಮೇಲೆ ನಮ್ಮದು ಅನ್ನೋದು ಏನೂ ಉಳಿಯೋದಿಲ್ಲ. ಇರೋದಕ್ಕೆ ಜಾಗ ಇಲ್ದೆ ನಾವು ಊರು ಬಿಡ್ಬೇಕು."

ಸತ್ಯಸಂಗತಿಯನ್ನು ಚಿರುಕಂಡ ಹೇಳಿದ್ದರೂ, ಅಪ್ಪುವಿಗೆ ಅದು ಒಪ್ಪಿಗೆಯಾಗಲಿಲ್ಲ.

"ನೀನು ಸುಮ್ನಿರು. ಯಾರೂ ಊರು ಬಿಡೋದಿಲ್ಲ!"

"ನಿನಗೆ ತಿಳೀದು ಅಪ್ಪು. ಮಾಸ್ತರು ಹೇಳ್ಲಿಲ್ವ? ಹಾಗೇ ಅಲ್ವ ನಡೆಯೋದು? ರೈತ ಹೊಲ ಕಳಕೊಂಡು ಬಡವನಾಗ್ತಾನೆ, ಭಿಕಾರಿಯಾಗ್ತಾನೆ, ಆಮೇಲೆ ದೇಹದ ಶ್ರಮದ ಹೊರತಾಗಿ ಅವನಲ್ಲಿ ಏನೂ ಉಳಿಯೋದಿಲ್ಲ. ಪಟ್ಟಣಕ್ಕೆ ಹೋಗಿ, ಕೂಲಿಯಾಗಿ, ಆ ಶ್ರಮವನ್ನೇ ಆತ ಮಾರ್ತಾನೆ."

"ಅದು ಸರಿ ಅನ್ನು. ಆದರೆ ಯಾವಾಗಲೂ ಹಾಗೇ ಇರ್ತದಾ? ಮುಂದೆ ಒಂದು ದಿವಸ, ಅನ್ಯಾಯವಾದೋರಿಗೆಲ್ಲಾ ನ್ಯಾಯ ಸಿಗ್ತದೇಂತ್ಲೂ ಮಾಸ್ತರು ಹೇಳಿಲ್ವ?"

ಚಿರುಕಂಡ ಸುಮ್ಮನಾದ. ಅದನ್ನೂ ಮಾಸ್ತರು ಹೇಳಿದ್ದರು, ನಿಜ. ಆದರೆ ಬೇರೆಯೂ ಒಂದು ಮಾತನ್ನು ಅವರು ಆಡಿದ್ದರು: ಜನ ಒಂದಾದರೆ ಮಾತ್ರ ಅದು ಸಾಧ್ಯ; ಅದಕ್ಕಾಗಿ ಹೋರಾಟವಾಗಬೇಕು; ಆ ಹೋರಾಟದಲ್ಲಿ ರೈತರು ಕಷ್ಟನಷ್ಟ ಅನುಭವಿಸಬೇಕು; ರಾಷ್ಟ್ರವನ್ನು ತುಳಿದು ನಿಂತಿದ್ದ ಪರಕೀಯ ಶಕ್ತಿಯ ಬೆನ್ನೆಲುಬನ್ನು ಮುರಿಯಬೇಕು; ಆ ಬಳಿಕ ಶಕ್ತಿಯ ಆಧಾರಸ್ತಂಭಗಳನ್ನು ಕಿತ್ತುಹಾಕಬೇಕು...

ಆ ಮಾತುಗಳೆಲ್ಲ ಚಿರುಕಂಡನ ನೆನಪಿಗೆ ಬಂದವು. ಅಪ್ಪುವಿಗೂ ಅದು ಗೊತ್ತಿತ್ತು. ಆದರೂ ಆತ ಉದ್ವೇಗದಿಂದ ಮಾತನಾಡಿದ್ದ.

ಗೆಳೆಯನ ಮೌನ ಕಂಡು ಅಪ್ಪುವಿನ ಮನಸ್ಸು ಚಡಪಡಿಸಿತು. ತಾನು ಏನು ಹೇಳಿದರೆ, ಏನು ಮಾಡಿದರೆ, ಚಿರುಕಂಡನಿಗೆ ಸಮಾಧಾನವಾದೀತೆಂದು ಆತ ಯೋಚಿಸಿದ. ಆ ಯೋಚನೆ ಸ್ವಾಭಾವಿಕವಾಗಿಯೇ ಮಾಸ್ತರನ್ನು ತಲಪಿತು. ಆತ ಕೇಳಿದ: "ಮಾಸ್ತರು ಬಂದಿದಾರಾ ಊರಿಗೆ?"

"ಹೂಂ."

"ಕಂಡಿದ್ಯಾ?"

"ಹೂಂ. ಬೆಳಿಗ್ಗೆ ಹೋಗಿದ್ದೆ."

ಒಮ್ಮೆಲೆ ಇನ್ನೊಂದು ವಿಷಯ ನೆನಪಾಗಿ ಅಪ್ಪು ಕೇಳಿದ:

"ನಿನ್ನೆ ಅವರ ಜತೇಲಿ ಚೆರ್ವತ್ತೂರಿಗೆ ಹೋಗಿದ್ದವೂಂತ ಹೇಳಿದ್ದನ್ನ ತಿಳಿಸಿದ್ಯಾ?"

"ಹೂಂ."

ಆ ಉತ್ತರದಿಂದ ಸಮಾಧಾನವಾದ ಮೇಲೆ ವಸ್ತುಸ್ಥಿತಿ ಅಪ್ಪುವನ್ನು ಕಾಡಿತು.

"ಹೊಲ ಹೋದ ವಿಷಯಾನಾ ಹೇಳಿದ್ಯೇನು?"

"ಹೂಂ, ಚುಟುಕಾಗಿ ಹೇಳ್ದೆ. ಶಾಲೆಗೆ ಹೊತ್ತಾಗ್ಬಿಟ್ಟಿತ್ತು."

"ಏನಂದ್ರು?"

"ಈವರೆಗೂ ಬೇರೆಯವರಿಗೆ ಆಗ್ತಾ ಇದ್ದುದನ್ನು ನೀನು ನೋಡ್ತಿದ್ದೆ; ಈಗ ನಿಮಗೇ ಆಯ್ತು ; ಬೇಜಾರುಪಟ್ಕೋಬೇಡ—ಅಂದ್ರು."

"ಅಷ್ಟೇನಾ?"

"ಬೇರೇನಪ್ಪಾ ಅವರು ಹೇಳ್ಬೇಕು? ರಾತ್ರೆ ಮನೆಗೆ ಬರ್ತೇನೆ ಅಂದ್ರು."

ಮಾಸ್ತರು ಚಿರುಕಂಡನ ಮನೆಗೆ ಬಂದಾಗ ತಾನೂ ಅಲ್ಲಿರಬೇಕೆಂದು ಅಪ್ಪುವಿಗೆ ತೋರಿತು.

"ನಾನೂ ಬರಲಾ?"

"ಬಾ. ಆದರೆ ಮಾಸ್ತರು ಬರೋದು ತಡವಾದೀತು. ಜಮೀನ್ದಾರರ ಕಡೆಯವರ ಕಣ್ತಪ್ಪಿಸಿ ಬರೋದು ಬೇಡ್ವೆ ಅವರು ?"

"ಅದು ನಿಜ ಅನ್ನು. ತಡವಾದರೆ ಇವತ್ತು ನಮ್ಮಪ್ಪನೂ ಸುಮ್ನಿರೋದಿಲ್ಲ."

ಅಪ್ಪು ಮರದ ಕಾಂಡಕ್ಕೊರಗಿ, ನೀಲಿ ಆಕಾಶದಲ್ಲಿ ತಲೆಕೆಳಗಾಗಿ ತೇಲುತ್ತಿದ್ದ ಬಿಳಿಯ ಮೋಡಗಳನ್ನು ನೋಡಿದ. ಮತ್ತೆ ಆತನ ದೃಷ್ಟಿ ಮೌನವಾಗಿ ನೆಲವನ್ನೇ ನೋಡುತ್ತ ಕುಳಿತಿದ್ದ ಚಿರುಕಂಡನತ್ತ ತಿರುಗಿತು. ದೊಡ್ಡದೊಂದು ಕರಿಯ ಇರುವೆ ಅಂಗಿಯ ಬಲತೋಳಿನ ಮೇಲಿನಿಂದ ಚಿರುಕಂಡನ ಕೊರಳಿನ ಕಡೆಗೆ ಸರಿಯುತ್ತಿತ್ತು. ಅಪ್ಪು ನೇರವಾಗಿ ಕುಳಿತು, ಆ ಇರುವೆಯತ್ತ ಕೈ ಚಾಚಿ ಅದನ್ನೆತ್ತಿದ. ಕೊಲ್ಲಲು ಮನಸ್ಸಾಗದೆ ದೂರ ಎಸೆದ.

ಅದನ್ನು ನೋಡಿಯೂ ನೋಡದಂತಿದ್ದ ಚಿರುಕಂಡ ಸರಿಯಾಗಿ ಕುಳಿತು, ಮೈಮುರಿದು, ನಿಟ್ಟುಸಿರುದಿಟ್ಟ.

ಅಪ್ಪುವಿಗೆ ಇಷ್ಟನ್ನು ಹೇಳಿದಮೇಲೆ ಚಿರುಕಂಡನಿಗೆ ಒಂದು ರೀತಿಯ ಸಮಾಧಾನವೆನಿಸಿತು.... ಅಂಗಡಿಗೆ ಹೋಗಿ ಸೀಮೆಎಣ್ಣೆ ತರಲು ತನ್ನನ್ನು ತಾಯಿ ಇದಿರುನೋಡುತ್ತಿರುವಳೆಂಬುದು ಮತ್ತೆ ನೆನಪಾಗಿ, ಆತ ಎದ್ದು ನಿಂತ.

"ನಾನಿನ್ನು ಹೋಗ್ತೇನೆ ಕಣೊ."

ಅಪ್ಪುವೂ ಎದ್ದು, ತನ್ನ ಹಿಂಭಾಗಕ್ಕೆ ಅಂಟಿಕೊಂಡಿದ್ದ ತರಗೆಲೆಗಳನ್ನು ಕೈಬೀಸಿ ಸರಿಸಿದ.

"ಹೂಂ. ನಾನೂ ಮನೆಗೆ ಹೋಗ್ತೇನೆ."

ಮೌನವಾಗಿ ಸ್ವಲ್ಪ ದೂರ ನಡೆದ ಮೇಲೆ ಕಾಲುಹಾದಿ ಕವಲೊಡೆಯಿತು. ಅಲ್ಲಿ ಬೇರೆಯಾಗುವುದಕ್ಕೆ ಮುಂಚೆ ಅಪ್ಪು ಕೇಳಿದ:

"ನಾಳೆ ಎಲ್ಲಿ ಸಿಗ್ತೀಯಾ?"

"ಇವತ್ತಿನ ಹಾಗೆ ಹೊಲಕ್ಕೆ ಬರ್ಲೇನು?"

"ಹೂಂ. ಬಾ."

ಆ ಬಳಿಕ ಇಬ್ಬರೂ ಬೇರೆಬೇರೆಯಾಗಿ ನಡೆದರು.

ಅಪ್ಪು ಆ ದಿನವೆಲ್ಲ ಆವರೆಗೂ ಉತ್ಸಾಹಿಯಾಗಿಯೇ ಇದ್ದ. ಆದರೆ ಚಿರುಕಂಡನೊಡನೆ ಮಾತನಾಡಿ ಆತನನ್ನು ಬೀಳ್ಕೊಟ್ಟಮೇಲೆ, ಎಲ್ಲಿಲ್ಲದ ಬೇಸರ ಅವನನ್ನು ಆವರಿಸಿತು. ಶುಭ್ರವಾದೊಂದು ಸಂಜೆ, ಕರಿಯ ಮೋಡಗಳು ಒಮ್ಮೆಲೆ ಕವಿದು ಬಂದ ಹಾಗೆ. ನಡೆಯುತ್ತಿದ್ದಂತೆ ಹಾದಿಗಡ್ಡವಾದ ಪೊದೆಪೊದರುಗಳತ್ತ ಕೈಚಾಚುತ್ತ, ಕೈಗೆ ಸಿಕ್ಕಿದ ಕುಡಿಗಳನ್ನೂ ಎಲೆ ಬಳ್ಳಿಗಳನ್ನೂ ಕಿತ್ತೆಸೆಯುತ್ತ ಆತ ಮುಂದುವರಿದ.

ಕತ್ತಲಾಗಲು ಮತ್ತೂ ಸ್ವಲ್ಪ ಹೊತ್ತಿತ್ತು. ಆಗಲೆ ಗುಡಿಸಲಿಗೆ ಹೋಗಿ ಆತ ಮಾಡಬೇಕಾದುದೇನೂ ಇರಲಿಲ್ಲ. ಅಲ್ಲಿ ಅಜ್ಜಿಯೊಡನೆ ಹರಟುತ್ತ ಕುಳಿತಿರಲು ಈಗ ಆತನಿಗೆ ಮನಸ್ಸಿರಲಿಲ್ಲ. ಪುನಃ ಹೊಲಕ್ಕೆ ಹೋಗೋಣವೆ? ಹೋರಿಗಳನ್ನು ನದಿಗೆ ಒಯ್ಯೋಣವೆ?—ಎಂದುಕೊಂಡರೂ, ಕಾಲುಗಳು ಮಾತ್ರ ಗೊತ್ತು ಗುರಿ ಇಲ್ಲದೆ ನಡೆದುವು.

ಚೆರ್ವತ್ತೂರಿಗೆ ಹೋಗುವ ಹಾದಿಯಲ್ಲಿ ಹಲವಾರು ಹೊಲಗಳನ್ನು ಬಳಸಿ ಬಂದು, ನದೀ ದಡವನ್ನು ಸೇರಿ, ಅದರುದ್ದಕ್ಕೂ ಪೂರ್ವಾಭಿಮುಖವಾಗಿ ಆತ ನಡೆದ. ಎದುರಾಗಿ ಯಾರೋ ಬರುತ್ತಿದ್ದುದು ಕಂಡಿತು. ಅವರನ್ನ ಭೇಟಿಯಾಗಲು ಇಷ್ಟವಾಗದೆ ಅಪ್ಪು, ನದೀ ದಂಡೆಯನ್ನು ಬಿಟ್ಟು ಮತ್ತೆ ಹೊಲದ ಏರಿಯನ್ನೇರಿದ.

ಪಾದಗಳ ಚಲನೆಗೆ ಅನುಗುಣವಾಗಿ ಯೋಚನೆಯೂ ಗೊತ್ತುಗುರಿಯಿಲ್ಲದೆ

ಸಾಗಿತು. ತ್ರಿಕರಪುರದ ಚಂದು, ಚಿರುಕಂಡನ ಕುಟುಂಬಕ್ಕೆ ಒದಗಿದ ದುರವಸ್ಥೆ, ಬಾಲ್ಯದ್ದೊಂದು ಕಹಿನೆನಪು, ತುಂಬ ತಿಳಿದವರಾದ ಮಾಸ್ತರು, ಅವರಿಗಿಂತಲೂ ಹೆಚ್ಚು ಬಲ್ಲ ಪಂಡಿತರು—ಪಂಡಿತರ ಗಂಭೀರ ಧ್ವನಿ : 'ಈ ಮಣ್ಣು ಯಾರದು? ನಮ್ಮದು. ಇದು ನಮ್ಮ ತಾಯ್ನೆಲ. ಈ ದೇಶ ಯಾರದು? ನಮ್ಮದು. ಇದು ನಮ್ಮ ರಾಷ್ಟ್ರ. ಹೊಲ ಯಾರದು? ಉಳುವವನದು. ಉಳುವವನೇ ಹೊಲದ ಒಡೆಯ .... ಹೌದೂ ಅಲ್ಲವೊ?'

ಹೌದು. ಸಂದೇಹವಿರಲಿಲ್ಲ. ಅಪ್ಪುವಿಗೆ ಅದೆಲ್ಲವೂ ತಿಳಿದಿತ್ತು.

ಆದರೆ ಚಿರುಕಂಡನ ತಂದೆ ಹೊಲ ಕಳೆದುಕೊಂಡಿದ್ದ. ನಾಳೆ ಆ ಸಂಸಾರವನ್ನು ಜಮೀನ್ದಾರರರು ಹೊಲ ಬಿಡಿಸಿ ಓಡಿಸಬಹುದು. ಚಿರುಕಂಡನ ತಾಯಿ ತಂದೆ ಮಗನೊಡನೆ ಭಿಕಾರಿಗಳಾಗಿ ಊರು ಬಿಡಬೇಕಾಗಿಬರಬಹುದು. ಕ್ರಾಂತಿಗೆ ಈಗತಾನೆ ಸೇರಿದ ಚಿರುಕಂಡನಿಗೇ ಹೀಗಾಗುವುದೆಂದರೆ? ಇದು ಸರಿಯೆ? ಇದು ನ್ಯಾಯವೆ?

ಇದು ಸರಿಯಲ್ಲ—ನ್ಯಾಯವಲ್ಲ, ಎಂದು ರೋದಿಸುತ್ತ ಉತ್ತರ ಕೊಡುತ್ತಿತ್ತು ಮನಸ್ಸು. ಆದರೆ ಆ ಉತ್ತರದ ಹಿಂದೆ ಅಸಹಾಯತೆ ಜೋಲುಮೋರೆ ಹಾಕಿ ಕುಳಿತಿತ್ತು.

....ಸೂರ್ಯ ಮುಳುಗಿ ಕತ್ತಲಾದಾಗ ಅಪ್ಪು ಮನೆ ಸೇರಿದ.

ಆತನ ತಂದೆ ಇನ್ನೂ ಬಂದಿರಲಿಲ್ಲ. ಚಿಮಣಿ ದೀಪದೆದುರು ಮಂಡಿಯೂರಿ ನೆಲದ ಮೇಲೆ ಒರಗಿಕೊಂಡು ಅಪ್ಪುವಿನ ತಮ್ಮ ಶಾಲೆಯ ಪಾಠವನ್ನೋದುತ್ತಿದ್ದ. ಆತನಿಗೆ ಕೀಟಲೆ ಕೊಡುತ್ತಿದ್ದ, ಕಿರಿಯವನು—ಕುಟ್ಟಿ.

ತಮ್ಮನನ್ನು ಕುರಿತು ಅಪ್ಪುವೆಂದ:

"ಮಾಸ್ತರು ಏನಾದರೂ ಕೇಳಿದರೇನೋ ?"

ತಮ್ಮ, ಮುಖವೆತ್ತಿ ಅಣ್ಣನನ್ನೊಮ್ಮೆ ನೋಡಿ, ಮತ್ತೆ ಪುಸ್ತಕದಲ್ಲಿ ದೃಷ್ಟಿನೆಟ್ಟು ಹೇಳಿದ:

"ನಿನ್ನೆ ನಿನ್ನಣ್ಣ ಎಷ್ಟು ಹೊತ್ತಿಗೆ ಮನೆ ಸೇರಿದ ಅಂತ ಕೇಳಿದ್ರು."

ಬೇರೇನನ್ನೂ ಮಾಸ್ತರು ಕೇಳುವ ಹಾಗಿರಲಿಲ್ಲ; ತಮ್ಮನಿಗೆ ಅವರೇನನ್ನೂ ಹೇಳುವ ಹಾಗಿರಲಿಲ್ಲ.

ಅಪ್ಪುವಿನ ತಾಯಿ ಹೊರಗೆ ಅಂಗಳದಲ್ಲಿದ್ದ ನೀರೊಲೆಯ ಮಣ್ಣಿನ ಗುಡಾಣಕ್ಕೆ ನೀರು ಸುರಿದು ಉರಿ ಮಾಡಿದಳು. ಅದು, ಹೊಲದಿಂದ ಮರಳುವ ಗಂಡಸಿನ ಸ್ನಾನಕ್ಕೆ ಸಿದ್ಧತೆ.

ಅಪ್ಪು ಅಂಗಳದಲ್ಲಿ ಬರಿ ಮೈಯನ್ನು ಗಾಳಿಗೊಡ್ಡಿ ಕುಳಿತ. ಒಲೆಯಲ್ಲಿ ಉರಿಯುತ್ತಿದ್ದ ಒಣಸೋಗೆಯ ಬೆಳಕು ಆತನ ಮುಖದ ಮೇಲೂ ಎದೆಯ ಮೇಲೂ ಬಿದ್ದು ಕುಣಿಯಿತು.

ಅಜ್ಜಿ ಮೊಮ್ಮಗನನ್ನು ನೋಡಿ ಕೇಳಿದಳು:

" ಅದೇನೋ ಹಾಗೆ ಕೂತಿದ್ದೀಯಾ—ಮುದುಕಪ್ಪನಹಾಗೆ. ನಿನಗೆ ಯಾತರದೂ ಚಿಂತೆ?"

ಅಪ್ಪು ಮಾತನಾಡಲಿಲ್ಲ.

ತಾಯಿ ಮಗನತ್ತ ನೋಡಿ ಮೆಲುದನಿಯಲ್ಲಿ ಕೇಳಿದಳು:

"ಮೈಲಿ ಹುಷಾರಿಲ್ವೆ ಅಪ್ಪು?"

ಅಪ್ಪು ಮುಖವೆತ್ತಿ, ಕಾತರದ ಕಣ್ಣುಗಳಿಂದ ನೋಡುತ್ತಿದ್ದ ತಾಯಿಯನ್ನು ದಿಟ್ಟಿಸಿ ಹೇಳಿದ: "ಹುಷಾರಾಗೇ ಇದೇನಮ್ಮ."

...ಎತ್ತುಗಳ ಕೊರಳ ಗಂಟೆಗಳು ಸದ್ದುಮಾಡಿದವು. ಅವುಗಳ ಹಿಂದೆಯೇ ನೊಗವನ್ನು ಹೆಗಲಮೇಲೇರಿಸಿಕೊಂಡು ಅಪ್ಪುವಿನ ತಂದೆಯೂ ಬಂದ. ತಾಯಿ ಎತ್ತುಗಳನ್ನು ಗುಡಿಸಲಿನ ಹಿಂಭಾಗದಲ್ಲಿದ್ದ ಹಟ್ಟಿಯಲ್ಲಿ ಕಟ್ಟಿದಳು. ತಂದೆ ನೊಗವನ್ನು ಮಾಡಕ್ಕೆ ತೂಗುಹಾಕಿ "ಉಸ್ಸಪ್ಪ" ಎಂದು ಉಸಿರುಬಿಟ್ಟು, ನೆಲದ ಮೇಲೆ ಕುಳಿತ.

ತಡವಾಗಿಯೇ ಬಂದಿದ್ದ ತಂದೆ, ಆ ದಿನ ಕುಡಿತಕ್ಕೋಸ್ಕರ ಮತ್ತೆ ಹೊರಟುಹೋಗುವ ಲಕ್ಷಣ ಕಾಣಿಸಲಿಲ್ಲ. ಅವನನ್ನೇ ನೋಡುತ್ತ ಅಪ್ಪು ಚಿರುಕಂಡನ ಮನೆಯವರಿಗಾದ ಅನ್ಯಾಯದ ವಿಷಯ ಆತನಿಗೆ ಹೇಳಬೇಕು—ಎಂದುಕೊಂಡ. ಹಾಗೆ ತೋರಿತೇ ಹೊರತು ಮಾತು ಹೊರಡಲಿಲ್ಲ.

ಎಳೆಯರಿಬ್ಬರೂ ಎಂದಿನಂತೆ ಬೇಗನೆ ಉಂಡು ನಿದ್ದೆ ಹೋದರು. ಅಪ್ಪು ತಂದೆಯ ಜತೆಯಲ್ಲಿ ಸ್ನಾನ ಮಾಡಿದ. ಆ ಬಳಿಕ ಅವರೆಲ್ಲ ಗಂಜಿಯೂಟಕ್ಕೆ ಕುಳಿತರು.

ಆಗ ತಂದೆಯಿಂದ ಒಂದು ಪ್ರಶ್ನೆ ಬಂತು:

"ಚಿರುಕಂಡ ಕತ್ತಲಾಗೋವರೆಗೂ ಇಲ್ಲೆ ಇದ್ನೇನೋ?"

ಸಹಜವಾಗಿಯೇ ಕಂಡುಬಂದ ಆ ಪ್ರಶ್ನೆಗೆ ಅಪ್ಪು ಉತ್ತರವಿತ್ತ:

"ಸ್ವಲ್ಪ ಹೊತ್ತು ಇದ್ದಿಟ್ಟು ಮನೆಗೆ ಹೋದ."

ತಾಯಿ ಮತ್ತೊಮ್ಮೆ ಬಡಿಸಲು ಬಂದಾಗ, ಬೇಡವೆಂದು ಕೈ ಅಡ್ಡ ಹಿಡಿಯುತ್ತ ತಂದೆ ಹೇಳಿದ: "ಚಿರುಕಂಡನ ತಂದೆ ಹೊಲ ಕಳ್ಕೊಂಡ."

"ಅಪ್ಪು ತಲೆಬಾಗಿ ಗಂಜಿಯನ್ನೇ ನೋಡುತ್ತ, ಹಿರಿಯರ ಮಾತುಗಳಿಗೆ ಕಿವಿಗೊಟ್ಟ.

"ಹೌದೆ? ಪಾಪ !"

ಅದು ತಾಯಿಯ ಉದ್ಗಾರ. ಅದರ ಜತೆಯಲ್ಲೇ ಅಜ್ಜಿಯ ಸ್ವರ:

"ಯಾರು, ಜಮೀನ್ದಾರರೇ ಹಿಡಕೊಂಡ್ಬಿಟ್ರೋ ?"

"ಹೂಂ. ಸಾಲ ಬಾಕಿ ಇತ್ತು ನೋಡು."

ಇಷ್ಟು ಹೇಳಿ ತಂದೆ, ಮೌನವಾಗಿದ್ದ ಮಗನತ್ತ ನೋಡಿದ. ಆತನ ಆಪ್ತ ಸ್ನೇಹಿತನ ಮನೆಗೆ ಸಂಬಂಧಿಸಿ ಮಾತನಾಡುತ್ತಿದ್ದರೂ ಮಿಸುಕದೆ ಕುಳಿತಿದ್ದುದನ್ನು ಕಂಡು ತಂದೆಗೆ ಆಶ್ಚರ್ಯವಾಯಿತು. ಆತ ಕೇಳಿದ:

"ಏನೂಂತ ಗೊತ್ತಾಯ್ತೇನೋ?"

ತಗ್ಗಿದ ಧ್ವನಿಯಲ್ಲಿ ಅಪ್ಪು ಉತ್ತರವಿತ್ತ:

"ಹೂಂ ಆಗ್ಲೇ ಗೊತ್ತಾಯ್ತು."

"ಆಗ್ಲೇ? ಯಾರು ಹೇಳಿದ್ರು?"

"ಚಿರುಕಂಡ."

"ಚಿರುಕಂಡ..."

ತಂದೆ ಅಷ್ಟಕ್ಕೇ ನಿಲ್ಲಿಸಿದ. ಹುಡುಗರು ಇಂಥ ಸಂಗತಿಯನ್ನೆಲ್ಲ ಚರ್ಚಿಸಿದರೆಂಬ ವಿಷಯ ಆತನಿಗೆ ಸೋಜಿಗವನ್ನುಂಟುಮಾಡಿತು.

ತಾಯಿ ಕೇಳಿದಳು:

"ಮತ್ತೆ ನಮಗೆ ಹೇಳ್ಲೇ ಇಲ್ವಲ್ಲೋ?"

ಅಪ್ಪು ಹೇಳಿರಲಿಲ್ಲ. ಆದರೆ ನೀರೊಲೆಯ ಬೆಳಕಿನ ಮುಂದೆ ಸಪ್ಪಗೆ ದುಃಖದಿಂದ ಕುಳಿತಿದ್ದ ಮಗನ ಚಿತ್ರ ತಾಯಿಯ ಮನಸ್ಸಿನ ಮುಂದೆ ಸುಳಿಯಿತು.

ಮಾತನಾಡಲಿಲ್ಲ ಅಪ್ಪು. 'ಮನೆಯಲ್ಲಿ ಹೇಳದೇ ಇರುವ ವಿಷಯಗಳು ಎಷ್ಟೊಂದಿಲ್ಲ!' ಎಂದು ಆತನ ಮನಸ್ಸು ಸದ್ದಿಲ್ಲದೆ ಗೊಣಗಿತು.

ತಂದೆ ಯೋಚಿಸಿ, ಉತ್ತರ ಹೊಳೆಯದೆ ಸೋತವನಂತೆ ತಲೆಯಾಡಿಸಿ ಊಟ ಮುಗಿಸಿದ.

೭

ಕಾಲ ಕಳೆಯಿತು. ಬೇಸಗೆ ಮುಗಿದು ಮಳೆ ಹನಿಯಿತು. ಮಾವಿನ ಹಣ್ಣುಗಳು ಮಾಯವಾಗಿ ಗೊರಟುಗಳಷ್ಟೇ ಉಳಿದುವು. ಅವು ತೋಯ್ದು ಹಸಿ ಮಣ್ಣಿನೊಡನೆ

ಚೆಲ್ಲಾಟವಾಡಿ ಮೊಳೆತುವು. ಮಳೆಗಾಲದ ತೇಜಸ್ವಿನಿ ನದಿ ಮೈತುಂಬಿ ಸಂತೋಷದಿಂದ ಮೆರೆಯಿತು. ಸಣ್ಣಪುಟ್ಟ ದೋಣಿಗಳೆಲ್ಲ ಭಯಗೊಂಡು ಭೂಮಿಗೇರಿದುವು. ಸಾಹಸಿಗಳು ನದಿಯ ಮೇಲಿನಿಂದ ತೇಲಿಬಂದ ಮರದ ತೊಲೆಗಳನ್ನು ಹಿಡಿದರು.

ಅಪ್ಪು ಆ ರೀತಿ ಸಂಪಾದಿಸಿದ ಹತ್ತು ತೆಂಗಿನಕಾಯಿಗಳನ್ನು ಮನೆಗೆ ತಂದ.

"ಪ್ರಾಣದ ಭಯ ಇಲ್ವೇನೋ ನಿಂಗೆ? ನಿನ್ನ ಮನೆ ಹಾಳಾಯ್ತು. ಈ ತೆಂಗಿನಕಾಯೂ ಬೇಡ, ಏನೂ ಬೇಡ. ನಿನ್ನಪ್ಪನಿಗೆ ಹೇಳಿ ಪೂಜೆ ಮಾಡಿಸ್ತೇನೆ ಇವತ್ತು"—ಎಂದು ಆತನ ತಾಯಿ ಗೋಳಾಡುತ್ತ ಗದರಿಸಿದುದಷ್ಟೇ ಬಂತು. ಅಪ್ಪು ನಕ್ಕ. ಅವನೂ ಅಷ್ಟೆ—ಅವನ ಓರಗೆಯವರೂ ಅಷ್ಟೆ; ಅವರಿಗಿಂತ ಹಿರಿಯರಾದ ಯುವಕರೂ ಅಷ್ಟೆ.

ಆ ಅವಧಿಯಲ್ಲೇ ಮಾಸ್ತರು, ಸಂಜೆ ಶಾಲೆಯಲ್ಲಿ ಪತ್ರಿಕೆಯನ್ನೋದಿ ಹೇಳುವ ಪರಿಪಾಠವನ್ನು ಆರಂಭಿಸಿದರು. ಅದು ಚೆರ್ವತ್ತೂರು ರೈಲ್ವೆನಿಲ್ದಾಣದಿಂದ ಅವರು ದಿನವೂ ತರಿಸುತ್ತಿದ್ದ ಪತ್ರಿಕೆ. ಮೊದಮೊದಲು ಯಾರಿಗೂ ಆಸಕ್ತಿ ಇರಲಿಲ್ಲ. ಆದರೆ ನಡುನಡುವೆ ಯಾವುದೋ ಕತೆ—ಯಾವುದೋ ಹರಟೆ—ನುಸುಳಿಕೊಂಡು, ಪತ್ರಿಕೆಯ ವಾಚನ ಕಾಲಯಾಪನೆಗೊಂದು ಸಾಧನವಾಯಿತು. ಕೆಲಸವಿಲ್ಲದೇ ಇದ್ದಾಗ ರೈತರು ಬೀಡಿ ಸೇದುತ್ತಲೋ ಎಲೆ ಅಡಿಕೆ ಜಗಿಯುತ್ತಲೋ ಶಾಲೆಯ ಜಗಲಿಯಲ್ಲಿ ಕುಳಿತು ಮಾಸ್ತರರ ಮಾತುಗಳಿಗೆ ಕಿವಿಗೊಟ್ಟರು.

ಆ ಊರಿನ ಪ್ರಮುಖ ಜಮೀನ್ದಾರರು ಇಬ್ಬರು. ಒಬ್ಬರು ಮಹಾ ಬ್ರಾಹ್ಮಣ ನಂಬೂದಿರಿ. ಅವರ ಮನೆಯ ಹೆಂಗಸರು, ಬಾಗಿಲಿನಿಂದ ಹೊರಕ್ಕೆ ಮುಖವಿಡುತ್ತಲೇ ಇರಲಿಲ್ಲ. ಇನ್ನೊಬ್ಬರು ನಂಬಿಯಾರ್. ಹೊಲೆಯರನ್ನಾದರೂ ಸರಿಯೆ, ಮೈ ಮುಟ್ಟಿಯೋ ಬೆನ್ನು ತಟ್ಟಿಯೋ ಕೆನ್ನೆಗೆ ಏಟುಬಿಗಿದೋ ಮಾತನಾಡಿಸುವ ಸಮರ್ಥ, ವಯಸ್ಸಿನಲ್ಲಿ ಅವರು ನಂಬೂದಿರಿಗಿಂತ ಕಿರಿಯ. ಮಾಸ್ತರು ಅಲ್ಲಿಗೆ ಬರುವುದಕ್ಕೆ ಮುಂಚೆ ಆ ಊರಿಗೆ ಪತ್ರಿಕೆ ಇರುತ್ತಿದ್ದುದು ಅವರೊಬ್ಬರ ಮನೆಯಲ್ಲೇ. ಪತ್ರಿಕೆ ತರಿಸುತ್ತಿದ್ದ ತಾವು ಆಧುನಿಕರೆಂಬುದು ಅವರ ಖಚಿತ ಅಭಿಪ್ರಾಯವಾಗಿತ್ತು.

ಮಾಸ್ತರು ಪತ್ರಿಕೆ ತರಿಸುತ್ತಿದ್ದರೆಂದು ತಿಳಿದಾಗ ನಂಬಿಯಾರರು ಭುಜ ಕುಷ್ಪಳಿಸಿದ್ದರು. 'ಹೋಗಲಿ. ವಿದ್ಯಾವಂತ ಓದುವ ಚಟವಾದರೂ ಮರೀಬಾರದಲ್ಲ. ಇಲ್ದಿದ್ರೆ ಹುಡುಗರಿಗೆ ಪಾಠ ಏನು ಹೇಳಿಕೊಡ್ತಾನೆ?" ಎಂದು ಸುಮ್ಮನಾಗಿದ್ದರು.

ಆದರೆ, ಶಾಲೆಯ ಜಗಲಿಯ ಮೇಲೆ ಸಂಜೆ ರೈತರೂ ಬಂದು ಕುಳಿತುಕೊಳ್ಳ

ತೊಡಗಿದುದು ತಿಳಿದಾಗ, ನಂಬಿಯಾರರಿಗೆ ರೇಗಿತು. ಶಾಲೆಯ ವಿಶ್ವಸ್ಥ ಸಮಿತಿಯ ಮುಖ್ಯಸ್ಥರಾದ ಅವರು ಮಾಸ್ತರಿಗೆ ಕರೆಕಳುಹಿಸಿದರು.

ಮಾಸ್ತರು ಜಮೀನ್ದಾರರೆದುರು ಬೀರಿದುದು ಸ್ವಾಭಾವಿಕವಾದ ಮುಗುಳುನಗೆ. ಕೆತ್ತನೆಯ ಕುರ್ಚಿಯ ಮೇಲೆ ಮೆತ್ತನೆಯ ಗಾದಿಗೊರಗಿ ಕುಳಿತಿದ್ದ ನಂಬಿಯಾರರು ತಮ್ಮೆದುರು ದೂರದಲ್ಲಿದ್ದ ಬೆಂಚನ್ನು ತೋರಿಸುತ್ತ, ಸಿಗರೇಟಿಗೆ ಬೆಂಕಿಕಡ್ಡಿ ಅಂಟಿಸುತ್ತ, ಹೇಳಿದರು:

"ಕೂತ್ಕೊಳ್ಳಿ."

ಮಾಸ್ತರು ವಿನಯದಿಂದಲೆ ಕುಳಿತರು. ಅವರ ಕೈಯಲ್ಲಿ ಆ ದಿನದ 'ಮಾತೃಭೂಮಿ' ಪತ್ರಿಕೆಯ ಸುರುಳಿ ಇತ್ತು. ನಂಬಿಯಾರರು ಅದನ್ನೊಮ್ಮೆ ಕಡೆಗಣ್ಣಿನಿಂದ ದಿಟ್ಟಿಸಿ ನೋಡಿ, ಹುಬ್ಬು ಮೇಲಕ್ಕೇರಿಸಿ, ಕೆಳಕ್ಕಿರಿಸಿ ಸಿಗರೇಟಿನ ಹೊಗೆಯುಗುಳಿ, ಒಂದು ಕ್ಷಣ ಮೌನವಾಗಿದ್ದು ಕೇಳಿದರು:

"ಶಾಲೆಯ ಕೆಲಸ ಕಾರ್ಯಗಳೆಲ್ಲ ಸರಿಯಾಗಿ ನಡೀತಾ ಇವೆಯೋ?"

"ಓಹೋ."

"ನೀವು ಸೊಗಸಾಗಿ ಪಾಠ ಹೇಳ್ತೀರಂತೆ. ನಮ್ಮ ಹುಡುಗ ದಿನಾಲೂ ನಿಮ್ಮನ್ನು ಹೊಗಳ್ತಾನೇ ಇರ್ತಾನೆ."

ಈ ಸೊಗಸು ಮಾತಿನ ಹಿಂದೆ, ಬೇರೇನೋ ಮುಖಮರೆಸಿಕೊಂಡಿದೆ ಎಂದು ಮಾಸ್ತರು ತಿಳಿಯದಿರಲಿಲ್ಲ. ಅವರು ನಕ್ಕು ಹೇಳಿದರು:

"ಅದೇನು ಹೇಳ್ತೇನೋ..... ಅಂತೂ ಹುಡುಗರು ತಪ್ಪಿಸ್ಕೊಳ್ಳೋದು ಬಹಳ ಕಡಿಮೆ."

ಇಷ್ಟು ಮೃದುವಾಗಿ ಈತನೊಡನೆ ಮಾತನಾಡುವ ಅಗತ್ಯವಾದರೂ ಏನು ಎಂದು ಜಮೀನ್ದಾರರು ತಮ್ಮ ವರ್ತನೆಯ ವಿಷಯದಲ್ಲಿ ತಾವೇ ಅಸಹನೆ ತೋರಿ, ಕತ್ತು ಕುಲುಕಿದರು. ಮನಸ್ಸಿನಲ್ಲಿದ್ದುದನ್ನು ನೇರವಾಗಿ ಹೇಳಬೇಕೆನಿಸಿತು. ಆದರೆ ಕಟುಮಾತು, ತಮ್ಮ ಉದ್ದೇಶ ಸಾಧನೆಗೆ ಪ್ರತಿಕೂಲವಾಗಬಹುದೆಂದು, ಸಿಟ್ಟು ನುಂಗಿಕೊಂಡು, ಮೌನವಾಗಿಯೆ ಇದ್ದು ಸಿಗರೇಟು ಸೇದಿದರು.

ಕರೆಕಳುಹಿದ ಕಾರಣವನ್ನು ಮಾಸ್ತರು ಆಗಲೇ ಊಹಿಸಿದ್ದರು. ಪರಿಸ್ಥಿತಿ ವಿಕೋಪಕ್ಕೆ ಹೋಗದಂತೆ ಎಚ್ಚರದಿಂದಿರಲು ತೀರ್ಮಾನಿಸಿಯೇ ಅವರು ಬಂದಿದ್ದರು. ಆಡಬೇಕಾದ ಮಾತುಗಳನ್ನು ಮೊದಲೇ ತೂಗಿನೋಡಿ ಸಂವಾದ ಬೆಳೆಸಲು ಸಿದ್ಧರಾಗುತ್ತ, ಅವರೆಂದರು:

"ಅದೇನೋ ಮಾತನಾಡಬೇಕು ಎಂದಿರಂತೆ."

ಆ ಮಾತಿನ ಧ್ವನಿಯಿಂದ ಮಾಸ್ತರನ್ನು ಅಳೆಯಲೆತ್ನಿಸುತ್ತ ನಂಬಿಯಾರರೆಂದರು:

"ಅವಸರವೇನೂ ಇಲ್ಲವಷ್ಟೆ?"

"ಛೆ! ಛೆ! ಎಂಥ ಅವಸರ?"

"ಹುಡುಗರೆಲ್ಲ ಆಗಲೇ ಮನೆಗೆ ಹೋಗಿರಬೇಕು."

"ಹೌದು, ಹೌದು. ಆಟಗಳನ್ನು ಆಡಿಸಿ ಕಳಿಸ್ಬಿಟ್ಟೆ."

"ಅಂದಮೇಲೆ ಬೇಕಾದಷ್ಟು ಬಿಡುವಿದೆ ಅಂತಾಯ್ತು."

ರೈತರಿಗೆ ಪತ್ರಿಕೆಯೋದಿ ಹೇಳುವ ಕೆಲಸವಿದೆಯೆಂದು ಮಾಸ್ತರರ ಬಾಯಿಯಿಂದಲೇ ಹೊರಡಿಸಲು ನಂಬಿಯಾರರು ಯತ್ನಿಸಿದರು. ಆದರೆ ಆ ಮಾಸ್ತರು ಅಷ್ಟು ಸುಲಭವಾಗಿ ಬಲೆಯ ಬಳಿಗೆ ಸುಳಿಯುವ ಮೀನಾಗಿರಲಿಲ್ಲ. ಅವರು ಎಂದರು:

"ನೀವು ಸರಿಯಾಗೇ ಹೇಳಿದಿರಿ. ಹೊತ್ತು ಕಳೆಯೋದು ಕಷ್ಟ ಅಂತ ಪತ್ರಿಕೆ ತರಿಸ್ಕೊಂಡು ಓದ್ತಾ ಇರ್‍ತೇನೆ."

'ಎಲಾ!' ಎಂದರು ನಂಬಿಯಾರರು ಮನಸ್ಸಿನೊಳಗೇ. 'ನನಗೇ ಇಟ್ಟನಲ್ಲ!' ಬಹಿರಂಗವಾಗಿ ಗಾಂಭೀರ್ಯದ ಮುಖವಾಡ ಧರಿಸುತ್ತ, ಅವರು ಹೇಳಿದರು:

"ಆ ವಿಷಯವಾಗಿಯೇ ಮಾತನಾಡೋಣಾಂತ ನಿಮ್ಮನ್ನು ಕರೆಸ್ದೆ. ರೈತರೆಲ್ಲ ಸಾಯಂಕಾಲದ ಹೊತ್ತು ಶಾಲೆಯ ಜಗಲೀಲಿ ಸೇರ್‍ತಾರಂತೆ. ಅವರಿಗೇನೊ ಬುದ್ಧಿ ಇಲ್ಲ, ಹೊಲಸು ಜನ. ನೀವು ಪಾಪ, ಏನೂ ತಿಳೀದೆ ಅವರ ಜತೇಲಿ ಮಾತಾಡ್ತಾ ಇರ್‍ತೀರಿ. ಅವರೆಂಥವರು ಅನ್ನೋದು ನಿಮಗೆ ಗೊತ್ತಿಲ್ಲ. ದೆಟ್ಟು ಕೊಟ್ಟರೆ ಸಾಕು, ಕೈಯನ್ನೇ ನುಂಗೋ ಜಾತಿ."

ಮುಖ ಕೆಂಪೇರುವ ಹಾಗಾದರೂ ಮಾಸ್ತರು ತಾಳ್ಮೆಯಿಂದಿದ್ದು, ಸದ್ದಿಲ್ಲದೆ, ಜಮೀನ್ದಾರರ ಕಣ್ಣು ತಪ್ಪಿಸಿ ಉಗುಳು ನುಂಗಿದರು.

"ಹಾಗೇನೂ ಇಲ್ಲ" ಎಂದು ಅವರ ನಾಲಿಗೆ ಮೆಲ್ಲನೆ ನುಡಿಯಿತು.

"ನಿಮಗೆ ತಿಳಿಯೋದಿಲ್ಲ ಮಾಸ್ತರೆ. ಈ ಜನ ಎಂಥವರು ಅನ್ನೋದು ನನಗೆ ಗೊತ್ತಿದೆ! ನಾವು ಅವರನ್ನು ದೂರವಿಟ್ಟರೆ ಮಾತ್ರ ಅವರು ನಮ್ಮನ್ನು ಗೌರವಿಸುತ್ತಾರೆ. ವಿದ್ಯೆ ಇಲ್ಲದೋರು. ಸಂಸ್ಕೃತದಲ್ಲಿ ಅದೇನೋ ಗಾದೆ ಇದೆಯಲ್ಲ, ಹಾಗೆ—ಬರೇ ಮೃಗಗಳು. ಅವರನ್ನು ಮೃಗಗಳೆಂದೇ ನೋಡ್ಬೇಕು. ಅವಕ್ಕೆ ಅರ್ಥವಾಗೋದು ಒಂದೇ ಭಾಷೆ, ಬಾರುಕೋಲಿನ ಭಾಷೆ. ಏನು ಹೇಳ್ತೀರಾ?"

ಮಾಸ್ತರು ಏನೂ ಹೇಳಲಿಲ್ಲ. ಅವರ ಮುಖ ಮತ್ತೂ ಕೆಂಪಗಾಯಿತು. ತುಟಿಗಳು ಸೂಕ್ಷ್ಮವಾಗಿ ಕಂಪಿಸಿದುವು. ಪತ್ರಿಕೆಯನ್ನು ಹಿಡಿದಿದ್ದ ಮುಷ್ಟಿ

ಬಿಗಿಯಾಯಿತು. ದ್ವೇಷದಿಂದ, ತಿರಸ್ಕಾರದಿಂದ, ಕಟುವಾಗಿ ಉತ್ತರ ಕೊಡುವಂತೆ ಪ್ರೇರಪಿಸುತ್ತ, ಮೆದುಳು ತಪ್ತವಾಯಿತು. ಆದರೂ ಮಾಸ್ತರು ಶಾಂತಿ ಮಂತ್ರ ಜಪಿಸಿದರು. ಮೌನವಾಗಿ 'ಮೈಮರೆತು ಮೂರ್ಖನಾಗಬೇಡ' ಎಂದು ತನಗೆ ತಾನೇ ವಿವೇಕ ಹೇಳಿದರು.

ಸುಮ್ಮನೆ ಕುಳಿತ ಮಾಸ್ತರನ್ನು ನಂಬಿಯಾರರ ದೃಷ್ಟಿ ಪರೀಕ್ಷಿಸಿ ನೋಡಿತು. ತಮ್ಮ ಮಾತಿನ ಪ್ರಭಾವಕ್ಕೆ ಒಳಗಾಗಿ ಬೆದರಿದ ಮಗುವಿನಂತೆ ಮಾಸ್ತರು ಕಂಡರೇ ಹೊರತು ಬೇರೆ ಯಾವ ಸಂದೇಹವೂ ಅವರಲ್ಲಿ ಮೂಡಲಿಲ್ಲ. ತಾವು ಆಡಿದ ಮಾತುಗಳ ಬಗೆಗೆ ತಾವೇ ಹೆಮ್ಮೆಪಡುತ್ತ ಅವರು, ಕೊನೆಯ ಬಾರಿ ಸಿಗರೆಟಿನ ಉಸಿರೆಳೆದು ಹೊಗೆ ಬಿಟ್ಟರು. ಬಳಿಕ ಮುಗುಳು ನಕ್ಕು ಅವರೆಂದರು:

"ನಿಮಗೊಂದು ರಹಸ್ಯ ಹೇಳ್ತೇನೆ. ನನ್ನ ಮಾವ ಇದ್ದಷ್ಟು ಕಾಲವೂ ಇಲ್ಲಿ ಶಾಲೆ ತೆರೆಯೋದನ್ನು ವಿರೋಧಿಸಿದ್ರು. ಆಡುವವರ ಮಕ್ಕಳು ಆಡ್ಬೇಕು; ಬೇಡುವವರ ಮಕ್ಕಳು ಬೇಡ್ಬೇಕು ಅನ್ನೋದು ಅವರ ಸ್ಪಷ್ಟ ಅಭಿಪ್ರಾಯವಾಗಿತ್ತು. ಆದರೆ ಅವರ ತಲೆಮಾರು ಬೇರೆ, ನಮ್ಮ ತಲೆಮಾರು ಬೇರೆ. ನಾನು ಒಪ್ಪಿಲ್ಲ."

ಮೆಚ್ಚುಗೆ ಸೂಚಿಸಿ ಉಸಿರಾಡಲು ಒಂದು ಅವಕಾಶ ದೊರೆಯಿತೆಂದು ಮಾಸ್ತರೆಂದರು:

"ನಿಮ್ಮ ವಿಚಾರ ಸರೀಂತ ಯಾರು ಬೇಕಾದರೂ ಹೇಳಿಯಾರು."

ನಂಬಿಯಾರರಿಗೆ ಆ ಪ್ರಶಂಸೆ ಕೇಳಿ ಸಂತೋಷವಾಯಿತು. ಆ ಸಂತೋಷದ ಭರದಲ್ಲಿ ಗೋಪ್ಯವಾಗಿ ಮಾತನಾಡುವಂತೆ, ಸ್ವರ ತಗ್ಗಿಸಿ ಅವರೆಂದರು:

"ಆ ನಂಬೂದಿರಿಗೂ ಶಾಲೆ ತೆರೆಯೋದು ಇಷ್ಟವಿರ್ಲಿಲ್ಲ. ನಾನು ಮತ್ತು ಆತ ಸ್ನೇಹಿತರಾದ್ರೂ—ನಿಮ್ಮಲ್ಲಿ ಹೇಳೋದಕ್ಕೇನಂತೆ?—ಅವನು ಮಹಾ ಖದೀಮ. ಶೂದ್ರರು ಯಾರಿಗೂ ವಿದ್ಯೆ ಅಗತ್ಯವಿಲ್ಲಾಂತ ಅವನ ಅಭಿಪ್ರಾಯ. ನನಗೆ ಗೊತ್ತಿಲ್ಲವಾ ಅದೆಲ್ಲ? ಹಟ ತೊಟ್ಟು ಶಾಲೆ ತೆರೆಯೋಹಾಗೆ ಮಾಡ್ದೆ. ಹೊರಗಿನಿಂದ ಅಧಿಕಾರಿಗಳು ದೊಡ್ಡವರು ಯಾರಾದರೂ ಬಂದಾಗ ಶಾಲೇನೆಲ್ಲ ನೋಡಿ, ಕೊಂಡಾಡೋದು ಯಾರನ್ನು ಹೇಳಿ?"

ತುಟಿ ಪಿಟ್ಟೆನ್ನದಿದ್ದರೂ ನಂಬಿಯಾರರ ಮಾತನ್ನು ನಾನು ಕೇಳುತ್ತಿದ್ದೇನೆ ಎಂಬುದಕ್ಕೆ ಸೂಚನೆಯಾಗಿ ಮಾಸ್ತರು ತಲೆಯಾಡಿಸಿದರು. ಮೈಯೆಲ್ಲ ಬೆವತು ಬೇಯುತ್ತಿದ್ದಂತೆ ಕಂಡರೂ ಅವರು ಸ್ಥೈರ್ಯದಿಂದ ಕುಳಿತರು.

ಆದರೆ ಮಾಸ್ತರ ಇರುವಿಕೆಯನ್ನೇ ಅಣಕಿಸುವ ಹಾಗೆ ಇನ್ನೊಂದು ಮಾತು ಬಂತು:

"ಈ ರೀತಿ ಶಾಲೆಯ ಸ್ಥಾಪನೆಗೆ ನಾನೇ ಮೂಲ ಕಾರಣನಾದರೂ ರೈತರ ಮಕ್ಕಳಿಗೆಲ್ಲ ವಿದ್ಯೆ ಕೊಡೋ ವಿಷಯದಲ್ಲಿ ನನ್ನದೇ ಆದ ಅಭಿಪ್ರಾಯವುಂಟು. ಈ ಜನ ಯಾರೂ ಕಾಲೇಜಿಗೆ ಹೋಗಬೇಕಾಗಿಲ್ಲ; ಹೈಸ್ಕೂಲು ಇವರಿಗೆ ಅಗತ್ಯವಿಲ್ಲ. ರೈತರ ಮಕ್ಕಳು ಸಹಿ ಹಾಕೋದಕ್ಕೆ ಕಲಿತರೆ ಸಾಕು. ಇಷ್ಟು ವಿದ್ಯೆಯಾದರೂ ಯಾಕೆ ಗೊತ್ತೆ? ಬರೇ ಹೆಬ್ಬೆಟ್ಟಿನ ರುಜುವೇ ಇದ್ದರೆ, ಏನೂ ತಿಳೀದೋರಿಗೆ ಮೋಸಮಾಡ್ತಾ ಇದ್ದಾರೇಂತ ಇವರು ಬಡ್ಕೋಬಹುದು. ಮುಂದೆ ಹಾಗಲ್ಲ. ಕರಾರು ಪತ್ರ ಏನಿದ್ದರೂ, ಬರೆದದ್ದು ಪೂರ್ತಿ ಅರ್ಥವಾಗಿದೇಂತ ಹೇಳಿ, ಅವರು ಅಕ್ಷರದಲ್ಲೇ ಸಹಿ ಹಾಕ್ಬಹುದು, ಏನು ಹೇಳ್ತೀರಾ?"

ಈ ಸಲವೂ ಏನನ್ನೂ ಹೇಳುವುದು ಮಾಸ್ತರಿಂದಾಗಲಿಲ್ಲ. ಅವರು ಅವಾಕ್ಕಾದರು. ಉಳ್ಳವರ ವಿಷಯ ಅವರಷ್ಟೇ ತಿಳಿದಿದ್ದರೂ ಈ ವಿಚಾರಸರಣಿಯ ವಿಶಿಷ್ಟತೆಯನ್ನು ಕಂಡು ಬೆರಗಾದರು. ಅವರ ಎದೆಯೊಳಗೆ ಸಂಕಟವಾಯಿತು. ಆತ್ಮಾಭಿಮಾನಿಯಾದ ಮನುಷ್ಯ. ಇಂಥ ಮಾತುಗಳನ್ನು ಕೇಳಲು ಇಷ್ಟವಿಲ್ಲದಿದ್ದರೆ ಎದ್ದು ಹೋಗಬಹುದು. 'ಬರ್‍ತೇನೆ, ಕೆಲಸವಿದೆ' ಎಂದು ಹೇಳಿ ಎದ್ದು ಹೋಗಲೇಬೇಕು, ಎನ್ನಿಸಿತು. ಆದರೆ ಹಾಗೆ ವಿರಸಕ್ಕೆ ಎಡೆ ಕೊಡುವುದರ ಪರಿಣಾಮವೇನೆಂದು ಊಹಿಸುವುದು ಕಷ್ಟವಾಗಿರಲಿಲ್ಲ. ಬಹಿರಂಗವಾಗಿ ನಂಬಿಯಾರರನ್ನು ಕೆಣಕುವುದೆಂದರೆ, ತನ್ನ ಕೆಲಸಕ್ಕೆ ತಾನೇ ಸಂಚಕಾರ ತಂದುಕೊಂಡ ಹಾಗೆ. ಉಪಾಧ್ಯಾಯ ವೃತ್ತಿಯಿಂದ ಹೊರಬಿದ್ದ ಬಳಿಕ ರೈತರ ನಡುವಿನ ತನ್ನ ದುಡಿಮೆಯೂ ಕೊನೆಗಂಡಹಾಗೆ. ಇದು ಸ್ಪಷ್ಟವಾಗಿದ್ದ ಮಾಸ್ತರು, ಭಾವನೆಗಳನ್ನು ತನ್ನ ಹತೋಟಿಯೊಳಗಿಟ್ಟು ತಣ್ಣಗಿರಲು ಯತ್ನಿಸಿದರು. ನೇರವಾಗಿ ಕುಳಿತಿರಲಾರದೆ ಸ್ವಲ್ಪ ಕುಗ್ಗಿ, ಒಣಗಿಹೋಗಿದ್ದ ತುಟಿಗಳನ್ನು ನಾಲಿಗೆಯಿಂದ ಸವರಿದರು.

ಮಾಸ್ತರ ಮೌನವನ್ನು ಕಂಡು ಜಮೀನ್ದಾರರಿಗೆ, ತಮ್ಮ ಮಾತು ಪರಿಣಮಕಾರಿಯಾಯಿತೆಂಬ ಅಭಿಪ್ರಾಯ ಹೆಚ್ಚು ದೃಢವಾಯಿತು. ಅವರು ಊಳಿಗದವನನ್ನು ಕರೆದು ಚಹ ತರಲು ಹೇಳಿದರು. ಮಾಸ್ತರ ಸುಖದುಃಖ ವಿಚಾರಿಸುತ್ತ ಅವರೆಂದರು:

"ಶಾಲೆಯಲ್ಲಿ ನೀವು ಇರೋದಕ್ಕೆ ಎಲ್ಲಾ ಅನುಕೂಲವಾಗಿದೆಯೋ?"

"ಇದೆ" ಎಂದು ಮಾಸ್ತರು ಉತ್ತರ ಕೊಟ್ಟರು. ಸ್ವರ ಕ್ಷೀಣವಾಗಿತ್ತು.

"ಬೇಕಾದರೆ ಆ ಹಿತ್ತಿಲಲ್ಲೇ ಒಂದಿಷ್ಟು ತರಕಾರಿ ಬೆಳೆಸ್ಬಹುದು. ನಮ್ಮ ರೈತರಿಗೆ ಹೇಳ್ತೇನೆ ಬಂದು ಕೆಲಸ ಮಾಡ್ತಾರೆ."

"ಅಯ್ಯೋ ಬೇಡಿ! ಒಬ್ಬನಿಗೆ ಎಷ್ಟು ಬೇಕು? ಈ ಊರಲ್ಲಿ ತರಕಾರಿಗೇನು

ಕಡಿಮೆಯೆ? ಧಾರಾಳವಾಗಿ ಸಿಗ್ತದೆ."

ಸಾಮಾನ್ಯವಾಗಿ ಮಾಸ್ತರಿಗೆ ಬೇಕಾದ ತರಕಾರಿಯನ್ನೆಲ್ಲ ವಿದ್ಯಾರ್ಥಿಗಳೇ ತಂದುಕೊಡುತ್ತಿದ್ದರು ; ಮಾಸ್ತರು ಬೇಡವೆಂದರೂ ತರುತ್ತಿದ್ದರು. ದುಡ್ಡು ಕೊಡಹೋದರೂ ತೆಗೆದುಕೊಳ್ಳುತ್ತಿರಲಿಲ್ಲ.

ತರಕಾರಿಯ ನಂತರ, ಅಕ್ಕಿಯ ವಿಷಯ ಜಮೀನ್ದಾರರು ಪ್ರಸ್ತಾಪಿಸಿದರು.

"ನಿಮಗೆ ಅಕ್ಕಿದೇನಾದರೂ ತೊಂದರೆ ಇದ್ರೆ ಹೇಳಿ ಕಳಿಸ್ತೇನೆ, ಸಂಕೋಚ ಪಡಬೇಡಿ."

"ಛೆ! ಛೆ! ಸಂಕೋಚ ಯಾತರದು? ಅಕ್ಕಿಯೂ ದಾಸ್ತಾನಿದೆ. ಬೇಕಾದ್ರೆ ಖಂಡಿತ ಬಂದು ಕೇಳ್ತೇನೆ."

ಅಷ್ಟರಲ್ಲಿ ಮನೆಯ ತಲೆಬಾಗಿಲಲ್ಲಿ ಜಮೀನ್ದಾರರ ಹುಡುಗ ಕಾಣಿಸಿಕೊಂಡು ಮಾಸ್ತರನ್ನು ನೋಡಿ ಮುಗುಳ್ನಕ್ಕ. ಆತನ ತಾಯಿಯೋ ಮಲ ತಾಯಿಯೋ ಹಿರಿಯಕ್ಕನೋ—ಅಂತೂ ಕೆಲ ಹೆಂಗಸರೂ ಹುಡುಗನ ಹಿಂದೆ ಬಾಗಿಲ ಮರೆಯಲ್ಲಿ ನಿಂತು ಮಾಸ್ತರನ್ನು ನೋಡಿದರು. ಆ ದೃಷ್ಟಿಯ ಶಾಖ ತಗಲಿದಂತೆ ಮಾಸ್ತರು ಅತ್ತಿತ್ತ ಮಿಸುಕಿದರು.

ಈ ದೃಷ್ಟಿಸಂಚಾರವನ್ನು ಗಮನಿಸಿದ ಜಮೀನ್ದಾರರು ಕರೆದರು:

"ಕರುಣಾಕರ, ಇಲ್ಲಿ ಬಾ!"

ಹುಡುಗ ಶರಟಿನೊಂದು ಕೊನೆಯನ್ನು ಕಚ್ಚುತ್ತ, ಮುದ್ದಾದ ದೊಡ್ಡ ಕಣ್ಣುಗಳನ್ನು ಹೊರಳಿಸುತ್ತ, ನಡೆದು ಬಂದು ತಂದೆಯ ಪಕ್ಕದಲ್ಲಿ ನಿಂತ.

"ಮಾಸ್ತರಿಗೆ ನಮಸ್ಕಾರ ಮಾಡಿದೆಯಾ?" ಎಂದು ನಂಬಿಯಾರರು ಕೇಳಿದರು.

ಹುಡುಗ "ನಮಸ್ಕಾರ ಸರ್" ಎಂದ.

"ನಂಬಿಯಾರರು ಅರ್ಥವಾಗದುದೇನನ್ನೋ ಗೊಣಗಿ, ಮಗನ ಶರಟಿನತ್ತ ಕೈಹಾಕಿ, ಕಚ್ಚಿಕೊಂಡಿದ್ದನ್ನು ತಪ್ಪಿಸಿ, ಶರಟನ್ನು ಬಿಡಿಸಿದರು. ಮಾಸ್ತರತ್ತ ನೋಡಿ ಅವರೆಂದರು:

"ಬಹಳ ದಿವಸದಿಂದ ನಿಮ್ಮನ್ನು ಕೇಳ್ಬೇಕೂಂತಿದ್ದೆ. ನಮ್ಮ ಕರುಣಾಕರನಿಗೆ ದಿನಾಲೂ ಸ್ವಲ್ಪ ಹೊತ್ತು ನೀವು ಹೆಚ್ಚಿಗೆ ಪಾಠ ಯಾಕೆ ಹೇಳಿಕೊಡ್ಬಾರ್ದು?"

ದಿಕ್ಕಟ್ಟಿನಲ್ಲಿ ಸಿಲುಕಿದ ಹಾಗಾಯಿತು ಮಾಸ್ತರಿಗೆ. ಈ ಹೊಸ ಭಾರವನ್ನು ಹೊತ್ತುಕೊಳ್ಳುವುದು ಅವರಿಗೆ ಏನೇನೂ ಇಷ್ಟವಿರಲಿಲ್ಲ. ಅವರು ಒಮ್ಮೆಲೆ ಉತ್ತರಕೊಡಲಾರದೆ ಹೋದರು. ಆದರೆ ನಿರುತ್ತರವಾಗಿ ಸುಮ್ಮನಿರುವುದೂ ಸಾಧ್ಯವಿರಲಿಲ್ಲ. ಕಳೆದುಹೋಗಿದ್ದ ಸ್ವರವನ್ನು ಮರಳಿ ಹುಡುಕಿ ಪಡೆಯುತ್ತ ಅವರೆಂದರು:

"ಆಗಲಿ. ಅದಕ್ಕೇನಂತೆ?"

"ಹಾಗಾದರೆ ಸಾಯಂಕಾಲದ ಹೊತ್ತು ಯಾವಾಗಲೂ ಇಲ್ಲಿಗೆ ಬರ್ತಾ ಇರಿ ಆಗದೆ?"

ಸಾಯಂಕಾಲವನ್ನೆಲ್ಲಾ ತಮ್ಮಿಂದ ಕಸಿದುಕೊಳ್ಳುವ ಯತ್ನ ಬಲು ಕ್ರೂರವಾಗಿ ಮಾಸ್ತರಿಗೆ ತೋರಿತು. ಒಪ್ಪಿಗೆ ಸೂಚಿಸದೆ ಸುಮ್ಮನಿದ್ದ ಮಾಸ್ತರನ್ನು ಜಮೀನ್ದಾರರು ಅರೆಕ್ಷಣ ಹುಬ್ಬು ಗಂಟಿಕ್ಕಿ ನೋಡಿ, ವೇಗವಾಗಿ ಮಾತನಾಡುತ್ತ ಅಂದರು:

"ನನಗೆ ಬ್ಯಾಡ್ಮಿಂಟನ್ ಅಂದರೆ ಇಷ್ಟ. ನಾನು ಹೈಸ್ಕೂಲ್ನಲ್ಲಿ ಓದ್ತಾ ಇದ್ದಾಗ ಬಹಳ ಪ್ರಸಿದ್ಧನಾಗಿದ್ದೆ. ಇಲ್ಲಿ ಯಾರೂ ಜತೆ ಇಲ್ಲದೆ ಬೇಜಾರಾಗಿತ್ತು . ಇಲ್ಲೇ ಎದುರಿಗೆ ಕೋರ್ಟು ಹಾಕಿಸ್ತೇನೆ. ನನಗೆ ಪುರುಸೊತ್ತು ಆದಾಗಲೆಲ್ಲ ಸಾಯಂಕಾಲ ಒಂದೊಂದು ಆಟವೂ ಆಡ್ಬಹುದು."

ಮಾಸ್ತರು ಉತ್ತರವಿತ್ತರು:

"ನನಗೆ ಬ್ಯಾಡ್ಮಿಂಟನ್ ಬರೋದಿಲ್ಲ."

"ಆಶ್ಚರ್ಯ! ಈಗಿನ ಕಾಲದ ನೀವೇ ಹೀಗಿರೋದು ಮಹದಾಶ್ಚರ್ಯ !"

"ಹೇಳೋದಕ್ಕೆ ನಾಚಿಕೆಯಾಗ್ತದೆ. ಪಂದ್ಯಾಟ ಅಂದರೆ ನನಗೆ ಅಷ್ಟಕ್ಕಷ್ಟೇ ."

ಜಮೀನ್ದಾರರು ನಕ್ಕರು.

"ಹಾಗಾದರೆ, ಜೋಡು ನಳಿಗೆ ಬಂದೂಕಿತ್ತಿ ನೀವು ಬೇಟೆಯಾಡೋದೆಲ್ಲ ಅಷ್ಟರಲ್ಲೇ ಇದೆ !"

ಮಾಸ್ತರು ನಗೆಯ ಉತ್ತರವಿತ್ತರು.

"ಹೋಗಲಿ, ಇಸ್ಪೀಟಾದರೂ ಆಡ್ತೀರೊ?"

"ಅದೂ ಇಲ್ಲ."

"ಹಾಗಾದರೆ ನೀವು ಪುಸ್ತಕ ಕೀಟ ಅಂತ ತೋರ್‍ತದೆ."

ಆ ಮಾತನ್ನು ತಮ್ಮ ಉಪಯೋಗಕ್ಕೆ ತಿರುಗಿಸಿಕೊಂಡು ಮಾಸ್ತರರೆಂದರು:

"ನಿಜ ಹೇಳಿದ್ರಿ. ನಾನು ಮೊದಲಿನಿಂದಲೂ ಅಷ್ಟೆ. ಪುಸ್ತಕದ ಹುಚ್ಚು. ಈಗ ಸಹ ಬಿಡುವು ಸಿಕ್ಕಿದರೆ ಸಾಕು, ಪುಸ್ತಕ ಹುಡುಕಿಕೊಂಡು ನೀಲೇಶ್ವರಕ್ಕೋ ಹೊಸದುರ್ಗಕ್ಕೋ ಓಡ್ತಿರ್ತೇನೆ."

ಈ ಓಡಾಟದ ಗೂಢಾರ್ಥವನ್ನು ತಿಳಿಯದ ಜಮೀನ್ದಾರರು ನಕ್ಕು ತಲೆ ಅಲ್ಲಾಡಿಸಿ ಅಂದರು:

"ಈ ಪುಸ್ತಕದ ವಿಷಯ ನನಗೆ ಎಣ್ಣೆ ಸೀಗೆ ಇದ್ದ ಹಾಗೆ !"

ಆಳು ಚಹ ತಂದ. ಚೀನೀ ಪಿಂಗಾಣಿಯ ಕಪ್ ಮತ್ತು ಸಾಸರು ಹಳ್ಳಿಯ ಬಡ

ಹೋಟಲಿನ ಗಾಜಿನ ಲೋಟವಲ್ಲ.

"ಒಳಗೆ ಓಡು" ಎಂದು ನಂಬಿಯಾರರು ಮಗನಿಗೆ ಅಜ್ಞೆ ಇತ್ತರು. ಮಾಸ್ತರರ ದೃಷ್ಟಿ ಓಡುತ್ತಿದ್ದ ಹುಡುಗನನ್ನು ಹಿಂಬಾಲಿಸಿತು. ಬಾಗಿಲ ಬಳಿ ಈಗ ಹೆಂಗಸರಿರಲಿಲ್ಲ.

ಒಂದು ಸಿಗರೇಟು ಹಚ್ಚಿ ಜಮೀನ್ದಾರರು ಚಹಾವನ್ನೆತ್ತಿಕೊಂಡು "ತಗೊಳ್ಳಿ" ಎಂದು ಮಾಸ್ತರಿಗೆ ಹೇಳಿದರು.

ಕಪ್ಪಿನಷ್ಟೇ ಸೊಗಸಾಗಿತ್ತು ಪಾನೀಯ ಕೂಡಾ. ಶ್ರೀಮಂತ ಚಹ ಮತ್ತೇರುವಷ್ಟು ರುಚಿಕರ.

ಒಂದು ಗುಟುಕನ್ನು ಹೀರಿದ ಬಳಿಕ ಜಮೀನ್ದಾರರೆಂದರು:

"ಕರುಣಾಕರನಿಗೆ ಮುಂದೆ ಕಾಲೇಜು ಓದಿಸ್ಬೇಕೂಂತ ನಿರ್ಧಾರ ಮಾಡಿದ್ದೇನೆ. ಮಾವನ ಕಡೆಯಿಂದ ಅವನಿಗೆ ಆಸ್ತಿಯೂ ಬರ್ತದೆ. ವಕೀಲನಾಗಿ ಆತ ರಾಜಕೀಯಕ್ಕೆ ಇಳೀಬೇಕೂಂತ ನನ್ನ ಅಪೇಕ್ಷೆ."

ಚಹ ಕುಡಿಯುತ್ತ ಮಾಸ್ತರು ತನ್ನ ಬಡ ವಿದ್ಯಾರ್ಥಿಗಳನ್ನು ಸ್ಮರಿಸಿಕೊಂಡರು. ಜಮೀನ್ದಾರರ ಮಗನಷ್ಟೇ ಅಂತಸ್ತು ಇದ್ದ ಬೇರೆ ಇಬ್ಬರು ಹುಡುಗರೆಂದರೆ ನಂಬೂದಿರಿಯ ಮಕ್ಕಳು—ತಾವು ಮಡಿ ಬ್ರಾಹ್ಮಣರೆಂದು ಯಾವಾಗಲೂ ಪ್ರತ್ಯೇಕವಾಗಿಯೇ ಕುಳಿತು, ಮನೆಗೆ ಹೋದೊಡನೆ ಸ್ನಾನ ಮಾಡಿ ಮೈಲಿಗೆ ಕಳೆಯುತ್ತಿದ್ದ ಎಳೆಯರು. ನಂಬಿಯಾರರ ಹಾಗೆಯೇ ಮಕ್ಕಳಿಗೆ ಕಾಲೇಜು ವಿದ್ಯಾಭ್ಯಾಸ ಕೊಡಿಸುವ ಮಾತನ್ನಾಡುವ ಸಾಮರ್ಥ್ಯ ಆ ಹಳ್ಳಿಯಲ್ಲಿ ಬೇರೆಯೂ ಒಬ್ಬ ವ್ಯಕ್ತಿಗಿದ್ದುದೆಂದರೆ ನಂಬೂದಿರಿಗೆ ಮಾತ್ರ. ಇತರರು ಯಾರೂ ಅಂಥ ಕನಸನ್ನು ಕೂಡ ಕಾಣುವ ಸ್ಥಿತಿಯಲ್ಲಿರಲಿಲ್ಲ.

ಚಹ ಕುಡಿದು ಮುಗಿಸಿದ ಮಾಸ್ತರೊಡನೆ ಜಮೀನ್ದಾರರು ರಾಜಕೀಯದ ಮಾತೆತ್ತಿದರು:

"ಗ್ರಾಮಗಳಲ್ಲಿ ಈಗ ಕೆಲವು ಕಡೆ ಪಂಚಾಯಿತಿ ಅಂತ ಮಾಡ್ತಾರಲ್ಲ, ಅದರ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು?"

ಮಾಸ್ತರು ತಂತಿಯ ಮೇಲಿನ ಕಸರತ್ತಿಗೆ ಆರಂಭ ಮಾಡಿದರು:

"ಗ್ರಾಮಪಂಚಾಯಿತಿಯಿಂದ ಒಳ್ಳೆದೂ ಆಗ್ಬಹುದು; ಕೆಟ್ಟದ್ದೂ ಆಗಬಹುದು ಕೆಟ್ಟವರ ಕೈಗೆ ಅಧಿಕಾರ ಸಿಕ್ಕಿದ್ರೆ...."

ತೊಡೆ ತಟ್ಟಿ, ಮಾಸ್ತರ ಮಾತು ತಡೆದು, "ಅದೇ ನಾನೂ ಹೇಳೋದು!" ಎಂದು ನಂಬಿಯಾರರು ಉದ್ಗರಿಸಿದರು.

ಮಾಸ್ತರಿಗೆ ಒಂದು ಕ್ಷಣ ಏನೂ ಅರ್ಥವಾಗಲಿಲ್ಲ. ಅರೆತೆರೆದ ಬಾಯಿಯನ್ನು ಅವರು ಮುಚ್ಚಲಾರದೆ ಹೋದರು. ಮಾತನಾಡಲಾರದ ಅವರ ನೆರವಿಗೆ ಬಂದು ನಂಬಿಯಾರರೆ ಅಂದರು:

"ಈ ಸಣ್ಣಪುಟ್ಟ ರೈತರಲ್ಲಿ ಕೆಲವರು ತಲೆತಿರುಕರಿದ್ದಾರೆ. ಎಲ್ಲಿಯಾದರು ಅವರು ಗ್ರಾಮ ಪಂಚಾಯಿತಿಗೆ ಆರಿಸಿ ಬಂದರೂಂತಿಟ್ಕೊಳ್ಳಿ, ಅದೇನೋ ಗಾದೆ ಇದೆಯಲ್ಲ—ಹಾಗೆ ಅರ್ಧ ರಾತ್ರೀಲಿ ಕೊಡೆ ಹಿಡಿಸ್ಕೊಂಡು ಮೆರವಣಿಗೆ ಹೋದರು ಹೋದರೇ! ಇನ್ನು ಹಳ್ಳಿಯ ಸ್ಥಿತಿಗತಿಯೊ—ರಾಮ, ರಾಮ !"

ಮಾಸ್ತರ ಗಂಟಲಲ್ಲಿ ಮತ್ತೆ ಉಗುಳು ಸಿಲುಕಿಕೊಂಡಿತು. ಮಾತು ಅಸಹನೀಯ ವೇದನೆಯಿಂದ ಹೊಟ್ಟೆಯೊಳಗೇ ಹೊರಳಾಡಿತು. ತಾವು ಚಿತ್ರಿಸಿದ ಭೀತಿಯೆಲ್ಲ ಬರಿಯ ಭ್ರಮೆ ಎನ್ನುವಂತೆ ಜಮೀನ್ದಾರರು ಮಾತು ಮುಂದುವರಿಸಿದರು:

"ತ್ರಿಕರಪುರದಲ್ಲಿ ಹಾಗೆ ಆಗಲ್ಲಾಂತಿಟ್ಕೊಳ್ಳಿ. ಆದರೂ ಈ ಗ್ರಾಮ ಪಂಚಾಯಿ ಅಗತ್ಯವೇ—ಅಂತ ನನ್ನ ಪ್ರಶ್ನೆ. ಈಗ ನಮ್ಮ ಹಳ್ಳೀನೇ ತಗೊಳ್ಳಿ. ಇದಕ್ಕೇ ಏನಾಗಿದೆ?"

ಮಾಸ್ತರು ಗಟ್ಟಿಯಾಗಿ ನಕ್ಕರು. ಆ ನಗು ಅರ್ಥವಾಗದೆ ನಂಬಿಯಾರರು ಮಾಸ್ತರನ್ನೇ ದುರುದುರನೆ ನೋಡಿದರು. ತಮ್ಮ ಮಾತಿಗೆ ಮೆಚ್ಚಿ ಆತ ನಕ್ಕಿರಬಹುದೆಂದು ಊಹಿಸಿಕೊಂಡು ತಾವೂ ಹಲ್ಲು ಕಿಸಿದರು. ಗ್ರಾಮ ಪಂಚಾಯಿತಿ ವ್ಯರ್ಥವೆಂಬುದೇ ಅವರ ಅಭಿಪ್ರಾಯವಾಗಿದ್ದರೂ ಹಳೆಯ ಕಾಲದವನಾಗಿರಲು ಇಚ್ಛಿಸದೆ ಅವರೆಂದರು:

"ಆದರೂ ನಾಗರಿಕತೆಯ ಈ ಕಾಲದಲ್ಲಿ ಗ್ರಾಮಪಂಚಾಯಿತಿ ಇರೋದು ಭೂಷಣವೆಂದಾದರೆ ನನ್ನ ವಿರೋಧವಿಲ್ಲ. ಮುಂದೆ ಅಗತ್ಯವಾಗಿ ಮಾಡೋಣ ಇದು ನೂರರ ಜತೇಲಿ ನೂರೊಂದನೆಯ ಕೆಲಸ ಇದ್ದಹಾಗೆ. ಆದರೆ ಅದನ್ನು ಹತೋಟೀಲಿ ಇಟ್ಕೊಂಡು ನಡೆಸ್ಬೇಕು. ಅಷ್ಟೆ!"

ಮಾಸ್ತರು ಮತ್ತೊಮ್ಮೆ ಯಾವ ಅರ್ಥವೂ ಇಲ್ಲದೆ ನಕ್ಕರು.

ಅಷ್ಟರಲ್ಲೇ ಆಳೊಬ್ಬ ಬಂದು ವಿನೀತನಾಗಿ ಬಾಗಿ ಹೇಳಿದ:

"ಕೆಳಗಿನ ಮೂಲೆಯ ಇಬ್ಬರು ರೈತರು ಬಂದಿದ್ದಾರೆ, ಒಡೆಯ."

ನಂಬಿಯಾರರು ಹುಬ್ಬು ಗಂಟಿಕ್ಕಿದರು:

"ಯಾರೊ?"

"ಕೆಳಗಿನ ಮೂಲೆಯೋರು. ಬರಹೇಳಿದ್ರಿ. ನೀರು ಬಿಡೋ ವಿಷಯದಲ್ಲಿ.

"ಓ ಅವರಾ ?"

ಒಂದು ನಿಮಿಷ ಸುಮ್ಮನಿದ್ದು ನಂಬಿಯಾರರು ಆಜ್ಞೆ ಇತ್ತರು:

"ಇವತ್ತು ಪುರಸೊತ್ತಿಲ್ಲ, ನಾಳೆ ಬರಬೇಕೂಂತ ಹೇಳು."

"ಹೂಂ ಒಡೆಯ. ಎಷ್ಟೊತ್ತಿಗೆ ಬರೋದಕ್ಕೆ ಹೇಳ್ಲಿ?"

ಜಮೀನ್ದಾರರು ಸ್ವರವೇರಿಸಿದರು:

"ನಾಯಿ ಮಗನ! ಅದೇನೋ ಹಾಗಂದರೆ? ಎಷ್ಟೊತ್ತಿಗೆ—ಅಂತೆ. ಭೇಟಿಗೆ ಸಮಯ ಗೊತ್ತುಮಾಡೋದಕ್ಕೆ ಅವರು ಮಹಾರಾಜರೇನೋ ಹೋಗು.... ಬೆಳಿಗ್ಗೆನೇ ಬಂದು ಇಲ್ಲಿ ಕಾದಿರ್ಬೇಕೂಂತ ಹೇಳು!"

ಆಳು ಬಾಗಿಬಾಗಿ ಹೊರಟುಹೋದ. ನಂಬಿಯಾರರು ಠೀವಿಯಿಂದ ಮಾಸ್ತರತ್ತ ತಿರುಗಿ ಸ್ವರ ಬದಲಾಯಿಸಿ ಹೇಳಿದರು:

"ಸೂಳೇ ಮಕ್ಕಳು ಜಗಳಾಡ್ತಾರೆ: ಆಮೇಲೆ ರಾಜಿ ಮಾಡಿಸ್ಕೊಡೀಂತ ಇಲ್ಲಿಗೆ ಬರ್ತಾರೆ."

ಆಳನ್ನು ಉದ್ದೇಶಿಸಿ ಮಾತನಾಡಿದ ಧ್ವನಿಗಿಂತ ಆತ್ಮಪ್ರಶಂಸೆಯ ಈ ಸ್ವರ ಭಿನ್ನವಾಗಿತ್ತು. 'ಒಬ್ಬೊಬ್ಬರಿಗೊಲ್ಸ್ಕರ ಒಂದೊಂದು ರೀತಿ ಗಂಟಲು' ಎಂದುಕೊಂಡರು ಮಾಸ್ತರು. ಮುಂದಕ್ಕೆ ಇನ್ನೂ ರಾಗವಾಗಿ ನಂಬಿಯಾರರೆಂದರು:

"ಜಮೀನ್ದಾರ ರೈತರಿಗೆಲ್ಲ ತಂದೆ ಇದ್ದಹಾಗೆ. ಜಗಳ ಆಡಿಕೊಂಡು ಇಲ್ಲಿಗೆ ಅಲ್ಲದೆ ಬೇರೆಲ್ಲಿಗೆ ಬರಬೇಕು ಹೇಳಿ?....."

....ಸಂದರ್ಶನವನ್ನು ಇನ್ನೂ ಉದ್ದ ಬೆಳೆಸುವುದರಲ್ಲಿ ಅರ್ಥವಿಲ್ಲವೆಂದು, ಮಾಸ್ತರು ಹೊರಡಲು ಸನ್ನದ್ಧರಾಗಿ ಅತ್ತಿತ್ತ ನೋಡಿದರು. ಮಾಸ್ತರ ಇಂಗಿತವನ್ನು ನಂಬಿಯಾರರು ಊಹಿಸದಿರಲಿಲ್ಲ. ಅವರು ಆಳನ್ನು ಕರೆದರು:

"ಏ ಇವನೇ, ಬಾ ಇಲ್ಲಿ!"

ಆಳು ಬಂದಾಗ ಅವರು ಆದೇಶವಿತ್ತರು:

"ಎರಡು ದೊಡ್ಡ ಪಪ್ಪಾಯಿಹಣ್ಣು ತಗೊಂಡು ಮಾಸ್ತರ ಜತೇಲಿ ಹೋಗು."

ಆದರೆ ಮಾಸ್ತರಿಗೆ ಮಾತುಕತೆಯಿಂದಲೇ ಹೊಟ್ಟೆ ತುಂಬಿತ್ತು. ಪಪ್ಪಾಯಿ ಹಣ್ಣುಗಳು ಅವಶ್ಯವೆನ್ನಿಸಲಿಲ್ಲ. ಉಡುಗೊರೆ ಇಲ್ಲದೆ, ಬಂದ ಹಾಗೆಯೇ ಹಿಂತಿರುಗಲು ಅವರು ಯತ್ನಿಸಿದರು:

"ಬೇಡಿ. ಸುಮ್ಮನೆ ಯಾಕೆ? ದಯವಿಟ್ಟು ಬೇಡಿ."

ನಂಬಿಯಾರರು ಎದ್ದುನಿಂತು, 'ಸುಮ್ಮನಿರಿ' ಎನ್ನುವಂತೆ ಆತ್ಮೀಯತೆಯಿಂದ ಕೈಬೀಸಿ "ತಗೊಂಡು ಬಾರೋ. ಚೆನ್ನಾಗಿರೋದು ನೋಡಿ ಆರಿಸಿ ತಾ" ಎಂದರು.

ಹೊರಕ್ಕೆ ಹೊರಟ ಮಾಸ್ತರು ಒಳಬಾಗಿಲಿನತ್ತ ಒಮ್ಮೆ ದೃಷ್ಟಿಬೀರಿದರು. ಅಲ್ಲಿ

ಹೆಂಗಸರಿರಲಿಲ್ಲ; ಆದರೆ ಕರುಣಾಕರ ನಿಂತಿದ್ದ. ಆ ಹುಡುಗನಿಗೆ ಪಾಠ ಹೇಳಿ ಕೊಡಲು ಒಪ್ಪಿದುದು ನೆನಪಾಗಿ, ಮಾಸ್ತರ ಹೃದಯ ಭಾರವಾಯಿತು. ಜಮೀನ್ದಾರರು ಮಗನನ್ನು ನೋಡದೆ ಇದ್ದರೂ ಮಾಸ್ತರೊಡನೆ ಹೊರಬರುತ್ತ ಹೇಳಿದರು:

"ಅಂದ ಹಾಗೆ—ಕರುಣಾಕರನಿಗೆ ಪಾಠ ಹೇಳೋ ವಿಚಾರ, ನಾಳೆ ಸಂಜೆಯಿಂದ ಬರ್‍ತೀರೇನು?"

ಮಾಸ್ತರ ಮೆದುಳು ಒಂದು ನಿಮಿಷ ತೀವ್ರಗತಿಯಿಂದ ಚಲಿಸಿತು.

"ಶಾಲೆಯ ಪಾಠಗಳೆಲ್ಲ ಆದಮೇಲೆ ಹುಡುಗರಿಗೆ ಸಾಮಾನ್ಯವಾಗಿ ಆಯಾಸವಾಗ್ತದೆ. ಅಲ್ಲದೆ ಅದು ಆಟ ಆಡೋ ಹೊತ್ತು. ಬೆಳಗ್ಗೆ ಪಾಠ ಇಟ್ಕೊಳ್ಳೋದು ಮೇಲು. ಅದರಿಂದ ಪ್ರಯೋಜನ ಜಾಸ್ತಿ."

ನಂಬಿಯಾರರು "ಹಾಗೇ ಆಗಲಿ" ಎಂದರು. ಆದರೆ ಆ ಕ್ಷಣವೇ, ಸಂಜೆ ರೈತರಿಗೆ ಪತ್ರಿಕೆ ಓದಿ ಹೇಳಲು ತೊಂದರೆಯಾಗಬಾರದೆಂದು ಈ ಉಪಾಧ್ಯಾಯ ಆ ರೀತಿ ಹೇಳಿದನೇನೋ ಎಂಬ ಸಂದೇಹ ಅವರಲ್ಲಿ ತಲೆದೋರಿತು. ಅಂತಹ ಓದಿಗೆ ಅಸ್ಪದವಿರಬಾರದೆಂದು ದೃಢವಾದ ಧ್ವನಿಯಲ್ಲಿ ಅವರೆಂದರು:

" ಆದರೆ ರೈತರನ್ನು ಮಾತ್ರ ಸಾಯಂಕಾಲದ ಹೊತ್ತು ಶಾಲೆ ಜಗಲಿ ಸೇರಿಸ್ಬೇಡಿ. ನಿಮಗೆ ಒಬ್ಬರೇ ಇದ್ದು ಬೇಸರವಾದ್ರೆ ಇಲ್ಲಿಗೆ ಬನ್ನಿ. ಆಟವಿಲ್ಲದೆ ಹೋದ್ರೆ ಹರಟೆಯಾದರೂ ಹೊಡೆಯೋಣ. ಬೇಕಾದರೆ ನಮ್ಮನೇ ಪೇಪರೇ ನೀವು ಉಪಯೋಗಿಸ್ಬಹುದು. ಪ್ರತ್ಯೇಕ ತರಿಸಬೇಕೂಂತ್಴ೇ ಇಲ್ಲ."

ಉತ್ತರವಾಗಿ, ನೋವಿನ ಹಲವು ಪದರಗಳ ಆಳದಿಂದ, 'ಹೂಂ' ಎಂಬ ಧ್ವನಿ ಬಂತು.

"ಬರ್‍ತೇನೆ, ನಮಸ್ಕಾರ" ಎಂದು ಹೇಳಿ, ಮಾಸ್ತರು ನಡೆದರು. ಜಮೀನ್ದಾರರು ಉತ್ತರವಾಗಿ ತಲೆಯಾಡಿಸಿ ಮೌನ ನಮಸ್ಕಾರವಿತ್ತರು. ಅವರ ಆಳು, ದೊಡ್ಡ ಎರಡು ಪಪ್ಪಾಯಿ ಹಣ್ಣುಗಳನ್ನು ಬಾಳೆಯ ಹಗ್ಗದಲ್ಲಿ ಕಟ್ಟಿ ತಲೆಯ ಮೇಲಿರಿಸಿಕೊಂಡು, ಮಾಸ್ತರನ್ನು ಹಿಂಬಾಲಿಸಿದ.

ಮಾಸ್ತರಿಗೆ ಬೇಸರವಾಗಿತ್ತು. ಹಿಂದಿಹೋಗಿದ್ದ ಪತ್ರಿಕೆಯನ್ನು ಕಂಕುಳಲ್ಲಿ ಇರಿಸಿ, ಉಟ್ಟಿದ್ದ ಅಡ್ಡಪಂಚೆಯನ್ನು ಅರ್ಧಕ್ಕೆ ಎತ್ತಿ ಕಟ್ಟಿ, ಅವರು ಮಾತಿಲ್ಲದೆ ಹಾದಿ ನಡೆದರು.

ಕತ್ತಲಾಗಲು ಇನ್ನೂ ಸ್ವಲ್ಪ ಹೊತ್ತಿತ್ತು. ರೈತರು ಕಾದು ನಿರಾಶರಾಗಿ ಹೊರಟು ಹೋಗಿದ್ದರೂ ಇರಬಹುದೆಂದು ಮಾಸ್ತರು ಅಂದುಕೊಂಡರು. ಸಮಾಜದ

ವರ್ಗಶಕ್ತಿಯಾದ ನಂಬಿಯಾರರೆದುರಲ್ಲಿ ತಾನು ಬಡ ಮಾನವ ಪ್ರಾಣಿಯಾಗಿ ಇರಬೇಕಾಯಿತಲ್ಲ, ಯಾವ ಮಾತನ್ನೂ ನೇರವಾಗಿ ಆಡಲು ತನ್ನಿಂದ ಆಗಲಿಲ್ಲವಲ್ಲ ಎಂದು ಕೆಡುಕೆನಿಸಿತು....

ಅವರು ಊಹಿಸಿದ್ದಂತೆಯೇ ಶಾಲೆಯ ಜಗಲಿಯಲ್ಲಿ ರೈತರು ಯಾರೂ ಇರಲಿಲ್ಲ. ಆದರೆ ದಿನವೂ ಸಂಜೆ ಬರುತ್ತಿದ್ದ ಅಪ್ಪು ಮತ್ತು ಚಿರುಕಂಡ ಜಗಲಿಯ ಆವರಣದ ಅಡ್ಡಗೋಡೆಯ ಮೇಲೆ ಕುಳಿತಿದ್ದರು. ಮಾಸ್ತರನ್ನು ಕಂಡೊಡನೆ ಅವರು ಎದ್ದು ನಿಂತರು. ಮಾಸ್ತರ ಪಾಲಿಗೆ ಈ ಶಿಷ್ಯರ ದರ್ಶನ ಹಿತಕರವಾಯಿತು. ಆದರೆ, ಪಪ್ಪಾಯಿಹಣ್ಣುಗಳನ್ನು ಹೊತ್ತುತರುತ್ತಿದ್ದ ಜಮೀನ್ದಾರರ ಆಳನ್ನು ಕಂಡು ಹುಡುಗರು ಸುಮ್ಮನಾದರು. ಆತನನ್ನು ಬೇಗನೆ ಕಳುಹಿಸಿಬಿಡಬೇಕೆಂದು ಮಾಸ್ತರೆಂದರು:

"ಜಗಲೀಲೇ ಇಡು."

ಆತ ಕೆಳಕ್ಕಿರಿಸಿ, "ಹೊರಡ್ತೇನೆ" ಎಂದು ಕೈ ಜೋಡಿಸಿದ ; ಮಾಸ್ತರು "ಹೂಂ" ಎಂದೊಡನೆ ಹೊರಟುಹೋದ.

ಶಾಲೆಯ ಬಾಗಿಲಿಗೆ ಹಾಕಿದ್ದ ಪುಟ್ಟ ಬೀಗವನ್ನು ತೆರೆದೊಡನೆ ಅಪ್ಪು ಮಾಸ್ತರ ಮುರುಕು ಕುರ್ಚಿಯನ್ನು ತಂದು ಹೊರಕ್ಕಿರಿಸಿದ. ಮಾಸ್ತರು ದಿನಪತ್ರಿಕೆಯನ್ನು ಚಿರುಕಂಡನಿಗೆ ಕೊಟ್ಟು, ಕುರ್ಚಿಯ ಮೇಲೆ ಕುಳಿತರು.

ಪತ್ರಿಕೆಯಲ್ಲಿರುವುದಕ್ಕಿಂತಲೂ ವಿಶೇಷ ವಾರ್ತೆ ಬೇರೆ ಇದೆಯೆಂದು ಊಹಿಸಿದ ಚಿರುಕಂಡ. ಮಾಸ್ತರತ್ತ ನೋಡಿ ಕೇಳಿದ:

"ಜಮೀನ್ದಾರರ ಮನೆಗೆ ಹೋಗಿದ್ದಿರಾ ಸರ್?"

"ಹೂಂ ಕಣೊ."

"ಏನು ಸರ್ ವಿಶೇಷ?"

"ಇವತ್ತಿನಿಂದ ಇಲ್ಲಿ ಪತ್ರಿಕೆ ಓದಿ ಹೇಳೋದು ಬಂದ್!"

"ಆಹಾ!" ಎಂದು ಕಣ್ಣರಳಿಸಿ ಅಪ್ಪು ಉದ್ಗಾರವೆತ್ತಿ, ಪಪ್ಪಾಯಿ ಹಣ್ಣುಗಳ ಬಳಿ ಹೋಗಿ ಕುಳಿತ.

ಚಿರುಕಂಡ ಸ್ವರ ತಗ್ಗಿಸಿ ಹೇಳಿದ:

"ಅವರಿಗೆ ನಿಮ್ಮ ಮೇಲೆ ಸಂಶಯ ಬಂದಿರ್‍ಬಾದೆ ಸರ್?"

"ಇರಲಾರ್ದು" ಎಂದು ಮಾಸ್ತರು ಬೀಡಿ ಹಚ್ಚಿ ಸೇದುತ್ತ, ಸಾವಧಾನವಾಗಿ— ಆದರೆ ಚುಟುಕಾಗಿ—ಜಮೀನ್ದಾರರ ಮನೆಯಲ್ಲಿ ನಡೆದ ಸಂವಾದದ ಮುಖ್ಯ ವಿಷಯ ಹೇಳಿದರು.

"ಇನ್ನು ಆ ಅರಸು ಕುಮಾರನಿಗೆ ಹೆಚ್ಚಿನ ಪಾಠ ಬೇರೆ ಹೇಳಿಕೊಡಬೇಕೇನು? ಸರಿ! ಸರಿ!"

ಎಂದ ಚಿರುಕಂಡ.

ಆದರೆ ಮಾಸ್ತರು ಶಾಂತವಾಗಿದ್ದರು.

"ಆಗೋದಿಲ್ಲಾಂತ ಹೇಳೋದಕ್ಕಾಗ್ತದ ಅಪ್ಪು? ವಿಶ್ವಸ್ಥ ಸಮಿತಿ ಅನ್ನೋದೆಲ್ಲ ಹೆಸರಿಗೆ. ನಂಬಿಯಾರರಿಗೆ ಬೇಡ ಅನಿಸಿದ್ರೆ ನನ್ನನ್ನು ಕೆಲಸದಿಂದ ತೆಗೆದು ಹಾಕಲೂಬಹುದು."

ಹುಡುಗರು ಮಾತನಾಡಲಿಲ್ಲ.

ಚಿರುಕಂಡ ವರ ಕೇಳುವವನಂತೆ ಹೇಳಿದ:

"ನೀವು ದಿನಾ ಅಲ್ಲಿಗೆ ಹೋಗ್ಬೇಡಿ ಸರ್. ಬೆಳಗ್ಗೆ ಬೆಲ್ಗೆ ಇಲ್ಲಿಗೇ ಒಂದು ಬಿಡೂಂತ ಹೇಳಿ."

ಮಾಸ್ತರು ಮುಗುಳುನಕ್ಕರು. ಸ್ವಲ್ಪ ದಿನ ಹೋಗುತ್ತಿದ್ದು ಕ್ರಮೇಣ ಆ ಹುಡುಗನನ್ನು ಶಾಲೆಗೇ ಬೇಗನೆ ಕರೆಸಬೇಕೆಂಬುದು ಅವರ ಯೋಚನೆಯೂ ಆಗಿತ್ತು.

ಜಮೀನ್ದಾರರ ಮನೆಯಲ್ಲಿ ನಡೆದ ಮಾತುಕತೆಯಲ್ಲಿ ಅತ್ಯಂತ ಸ್ವಾರಸ್ಯಕರವಾಗಿದ್ದ ಅಂಶ ಗ್ರಾಮ ಪಂಚಾಯಿತಿಗೆ ಸಂಬಂಧಿಸಿದ್ದು. ಅದರ ವಿವರವನ್ನು ಹೇಳಿ ಮಾಸ್ತರೂ ನಕ್ಕರು ; ಕೇಳಿ ಹುಡುಗರೂ ನಕ್ಕರು.

ಅಪ್ಪು ಉತ್ಸಾಹಗೊಂಡು ಹೇಳಿದ :

"ಕಯ್ಯೂರಿಗೆ ಬೇಗ್ನೆ ಗ್ರಾಮ ಪಂಚಾಯಿತಿ ಬರೋಹಾಗೆ ಮಾಡ್ಬೇಕು ಸರ್."

"ಅದಕ್ಕಿನ್ನೂ ರೈತರು ಸಿದ್ಧವಾಗ್ಬೇಕು."

"ಆಮೇಲೆ ಶಾಲೇನ ಪಂಚಾಯಿತಿಯವರೇ ನಡೆಸ್ಬಹುದು, ಅಲ್ವ?"

"ಹೌದು. ಆದರೆ ಅವರೆಲ್ಲ ಅಷ್ಟು ಸುಲಭವಾಗಿ ಕೆಟ್ಟವರ ಕೈಗೆ ಅಧಿಕಾರ ಕೊಡ್ತಾರಾ?"

ನಂಬಿಯಾರರ ಕೈಯಿಂದ ರೈತರು ಅಧಿಕಾರ ಪಡೆಯುವುದು ಸುಲಭವಲ್ಲ ಎಂದು ಅಪ್ಪುವಿಗೆ ಚೆನ್ನಾಗಿ ಗೊತ್ತಿತ್ತು. ಆತನೆಂದ:

"ಹೂಂ. ಗ್ರಾಮ ಪಂಚಾಯಿತಿಯಿಂದೇನೂ ಪ್ರಯೋಜನವಿಲ್ಲ. ಹೋರಾಟವೇ ಸರಿಯಾದ ಹಾದಿ."

ಅಪ್ಪುವಿನ ಮಾತಿನ ಸರಣಿಯನ್ನು ತಿದ್ದುವವನಂತೆ ಚಿರುಕಂಡ ಹೇಳಿದ:

"ಕೊನೇದಾಗಿ ಹೋರಾಟ ಆಗಿಯೇ ಆಗ್ತದೆ. ಆದರೆ ಗ್ರಾಮಪಂಚಾಯಿತಿ

ಜನಜಾಗೃತಿಗೆ ಸಹಾಯಕ. ಅಲ್ವ ಸರ್?"

ಮಾಸ್ತರು 'ಹೌದು' ಎಂದು ತಲೆದೂಗಿದರು. ಅದು ಹೇಗೆ ಎಂಬುದು ಅಪ್ಪುವಿಗೆ ಸ್ಪಷ್ಟವಾಗಲಿಲ್ಲ. ಮಾಸ್ತರು ವಿವರಿಸಿದರು:

"ಗ್ರಾಮ ಪಂಚಾಯಿತಿ ಮಾಡಿದ ಮೇಲೂ ಜಮೀನ್ದಾರರದೇ ಅಧಿಕಾರವಾದಾಗ, ಈ ಪಂಚಾಯಿತಿಯಿಂದೇನೂ ಪ್ರಯೋಜನವಿಲ್ಲಾಂತ ಜನರಿಗೆ ಗೊತ್ತಾಗ್ತದೆ ನೋಡು. ಅನುಭವದಿಂದಲೇ ವಿಷಯ ಅವರಿಗೆ ಮನದಟ್ಟಾಗುತ್ತದೆ."

ಈಗ ಅಪ್ಪುವಿಗೆ ಅರ್ಥವಾಯಿತು.

ಪಪ್ಪಾಯಿ ಹಣ್ಣುಗಳ ಮೇಲೆ ಅಪ್ಪು ಕೈ ಆಡಿಸುತ್ತಿದ್ದುದನ್ನು ಕಂಡು ಚಿರುಕಂಡ ಹೇಳಿದ:

"ಚೆನ್ನಾಗಿರೋ ಹಣ್ಣೇ ಕೊಟ್ಟಿದ್ದಾರೆ."

"ಏನು ಚೆನ್ನಾಗಿದೆಯೋ!" ಎಂದು ಅಪ್ಪು ಅವುಗಳನ್ನು ಸ್ವಲ್ಪ ಬದಿಗೆ ತಳ್ಳಿದ.

"ತಿನ್ನೋಣವೇನು?" ಎಂದು ಹುಡುಗರನ್ನು ನೋಡುತ್ತ ಮಾಸ್ತರೆಂದರು. ಎಳೆಯರ ಮನಸ್ಸಿನಲ್ಲಿರಬಹುದಾದ ಆಕ್ಷೇಪವನ್ನು ಊಹಿಸುತ್ತ ಅವರು ಹೇಳಿದರು: "ಜಮೀನ್ದಾರರ ಮನೇದೂಂತ ಯೋಚಿಸ್ಬೇಡಿ. ಯಾವನೋ ರೈತ ಬೆಳೆಸಿದ್ದು. ನಾವೇ ನ್ಯಾಯವಾದ ಹಕ್ಕುದಾರರು. ಅಲ್ವ ಅಪ್ಪು? ಒಳಗಿನಿಂದ ಚಾಕು ತಂದು ಒಂದನ್ನಾದರೂ ಕುಯ್ದುಬಿಡು."

ಅಪ್ಪು ನಗುತ್ತ, ಒಪ್ಪಿದ. ಹಳೆಯದೊಂದು ಪತ್ರಿಕೆಯನ್ನು ತಂದು ಹಾಸಿ ಒಂದು ಹಣ್ಣನ್ನು ಅದರ ಮೇಲಿಟ್ಟು, ಕತ್ತರಿಸಿದ.

ಹುಡುಗರ ಜತೆಯಲ್ಲಿ ಹಣ್ಣಿನ ತುಂಡುಗಳನ್ನು ತಿನ್ನುತ್ತಿದ್ದಂತೆ, ನಂಬಿಯಾರರೊಡನೆ ನಡೆಸಿದ ಮಾತುಕತೆಯ ಒಂದಂಶ ನೆನಪಾಗಿ, ಅದನ್ನು ವಿವರಿಸುತ್ತ, ಮಾಸ್ತರೆಂದರು:

"ನಂಬಿಯಾರರು ಹೇಳಿದ್ದು—ಜಮೀನ್ದಾರ ತಂದೆ ಇದ್ದಹಾಗೆ; ರೈತರು ಮಕ್ಕಳಿದ್ದ ಹಾಗೆ—ಅಂತ ! ಅರ್ಥವಾಯಿತೇನ್ರೋ?"

"ಓಹೋ" ಎಂದು ಅಪ್ಪು ರಾಗವೆಳೆದ.

ಸ್ವಲ್ಪವೇ ಕಾಲದ ಹಿಂದೆ ತಮ್ಮ ಜಮೀನನ್ನು ಆ ತಂದೆಗೆ ಕಾಣಿಕೆಯಾಗಿ ಕೊಟ್ಟಿದ್ದ ಚಿರುಕಂಡ ನೋವಿನ ನಗೆ ನಕ್ಕ.

ಹಣ್ಣು ತಿಂದಾದಮೇಲೆ ಮೂವರೂ ಶಾಲೆಯ ಅಂಗಳಕ್ಕಿಳಿದು ನಿಂತರು. ಹಿತ್ತಿಲ ಎಡಬಲಗಳಲ್ಲಿ ನೆಟ್ಟಿದ್ದ ಮಾವಿನ ಗಿಡಗಳೆರಡು ಚಿಗುರಿಕೊಂಡು ಮೇಲೇಳುತ್ತಿದ್ದುವು. ಮಾಸ್ತರು ಪ್ರೀತಿಯಿಂದ ಆ ಎಲೆಗಳನ್ನು ಮುಟ್ಟಿ ನೋಡಿದರು.

ಪತ್ರಿಕೆಯತ್ತ ದೃಷ್ಟಿ ಹರಿಸುತ್ತಿದ್ದ ಚಿರುಕಂಡ ಕೇಳಿದ:

"ಹಾಗಾದರೆ ಇನ್ನು ಪತ್ರಿಕೆ ಓದಿಹೇಳೋದಕ್ಕೆ ಏನು ಮಾಡೋಣ ಸರ್?"

ಮಾಸ್ತರು ಉತ್ತರವಿತ್ತರು:

"ತಾಳು ಏನಾದರೂ ಮಾಡೋಣ."

ಮಾವಿನ ಗಿಡದಲ್ಲಿ ಆಸಕ್ತಿ ತೋರುತ್ತಿದ್ದ ಮಾಸ್ತರನ್ನು ಕಂಡು ಅಪ್ಪು ಎಂದ:

"ಅದೇನು ನೋಡ್ತಿದ್ದೀರಿ ಸರ್?"

"ಬೀಜ ಮೊಳೆತು ಪುಟ್ಟ ಗಿಡವಾಗಿದೆ. ಈ ಗಿಡ ಮರವಾಗಿ ಮಾವಿನ ಹಣ್ಣು ಕೊಡೋದಕ್ಕೆ ಎಷ್ಟು ಕಾಲವಾದೀತೂಂತ ಯೋಚಿಸ್ತಿದ್ದೇನೆ."

ಅಪ್ಪು ಮಾಸ್ತರ ಮುಖವನ್ನ ನೋಡಿದ. ಅವರು ಮುಂದುವರಿಸಿದರು:

"ಈ ಗಿಡ ಬೆಳೆದು ಫಲ ಸಿಗೋದಕ್ಕೆ ಬಹಳ ದಿನ ಬೇಕು, ಅಲ್ಲ?"

ಅಪ್ಪು 'ಹೌದೆಂದು' ತಲೆಯಾಡಿಸಿದ. ಮಾಸ್ತರು ಮಾತನ್ನು ಪೂರ್ಣಗೊಳಿಸಿದರು:

"ಪ್ರತಿಯೊಂದೂ ಹಾಗೆಯೇ. ಬೀಜ ಮೊಳೆತು, ಗಿಡವಾಗಿ, ಮರವಾಗಿ ಫಲ ಬಿಡೋದಕ್ಕೆ ಸಮಯ ಬೇಕು. ತಾಳ್ಮೆಯಿಂದ ನಾವು ಕಾಯುತ್ತ ದುಡೀಬೇಕು. ಪ್ರತಿಯೊಂದೂ ಹಾಗೆಯೇ."

ಆ ಮಾತು ಅರ್ಥವಾಗಿ ಚಿರುಕಂಡ ತಿಳಿವಳಿಕೆಯ ನಗೆ ನಕ್ಕ. ಸ್ವಲ್ಪ ತಡೆದು ಅಪ್ಪುವಿಗೂ ಅದು ಅರ್ಥವಾಗಿ, ಆತನೂ ನಕ್ಕ.

೮

ಶಾಲೆಯ ಜಗಲಿಯ ಬದಲು ಯಾವನಾದರೂ ರೈತನ ಮನೆಯಲ್ಲಿ ಮುಂದೆ ಪತ್ರಿಕೆ ಓದುವುದು ಮೇಲೆಂದು ಮಾಸ್ತರು ಮಾಡಿದ ಸೂಚನೆ ಯೋಗ್ಯವಾಗಿತ್ತು. ಆದರೆ 'ನನ್ನ ಮನೆಗೆ ಬನ್ನಿ' ಎಂದು ಕರೆಯಲು ಮಾತ್ರ ಯಾವ ರೈತನೂ ಸಿದ್ಧನಿರಲಿಲ್ಲ. ದಿನನಿತ್ಯದ ಕೆಲಸಕ್ಕಿಂತ ಭಿನ್ನವಾದ ಆ ಓದು ಅತ್ಯಗತ್ಯವೆಂದು ಅವರಿಗೆ ತೋರಲಿಲ್ಲ. ಜಮೀನ್ದಾರರ ಮನೆಯಲ್ಲಿ ಪತ್ರಿಕೆಯೋದುವ ಪ್ರಸ್ತಾಪ ಬಂದಿತ್ತೆಂದು ರೈತರಿಗೆ ತಿಳಿದಿದ್ದರೆ, ಆ ಓದಿನಲ್ಲಿ ಆಸಕ್ತಿ ತೋರುವವರ ಸಂಖ್ಯೆ ಮತ್ತಷ್ಟು ಕಡಿಮೆಯಾಗುತ್ತಿತ್ತು. "ನನಗಿನ್ನು ಬಿಡುವಿಲ್ಲ, ನನ್ನ ಬದಲು ಚಿರುಕಂಡ ಪತ್ರಿಕೆ ಓದಿ ಹೇಳ್ತಾನೆ" ಎಂದು ಮಾಸ್ತರು ಹೇಳಿದುದಂತೂ ಕೊನೆಯುಗುಂಟನ್ನೂ ಕಡಿದಹಾಗಾಯಿತು. ಶಿಲ್ಪ ಕೃತಿಯ ರಚನೆಗಾಗಿ ಪ್ರಯಾಸಪಟ್ಟು ತಂದು ಕೂಡಿಸಿದ ಆವೆ ಮಣ್ಣು ಒಣಗಿಹೋಗುತ್ತಿದೆಯಲ್ಲ, ಎಂದು ದುಃಖವಾಯಿತು ಕಲಾವಿದ

ಮಾಸ್ತರಿಗೆ.

ಆದರೂ ಅವರು ನಿರಾಶರಾಗಲಿಲ್ಲ. ನಿರಾಶರಾಗುವುದು ಹೇಗೆಂಬುದು ಅವರಿಗೆ ತಿಳಿದೇ ಇರಲಿಲ್ಲ. ಸ್ವಲ್ಪ ಕಾಲದ ಬಳಿಕ ಅವರು ಮತ್ತೊಮ್ಮೆ ಯತ್ನಿಸಿ ನೋಡಿದರು. ಆಗಲೂ ಜಾಗ ಸಿಗಲಿಲ್ಲ. ರೈತರು ಆಸಕ್ತಿಯನ್ನೂ ತೋರಲಿಲ್ಲ.

"ಯಾರು, ಚಿರುಕಂಡನೇ ಅಲ್ವ ಓದೋದು?" ಎಂದು ಒಬ್ಬ ತಾತ್ಸಾರದಿಂದಲೇ ಅಂದುಬಿಟ್ಟ. ತಮ್ಮವನೇ ಆದ ಚೋಟುದ್ದದ ಹುಡುಗನೊಬ್ಬ ತಮಗೆ ಪತ್ರಿಕೆ ಓದಿ ಹೇಳುವುದು ಅಭಾಸಕರವಾಗಿ ರೈತರಿಗೆ ತೋರಿತು.

ಮಾಸ್ತರ ವಿಷಯದಲ್ಲಿ, ಅವರು ಕಲಿತವರು ಎಂಬ ಒಂದೇ ಕಾರಣಕ್ಕಾಗಿ ಮೊದಲು ಅಭಿಮಾನವಿರಿಸಿದ್ದ ಒಬ್ಬ ರೈತನಿದ್ದ. ಅವನ ಹೆಸರು ಕೋರ. ಆತನ ತಂದೆಯ ಕಾಲದಲ್ಲೇ ಹೊಲ ಕೈಬಿಟ್ಟಿತ್ತು. ಸದಾಕಾಲವೂ ಕಾಯಿಲೆಯಿಂದ ನರಳುತ್ತಿದ್ದ ಹೆಂಡತಿ ಸತ್ತಿದ್ದಳು; ಬಂಜೆಯಾಗಿಯೇ ಸತ್ತಿದ್ದಳು—ಪುಣ್ಯವಂತೆ! ಆತ ಒಂದು ರೀತಿಯ ಕೂಲಿಕಾರ, ಕೃಷಿ-ಕೂಲಿಕಾರ. ಬಿತ್ತನೆಯ ಕುಯ್ಲಿನ ದಿನಗಳಲ್ಲಿ ಇನ್ನೊಬ್ಬರ ಹೊಲದಲ್ಲಿ ದಿನಗೂಲಿಯಾಗಿ ದುಡಿಯುತ್ತಿದ್ದ. ಆಗೊಮ್ಮೆ ಈಗೊಮ್ಮೆ ಚರ್ವತ್ತೂರಿನ ರೈಲು ನಿಲ್ದಾಣಕ್ಕೆ ಯಾವುದಾದರೂ ಸಾಮಾನು ಹೊರುವ ಕೆಲಸವಿದ್ದಾಗ, ಅದನ್ನೂ ಮಾಡುತ್ತಿದ್ದ. ದುಡಿಮೆ ಇಲ್ಲದ ವೇಳೆ ಹೋಟೆಲಿನಲ್ಲಿ ಕುಳಿತು ಕಾಲಹರಣ, ತುಂಡು ಬೀಡಿಗೋ 'ಅಪ್ಪ' ಚಹಾಕ್ಕೋ ಕೈ ಒಡ್ಡುವುದು ; ಮೂರು ಕಾಸು ಆರು ಕಾಸು ಸಾಲ ಕೇಳುವುದು; ಎಷ್ಟೋ ಸಂಜೆ ಯಾರ ಜತೆಯಲ್ಲಾದರೂ ಒಂದಿಷ್ಟು ಕುಡಿದು ಹಟ್ಟಿಗೆ ಬಂದು ಮಲಗುವುದು.....

ಒಮ್ಮೆ ಆತ ಕಾಯಿಲೆಬಿದ್ದ. ಬಡ ದೇಹವನ್ನು ನಡುಗಿಸುತ್ತ ಬಂದ ಮಲೇರಿಯ. ಆ ಸಮಯದಲ್ಲಿ ನೀಲೇಶ್ವರಕ್ಕೆ ಹೊರಟಿದ್ದ ಮಾಸ್ತರು ಆ ಕಂಗಾಲ ಸ್ಥಿತಿಯಲ್ಲಿ ಆತನನ್ನು ಕಂಡರು. ಹಿಂತಿರುಗಿ ಬಂದಾಗ ಔಷಧಿ ತಂದರು. ಕೋರ ಗುಣಮುಖವಾಗಿ ಓಡಾಡಿದ. ಈಗ ವಿದ್ಯೆಗೆ ಆತ ಕೊಡುತ್ತಿದ್ದ ಗೌರವದ ಜತೆಗೆ ವ್ಯಕ್ತಿಯ ವಿಷಯದಲ್ಲಿ ಪ್ರೀತಿಯೂ ಬೆರೆಯಿತು. ಇದರ ಫಲವಾಗಿ, ಕುಡಿಯದೆ ಇದ್ದ ಬಿಡುವಿನ ಸಮಯದಲ್ಲಿ ಆತ ಮಾಸ್ತರನ್ನು ಹಿಂಬಾಲಿಸಿದ. ಒಂದು ಪ್ರಶ್ನೆಯನ್ನೂ ಕೇಳುತ್ತಿರಲಿಲ್ಲ. ಆದರೆ ಮಾಸ್ತರ ಮಾತುಗಳಿಗೆಲ್ಲ—ಅವು ಅರ್ಥವಾಗದೆ ಇದ್ದಾಗಲೂ—ಕಿವಿಕೊಡುತ್ತಿದ್ದ. ಕುರುಚಲು ಗಡ್ಡ ತುಂಬಿದ ಅವನ ಮುಖದಿಂದ ಎರಡು ಕಣ್ಣುಗಳು ಅರಳಿಕೊಂಡು ಮಾಸ್ತರನ್ನು ನೋಡುತ್ತಿದ್ದುವು.

"ಪತ್ರಿಕೆ ಓದೋಕೆ, ನಾಲ್ಕು ಜನ ಸೇರೋಕೆ, ಒಂದು ಜಾಗವೂ ಇಲ್ಲದೆ ಹೋಯಿತಲ್ಲಾ!" ಎಂದು ಮಾಸ್ತರು ಒಂದು ದಿನ ತೆಗೆದ ಉದ್ಗಾರವನ್ನು ಕೇಳಿ

ಕೋರನಿಗೆ ಕೆಡುಕೆನಿಸಿತು. ಅವನು ಬಹಳ ಹೊತ್ತು ತಲೆ ಕೆರೆಯುತ್ತಾ ನಿಂತಿದ್ದು ಕೊನೆಗೆ ಹೇಳಿದ:

"ನಾನೊಂದು ವಿಷಯ ಹೇಳಲಾ?"

ಎಂದೂ ಹೀಗೆ ಕೇಳಿದವನಲ್ಲ ಕೋರ. ಮಾಸ್ತರಿಗೆ ಆಶ್ಚರ್ಯವೇ ಆಯಿತು. ಅವರೆಂದರು:

"ಹೇಳು. ಏನು ವಿಷಯ?"

"ಎಲ್ಲಿಯೂ ಜಾಗ ಇಲ್ಲಾಂತ ಹೇಳ್ತಿದ್ರಿ-"

ಕೋರನ ಮನಸ್ಸಿನಲ್ಲಿದ್ದುದೇನೆಂಬುದು ಮಾಸ್ತರಿಗೆ ಹೊಳೆದು, ಸಂತೋಷದಿಂದ ಅವರ ಕಣ್ಣುಗಳು ಮಿನುಗಿದುವು. ಆದರೂ ಆತನ ಬಾಯಿಯಿಂದಲೇ ಆ ಮಾತನ್ನು ಕೇಳಬೇಕೆಂದು ಅವರು ಹೂಂಗುಟ್ಟಿದರು.

"ಹೌದು."

"ನಿಮಗೆ ಒಪ್ಪಿಗೆಯಾದ್ರೆ ನನ್ನ ಹಟ್ಟೀಲಿ—"

ಮಾಸ್ತರು ನಕ್ಕರು. ತಾನು ಹೇಳಿದುದು ಅನುಚಿತವಾಯಿತೇನೋ ಎಂದು ಕೋರ ಅಳುಕಿದ. ಮಾಸ್ತರು ಎಡಅಂಗೈಗೆ ಬಲಮುಷ್ಟಿಯಿಂದ ಗುದ್ದಿ ಹೇಳಿದರು:

"ಈವರೆಗೂ ನನಗೆ ಹೇಳಲೇ ಇಲ್ವಲ್ಲ ಕೋರ!"

ಮಾಸ್ತರಿಗೆ ಒಪ್ಪಿಗೆಯಾಯಿತೆಂದು ಸಂತೋಷಗೊಂಡು, ನಿಂತದ್ದ ಕೋರ ನೆಲದ ಮೇಲೆ ಕುಳಿತು

ಕೋರನ ಆಹ್ವಾನದ ವಿಷಯ ತಿಳಿದು, ಅಪ್ಪು ಮತ್ತು ಚಿರುಕಂಡ ಇಬ್ಬರಿಗೂ, ಒಂದು ಸಮಸ್ಯೆ ಬಗೆಹರಿಯಿತೆಂದು ಸಮಾಧಾನವಾಯಿತು. ಆದರೆ, ಜನರನ್ನು ಕೂಡಿಸುವ ಇನ್ನೊಂದು ಸಮಸ್ಯೆ ಹಾಗೆಯೇ ಉಳಿದಿತ್ತು.

"ನಾನೊಬ್ಬ ಇದ್ದೇನೆ. ಚಿರುಕಂಡ ನನಗೆ ಓದಿ ಹೇಳ್ಲಿ" ಎಂದ ಕೋರ. ಹಾಗೆ ಆತ ಹೇಳಿದುದು ಪತ್ರಿಕೆಯಲ್ಲಿನ ಆಸಕ್ತಿಯಿಂದಲ್ಲ, ಮಾಸ್ತರ ಮೇಲಿನ ಪ್ರೀತಿಯಿಂದ. ಮಾಸ್ತರು ತಮ್ಮ ಅವಸ್ಥೆ ಕಂಡು ತಾವೇ ನಕ್ಕರು.

ಅಂತೂ ಕ್ರಮೇಣ ಬೇರೆಯೂ ಒಬ್ಬಿಬ್ಬರನ್ನು ಪ್ರಯಾಸಪಟ್ಟು ಸೇರಿಸಿ, ಕತ್ತಲಾದ ಮೇಲೆ ಸ್ವಲ್ಪ ಹೊತ್ತು ಜರುಗುವ ಅಭ್ಯಾಸಕೂಟ ಆರಂಭವಾಯಿತು. ಕುಡಿದು ಬಂದ ದಿನ ಕೋರ ದೂರ ಮೂಲೆಯಲ್ಲಿ ಕುಳಿತು ನಿದ್ದೆ ಹೋಗುತ್ತಿದ್ದ. ಮಗನ ಚಟುವಟಿಕೆಯ ವಿಷಯ ಕೇಳಿ ಚಿರುಕಂಡನ ತಂದೆಗೆ ಸಂತೋಷವಾಯಿತು. "ಆ ಮಾಸ್ತರು ನಮ್ಮ ಹುಡುಗನನ್ನು ಒಳ್ಳೆಯ ಹಾದೀಲಿ ನಡೆಸ್ತಿದ್ದಾರೆ, ಕಲ್ಯಾಣಿ" ಎಂದು ಆತ ಹೆಂಡತಿಗೆ ಹೇಳಿದ. ಅಪ್ಪುವಿನ ತಂದೆ ಒಂದು ಸಂಜೆ ಕೋರನ

ಮನೆಯೊಳಕ್ಕೆ ಇಣಿಕಿ ನೋಡಿ, ಆಶ್ಚರ್ಯಪಟ್ಟರೂ ಅದನ್ನು ತೋರ್ಪಡಿಸದೆ, ಹಾಗೆಯೇ ಹೊರಟುಬಂದ. ಮನೆ ತಲಪಿ ಆತನೆಂದ: "ಆ ಹುಡುಗರು ! ಮೂರು ಮಾವಿನ ಕಾಯಿಯಷ್ಟು ಎತ್ತರವಿಲ್ಲ—ಪತ್ರಿಕೆ ಓದ್ತಾವಂತೆ. ಹುಂ!" ಆಗ ಬಾಯಲ್ಲಿ ಹಾಗೆಂದರೂ, ಮಗನಿಗೆ ಏನನ್ನೂ ಹೇಳಲಿಲ್ಲ. ಆತನಿಗೊಂದು ರೀತಿಯಲ್ಲಿ ಅದು ಮೆಚ್ಚುಗೆಯೇ ಆಗಿತ್ತು. ಒಂದು ದಿನ ಆತ ಮಗನನ್ನು ಕೇಳಿದ:

"ನಿನಗೆ ಓದೋಕೆ ಬರೋದಿಲ್ವೇನೊ?"

"ಬರ್ತದೆ." ಎಂದ ಅಪ್ಪು.

"ಮತ್ತೆ ಚಿರುಕಂಡ ಒಬ್ನೇ ಓದ್ತಾನೆ—"

"ಯಾರು ಓದಿದ್ರೇನು?"ಎಂದು ಹೇಳಿ ಅಪ್ಪು "ನನಗಿಂತ ಅವನೇ ಚೆನ್ನಾಗಿ ಓದ್ತಾನೆ" ಎಂದೂ ಮಾತು ಸೇರಿಸಿದ.

ತಂದೆ ಅದಕ್ಕೆ "ಹುಂ" ಎಂದ ಅಷ್ಟೆ. "ನೀನೂ ಬಾ" ಎಂದು ತಂದೆಯನ್ನು ಕರೆಯಬೇಕೆಂದು ಅಪ್ಪುವಿಗೆ ಮನಸ್ಸಿದ್ದರೂ ಮಾತುಗಳು ಹೊರಬೀಳಲಿಲ್ಲ.

ಅಲ್ಲದೆ, ಅಂಥ ಆಮಂತ್ರಣಕ್ಕೆ ಅರ್ಥವೂ ಇಲ್ಲವೆನ್ನುವಂತೆ, ಅಭ್ಯಾಸ ಕೂಟಕ್ಕೆ ಬರುತ್ತಿದ್ದವರ ಸಂಖ್ಯೆ ಕಡಮೆಯಾಗುತ್ತ ಆಗುತ್ತ ಕೂಟ ನಿಂತೇಹೋಯಿತು. ಆಗ "ನಮ್ಮ ಜನ ಯಾವಾಗಲೂ ಇಷ್ಟೇ" ಎಂದ, ಚಿರುಕಂಡನ ತಂದೆ ನೋವಿನಿಂದ. ಅಪ್ಪುವಿನ ತಂದೆ, "ತಮಾಷೆ ಮುಗಿದೇಹೋಯ್ತು" ಎಂದು ರಾಗವೆಳೆದ. ಆ ಮಾತಿನ ಹಿಂದಿನ ಭಾವನೆ ಯಾವುದೆಂಬುದು ಅವನಿಗೇ ತಿಳಿದಿರಲಿಲ್ಲ.

ಎಲ್ಲರಿಗಿಂತ ಹೆಚ್ಚಿನ ದುಃಖ ತನ್ನದೆಂದು ತೋರಿಸಿಕೊಂಡವನು ಕೋರ. ಆತ ಬಂದು ಮಾಸ್ತರಿಗೆಂದ:

"ಹುಡುಗರಿಗೆ ಯಾರು ಗೌರವ ಕೊಡ್ತಾರೆ ಹೇಳಿ? ನೀವಾದರೂ ಇದ್ದಿದ್ರೆ ನಾಲ್ಕು ಜನ ಬರ್ತಿದ್ರು."

"ಹೋಗಲಿ ಬಿಡು. ಸ್ವಲ್ಪ ದಿವಸ ಹೀಗೇ ಇರ್ಲಿ" ಎಂದು, ತಮ್ಮನ್ನು ತಾವೇ ಸಮಾಧಾನಗೊಳಿಸುವವರಂತೆ, ಮಾಸ್ತರೆಂದರು.

ಆ ಅವಧಿಯಲ್ಲಿ ಮಾಸ್ತರು ಜಮೀನ್ದಾರರ ಮಗ ಕರುಣಾಕರನಿಗೆ ಪಾಠ ಹೇಳಿಕೊಟ್ಟರು. ಸ್ವಲ್ಪ ದಿನ ಮನೆಯಲ್ಲೇ ಪಾಠ ನಡೆಯಿತು. ಆದರೆ ಸಾಮಾನ್ಯವಾಗಿ ಮಾಸ್ತರು ಹೋದಾಗ ಹುಡುಗ ಸಿದ್ಧನಾಗಿಯೇ ಇರುತ್ತಿರಲಿಲ್ಲ. ಸ್ನಾನದ ಮನೆಯಲ್ಲಿರುತ್ತಿದ್ದ. ಇಲ್ಲವೆ ಅಡುಗೆಮನೆಯಲ್ಲಿ. ಆದರೂ ಮಾಸ್ತರು ಆಕ್ಷೇಪಿಸಲಿಲ್ಲ. ಅವರಿಗೆ ಒಂದು ರೀತಿಯಲ್ಲಿ ಅನುಕೂಲವೇ ಆಯಿತು. ಒಂದು ದಿನ ಸಂದರ್ಭ ನೋಡಿಕೊಂಡು ಮಾಸ್ತರು ನಂಬಿಯಾರರಿಗೆ ಹೇಳಿದರು:

"ಕರುಣಾಕರ ಶಾಲೆಗೆ ಬೇಗನೆ ಬಂದರೆ ಅಲ್ಲಿಯೇ ಪಾಠ ಹೇಳಿಕೊಡಬಹುದು. ಅದೇ ಮೇಲು ಅಲ್ಲವೇ?"

ನಂಬಿಯಾರರು ಹುಬ್ಬು ಗಂಟಿಕ್ಕಿದರು.

"ಯಾಕೆ. ನಿಮಗೆ ಸುಲಭವಾಗ್ತದೇಂತಲೋ?"

"ಹಾಗಲ್ಲ, ಹೆಚ್ಚು ಹೊತ್ತು ಪಾಠ ಹೇಳಬಹುದು. ಶಾಲೆ ಶುರುವಾಗುವವರೆಗೂ ಸಮಯವಿರ್ತದೆ."

ನಂಬಿಯಾರರ ಗಂಟಿಕ್ಕಿದ ಹುಬ್ಬು ಸಡಿಲವಾಯಿತು. ಮಾಸ್ತರು ಹೇಳಿದ ಆ ಕಾರಣ ಪ್ರಾಮಾಣಿಕವಾದುದೆಂದು ಅವರು ನಂಬಿದರು.

"ಆಗಲಿ, ಹಾಗೆಯೇ ಆಗಲಿ. ನಾಳೆಯಿಂದ ಅಲ್ಲಿಯೇ ಪಾಠ ಹೇಳ್ಕೊಡಿ."

....ಮುಂದೆ ಈ ರೀತಿಯ ಏರ್ಪಾಟನಿಂದ ಬೇರೊಂದು ಸಮಸ್ಯೆ ಹುಟ್ಟಿದುದನ್ನು ಕಂಡು ಮಾಸ್ತರಿಗೆ ತಮಾಷೆ ಎನಿಸಿತು. ನಂಬಿಯಾರರ ಮಗನಿಗೆ ವಿಶೇಷ ಪಾಠವೆಂದಾದರೆ ನಂಬೂದಿರಿಯ ಮಕ್ಕಳು ಮಾಡಿದ ತಪ್ಪೇನು? ನಂಬಿಯಾರರಷ್ಟೇ ಪ್ರಮುಖರಾದ ಆ ಜಮೀನ್ದಾರರೂ ತಮ್ಮ ಅಧಿಕಾರವನ್ನು ಚಲಾಯಿಸಿದರು. ಹೀಗಾಗಿ, ಮೂವರು ಹುಡುಗರಿಗೆ ಮಾಸ್ತರು ವಿಶೇಷ ಪಾಠ ಹೇಳಿಕೊಡಬೇಕಾಯಿತು.

ಶಾಲೆಯ ಗೋಡೆಗೆ ಅಂಟಿಕೊಂಡೇ ಅದರ ಹಿಂಭಾಗದಲ್ಲಿದ್ದ ಹುಲ್ಲುಛಾವಣಿಯ ಕೊಠಡಿಯಲ್ಲಿ ಜಮೀನ್ದಾರರ ಮಕ್ಕಳಿಗೆ ಪಾಠ. ಆಗ ಶಾಲೆಯ ಹೊರಗೆ, ಹಿತ್ತಲಲ್ಲಿ, ಕಿವಿಯೊಡೆಯುವ ಹಾಗೆ ಇಪ್ಪತ್ತೈದು ಮೂವತ್ತರಷ್ಟು ಹುಡುಗರ ಗದ್ದಲ. ಜಮೀನ್ದಾರರ ಮಕ್ಕಳಿಗಿರುವ ವಿಶೇಷ ಸವಲತ್ತು ತಮಗೆ ಯಾಕಿಲ್ಲ?.... ಎಂದು ಆ ಮಕ್ಕಳು ಗೊಂದಲವೆಬ್ಬಿಸದಿದ್ದರೂ, ಆ ಶ್ರೀಮಂತ ಪುತ್ರರಿಗೆ ಪಾಠವಾಗುವಾಗ ತಾವು ಮೌನವಾಗಿರಬೇಕೆಂಬ ತತ್ತ್ವವನ್ನು ಮಾತ್ರ ಅವರು ಒಪ್ಪಲಿಲ್ಲ. 'ಸುಮ್ಮನಿರಿ!' ಎಂದು ಮಾಸ್ತರು ಅವರಿಗೆ ಹೇಳಲೂ ಇಲ್ಲ.... ಆ ಸಂದರ್ಭದಲ್ಲೊಂದು ರಾತ್ರ ಪಂಡಿತರು ಕಯ್ಯೂರಿಗೆ ಬಂದರು. ಅಪ್ಪು ಮತ್ತು ಚಿರುಕಂಡ ಪಂಡಿತರನ್ನು ಕಾಣದೆ ಆಗಲೇ ಒಂದು ವರ್ಷವಾಗಿತ್ತು. ಮತ್ತೆ ಅವರನ್ನು, ಅದೂ ತಮ್ಮ ಹಳ್ಳಿಯಲ್ಲೇ ಕಾಣುವಂತಾಯಿತೆಂದು ಹುಡುಗರಿಗಾದ ಸಂತೋಷ ಅಷ್ಟಿಷ್ಟಲ್ಲ. ಪಂಡಿತರೂ ಹುಡುಗರ ಹೆಗಲು ಮುಟ್ಟಿ, ಬೆನ್ನು ತಟ್ಟಿ, ಸುಖದುಃಖ ವಿಚಾರಿಸಿದರು.

ಅವರ ಜತೆಯಲ್ಲಿ ಧಾಂಡಿಗನಿದ್ದ. ಬೆಂಗಾವಲಿಗೆ ಬಂದಿದ್ದ ಭಟ. ಆತ ಮೊದಲು ಹುಡುಗರನ್ನು ಮಾತನಾಡಿಸಲೇಯಿಲ್ಲ. ಗಂಭೀರವಾಗಿದ್ದ. ಆತ ತಮ್ಮ

ಗುರುತು ಹಿಡಿಯಲಿಲ್ಲವೆಂದು ಅಪ್ಪು, ನಿರಾಸೆಗೊಂಡು, ಬಳಿ ಸಾರಿ, ಕೇಳಿದ:

"ಏನ್ರೀ, ಮರತ್ಹೋಯ್ತಾ? ನಮ್ಮನ್ನು ನೋಡಿದ್ದು ನೆನಪಿಲ್ವ?"

ಧಾಂಡಿಗ ಯೋಚಿಸುತ್ತಿದ್ದಂತೆ ನಟಿಸಿ ಹೇಳಿದ:

"ಹೂಂ.... ಹೂಂ. ನೆನಪಿದೆ. ದ್ವಾಪರ ಯುಗದಲ್ಲೋ ತ್ರೇತಾಯುಗದಲ್ಲೋ—ಯಾವಾಗಲೋ ಒಮ್ಮೆ ನೋಡಿರ್‍ಬೇಕು."

ಅಪ್ಪು ನಕ್ಕು, ಮತ್ತೊಂದು ಪ್ರಶ್ನೆ ಕೇಳಿದ:

"ಈಗೆಲ್ಲಿಂದ ಬಂದಿರಿ?"

"ಪಾತಾಳದಿಂದ ಬಂದೆವೊ ಸ್ವರ್ಗದಿಂದ ಬಂದೆವೊ—ಎಲ್ಲಿಂದಲೋ ! ಮರೆತ್ಹೋಗಿದೆಯಪ್ಪಾ, ಮರೆತ್ಹೋಗಿದೆ."

ಅಂತಹ ಪ್ರಶ್ನೆ ಕೇಳಬೇಡವೆಂದು "ಶ್!" ಎಂದು ಚಿರುಕಂಡ ಅಪ್ಪುವಿನ ಕೈ ಮುಟ್ಟಿ ಸನ್ನೆಮಾಡಿದ. ಅಪ್ಪುವಿಗೆ ಕೆಡುಕೆನಿಸಿತು. ಆದರೆ ಒಂದು ವರ್ಷದ ಹಿಂದೆ ತಾವು ಕಂಡಿದ್ದ ಇತರರ ನೆನಪಾಗಿ ಪಿಸುಮಾತಿನಲ್ಲಿ ಅಪ್ಪು ಕೇಳಿದ:

"ಓಹೋ! ರಾಮುಣ್ಣಿಯಂತೂ ನಿಮ್ಮ ವಿಷಯ ವಿಚಾರಿಸ್ತಾನೇ ಇದ್ನಪ್ಪ. ಸಾಲಮಾಡಿ ಬಂದ್ಬಿಟ್ರಿ ಅವತ್ತು!"

"ಓ!" ಎಂದ ಅಪ್ಪು. ಧಾಂಡಿಗ ತಮಾಷೆಗೆ ಹಾಗೆ ಅಂದನೆಂಬುದರಲ್ಲಿ ಶಂಕೆ ಇರಲಿಲ್ಲ. ಆದರೂ ರಾಮುಣ್ಣಿಯನ್ನು ಆ ಬಳಿಕ ಕಾಣಲಿಲ್ಲ ಎಂದು ಅಪ್ಪುವಿಗೆ ಬೇಸರವೆನಿಸಿತು.

"ಹೌದು ಕಣ್ರಿ. ಇಷ್ಟು ಸಮೀಪವಿದ್ದರೂ ಹೋಗೋದಕ್ಕೆ ಆಗಿಲ್ಲ."

"ಮುಖ್ಯ. ಆ ಕಡೆ ಹೋಗುವ ಕೆಲಸವೇ ಇರ್‍ಲಿಲ್ಲ" ಎಂದು ಚಿರುಕಂಡ ವಿವರಣೆಯನ್ನಿತ್ತ.

"ನೀಲೇಶ್ವರ ಜಾತ್ರೆಗೆ ಹೋಗುವಾಗ ಬರಬೇಕೂಂತಿತ್ತು. ಆದರೆ ಈ ಸಲ ಜಾತ್ರೆಗೆ ಹೊರಡೋದಾಗಲಿಲ್ಲ" ಎಂದು ಸಪ್ಪಗಿನ ಧ್ವನಿಯಲ್ಲಿ ಅಪ್ಪು ಹೇಳಿದ.

ಹುಡುಗರಿಬ್ಬರನ್ನೂ ಧಾಂಡಿಗ ಬದಿಗೆಳೆದ.

"ಅಲ್ರೋ! ಈ ಊರೇ ಪ್ರಪಂಚ ಅಂತ ಕಪ್ಪೆಗಳ ಹಾಗಿದ್ದೀರಲ್ರೋ. ಒಂದಿಷ್ಟು ಆಚೆ ಈಚೆ ಹಳ್ಳಿಗೆಲ್ಲಾ ಹೋಗಿ ಬರ್‍ಬಾರ್‍ದಾ ನೀವು?"

"ಹೋಗಿ ಮಾಡೋದೇನು?" ಎಂದು ಚಿರುಕಂಡ, ಗಹನವಾದ ಯಾವುದೊ ವಿಷಯದ ಬಗೆಗೆ ಧಾಂಡಿಗ ಪ್ರಸ್ತಾಪಿಸುತ್ತಿರಬಹುದೆಂದು ಭಾವಿಸಿ.

"ಹಲಸಿನ ಹಣ್ಣೋ ಮಾವಿನ ಹಣ್ಣೋ ಹೊತ್ಕೊಂಡ್ಬರೋದು!"

ಹಾಗೆ ಹೇಳುತ್ತಾ ಆತನೂ ನಕ್ಕ. ಆ ಮಾತನ್ನು ಕೇಳಿ ಹುಡುಗರೂ ನಕ್ಕರು.

"ಅಲ್ಲಾ, ಗುರು ಬಂದಿದ್ರೆ ಸುಮ್ನೆ ನಿಂತಿದೀರಲ್ಲ? ಎಲ್ಲಿಂದಾದರೂ ನಾಲ್ಕು ಬಾಳೆಹಣ್ಣಾದರೂ ತರಬಾರ್ದ?"

"ಯಾರು ಗುರು?" ಎಂದ ಚಿರುಕಂಡ ಧಾಂಡಿಗನತ್ತ ನೋಡಿ.

"ನಾನೇ ! ಗುರ್—?"

ಇವರೆಲ್ಲ ಗಟ್ಟಿಯಾಗಿ ನಗುತ್ತಿದ್ದುದನ್ನು ಕೇಳಿ, ಮಾಸ್ತರೊಡನೆ ಪಿಸುಮಾತಿನ ಸಂಭಾಷಣೆಯಲ್ಲಿ ನಿರತರಾಗಿದ್ದ ಪಂಡಿತರು ಹೇಳಿದರು:

"ಅದೇನಪ್ಪಾ ಅಷ್ಟು ನಗ್ತಿದ್ದೀರಿ! ಸ್ವಾರ್ಥಿಗಳು! ನಮಗೂ ಹೇಳಬಾರ್ದ ಒಂದಿಷ್ಟು?"

ಈ ಮಾತಿಗೆ ಮೌನವೇ ಉತ್ತರವಾಯಿತು.

ಕತ್ತಲೆಯಲ್ಲೆ ಅವರು ಹೊಲದ ಏರಿಗಳ ಮೇಲೆ ನಡೆದು ಕೋರನ ಹಟ್ಟಿಗೆ ಹೋದರು. ಸ್ವಲ್ಪ ಹೊತ್ತಿನಲ್ಲಿ ಚಿರುಕಂಡನ ತಂದೆಯೂ ಅಲ್ಲಿಗೆ ಬಂದ.

"ಮಾಸ್ತರು ಬರಹೇಳಿರ್ಬೇಕು" ಎಂದ ಚಿರುಕಂಡ, ತನ್ನೊಳಗೇ ಹತ್ತಿಡಲಾಗದ ಹೆಮ್ಮೆಯಿಂದ.

ಚಿರುಕಂಡನ ತಂದೆಯನ್ನು ಅಲ್ಲಿ ಕಂಡು ಅಪ್ಪುನಿಗೆ ಆಶ್ಚರ್ಯವಾಯಿತು.

ಅಲ್ಲಿಗೆ ಬರುವ ಅರ್ಹತೆ ತನ್ನ ತಂದೆಗೆ ಇಲ್ಲವಲ್ಲ ಎಂದು ವ್ಯಥೆಯಾಯಿತು. ಇದು ಹೆಚ್ಚು ಜನರ ಸಭೆಯಾಗಿರಲಿಲ್ಲ. ದೊಡ್ಡ ಭಾಷಣವಿರಲಿಲ್ಲ. ಹುಡುಗರು ಹಿಂದೆ ಕೇಳಿದ್ದ ಮಾತುಗಳೇ ಈಗಲೂ ಹಾರಾಡಿದವು. ಆದರೆ ಆ ಮಾತುಗಳನ್ನು ಕೇಳುತ್ತಿರುವುದೆಲ್ಲ ಮೊದಲ ಬಾರಿಗೇ ಎನ್ನುವಷ್ಟು ಕಾವು ಅವುಗಳಲ್ಲಿತ್ತು. ಹೊಸ ವಿಷಯಗಳೂ ಇದ್ದುವು. ದೇಶದಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ಸಮರ, ರಾಷ್ಟ್ರ ನಾಯಕರ ಬಂಧನ.... ಸೋಲು.... "ಒಂದು ವಿಷಯ ನಾವು ಚೆನ್ನಾಗಿ ತಿಳಿದಿರ್ಬೇಕು. ಬರೇ ಮಧ್ಯಮ ವರ್ಗದವರೇ ಯಾವತ್ತೂ ಸ್ವಾತಂತ್ರ್ಯ ತರಲಾರರು. ದೇಶದ ರೈತರೂ ಕೂಲಿಕಾರರೂ ಸಂಘಟಿತರಾಗಿ ಬಲಿಷ್ಠರಾಗದ ಹೊರತು ಸ್ವಾತಂತ್ರ್ಯ ಸಮರ ಯಶಸ್ವಿಯಾಗದು. ಬ್ರಿಟಿಷರೂ ಹೋಗಲಾರರು. ಇಲ್ಲಿ ಅವರಿಗೆ ಆಧಾರವಾಗಿರುವ ಶಕ್ತಿಗಳೂ ನಾಶವಾಗಲಾರವು... ಸುಖ ಸಾಧನೆಗೆ ಸುಲಭ ಹಾದಿ ಅನ್ನೋದೇ ಇಲ್ಲ. ಕಷ್ಟಪಟ್ಟು ದೀರ್ಘಕಾಲ ಕಲ್ಲುಮುಳ್ಳು ಗುಡ್ಡ ಬೆಟ್ಟ ದಾಟಿ ನಡೆದರೇ ಗುರಿ ಸೇರ್ತೇವೆ..."

ಅನಂತರ ಆ ಊರಿನ ಪರಿಸ್ಥಿತಿಯ ವಿಷಯವಾಗಿ ಮಾತುಕತೆ. ಚಿರುಕಂಡನ ತಂದೆ ಹೊಲ ಕಳೆದುಕೊಂಡ ವಿಷಯ; ಕೋರನ ಕಥೆ ಕೂಡ.

ಮಾತು ಮುಗಿಯುತ್ತಿದ್ದಂತೆ ಮಾಸ್ತರು ಕೇಳಿದರು:

"ಊಟಕ್ಕೇನು ಮಾಡೋಣ ಈಗ?"

"ನಾನೂ ಅದೇ ಪ್ರಶ್ನೆ ಕೇಳ್ಬೇಕೂಂತಿದ್ದೆ" ಎಂದ ಧಾಂಡಿಗ, ಹಲ್ಲು ಕಿಸಿಯುತ್ತ.

ಚಿರುಕಂಡನ ತಂದೆ, "ನಮ್ಮಲ್ಲಿಗೆ ಬಂದುಬಿಡಿ" ಎಂದು ಅತ್ಯಂತ ವಿನಯದಿಂದ ಹೇಳಿದ.

ಆದರೆ ಪಂಡಿತರ ನಿರ್ಧಾರದ ಧ್ವನಿ ಬೇರೆಯೆ ಮಾತನ್ನಾಡಿತು:

"ಈಗೇನೂ ಬೇಡಿ. ಇಲ್ಲೇ ಸ್ವಲ್ಪ ಹೊತ್ತಿದ್ದು. ಈ ಹಾದಿಯಾಗಿಯೇ ಹೊರಡ್ತೇವೆ."

ಆ ಮಾತನ್ನು ನಂಬುವುದಾಗದೆ ಚಿರುಕಂಡನ ತಂದೆ ಹೇಳಿದ:

"ಈಗಲೇ ಹೊರಡ್ಬೇಕೆ? ರಾತ್ರಿ ವಿಶ್ರಾಂತಿ ತಗೋಳೋದಿಲ್ವೆ?"

"ಇಲ್ಲ, ಬೆಳಕು ಹರಿಯೋದಕ್ಕುಂಚೆಯೇ ನಾವು ತ್ರಿಕರಪುರ ದಾಟ್ಬೇಕು."

ಇದೆಲ್ಲದರ ಮಹತ್ವ ತನ್ನ ತಂದೆಗೆ ತಿಳಿಯದೆಂದು ಚಿರುಕಂಡನಿಗೆ ಬೇಸರವೆನಿಸಿತು.

ಅಷ್ಟರಲ್ಲಿ ಕೋರ ಎದ್ದುನಿಂತ.

"ಎಲ್ಲಿಗೆ ಹೊರಟೆ?" ಎಂದರು ಮಾಸ್ತರು.

"ಆ ಹೋಟೆಲಿನವನನ್ನು ಎಬ್ಬಿಸಿ ಅವಲಕ್ಕಿ ಬಾಳೆಹಣ್ಣಾದರೂ ತರ್ತೇನೆ."

"ಯಾರಿಗೇಂತ ಹೇಳ್ತೀಯಾ?"

"ಅಷ್ಟೂ ನನಗೆ ತಿಳೀದಾ? ನಾನು ಮಂಕುದಿಣ್ಣೆ ನಿಜವಾದರೂ, ಇಷ್ಟು ಸಮಯದಿಂದ ನಿಮ್ಮ ಜತೇಲಿದ್ದುದಕ್ಕೆ-"

"ಆಗಲಪ್ಪಾ ಹೋಗು" ಎಂದರು ಮಾಸ್ತರು, ಕೋರನ ನೋವಿನ ಧ್ವನಿಯನ್ನು ತಡೆದು.

ಕೋರ ಹೋಗುತ್ತಲೇ ಧಾಂಡಿಗನೆಂದ:

"ಸದ್ಯ ಬದುಕಿದೆ! ಎಲ್ಲಿ ಇವತ್ತು ರಾತ್ರಿಯೆಲ್ಲ ತಣ್ಣೀರೇ ಗತೀಂತ ತೀರ್ಮಾನವಾಗ್ತದೋಂತ ಭಯವಾಗಿತ್ತು.

ಪಂಡಿತರು ಆ ಮಾತು ಕೇಳಿ ಧಾಂಡಿಗನತ್ತ ನೋಡಿ ಆತ್ಮೀಯತೆಯಿಂದ ಮುಗುಳ್ನಕ್ಕರು.....

....ಅದೊಂದು ಸ್ಮರಣೀಯ ರಾತ್ರಿ. ಒಂದು ದಿನ, ಒಂದು ವರ್ಷದಷ್ಟೇ ಅಮೂಲ್ಯವಾದುದು ಎನ್ನುವ ಭಾವನೆ. ಅದರ ಫಲವಾಗಿ, ತಾವು ಬೇಗ ಬೆಳಗನೆ ಬೆಳೆಯುತ್ತಿದ್ದ ಅನುಭವ.

ಕಯ್ಯೂರಿಗೆ ಪಂಡಿತರ ಆಗಮನದ ಫಲಶ್ರುತಿಯೇ ವಯಸ್ಕರ ರಾತ್ರಿ ಶಾಲೆ.

ಕೆಲ ರೈತರು ಮಾಸ್ತರ ಬಳಿಗೆ ಬಂದು ತಮಗೆ ಓದುಬರಹ ಕಲಿಸಲು ಕೇಳಿದರೆಂದು ಸುದ್ದಿ ಹಬ್ಬಿತು. ಬೇಕಾದ ಕಡೆಗೆ ವಾರ್ತೆ ತಲಪಲೆಂದು ಜಮೀನ್ದಾರರ ಹುಡುಗರೊಡನೆಯೂ ಮಾಸ್ತರು ಆ ವಿಷಯ ಪ್ರಸ್ತಾಪಿಸಿದರು. ತಮಗೆ ಕರೆಕಳುಹಬಹುದು; ಆದರೆ ಈ ಸಲ ಬಿಟ್ಟುಕೊಡಬಾರದು—ಎಂಬ ನಿರ್ಧಾರವನ್ನೂ ಅವರು ಮಾಡಿದರು.

ಮುಂದೆ ನಡೆದುದು ನಿರೀಕ್ಷಿಸಿದುದಕ್ಕಿಂತ ಸ್ವಲ್ಪ ಭಿನ್ನವಾಗಿತ್ತು. ಮಾರನೆಯ ದಿನ ಬೆಳಗ್ಗೆ ಊರ ಜಮೀನ್ದಾರರಿಬ್ಬರು ತಮ್ಮ ಆಳುಗಳೊಡನೆ ಬಂದು ಶಾಲೆಗೆ ಭೇಟಿಕೊಟ್ಟರು. ಅಲ್ಲಿದ್ದುದು ಮುರುಕು ಕುರ್ಚಿಯೊಂದೇ.

"ನೀವು ಕೂತ್ಕೊಳ್ಳಿ" ಎಂದರು ನಂಬಿಯಾರರು ನಂಬೂದರಿಗೆ.

"ನೀವು ಕೂತ್ಕೊಳ್ಳಿ" ಎಂದರು ಅವರು ಇವರಿಗೆ.

ಯಾರೊಬ್ಬರೂ ಕುರ್ಚಿಯ ಮೇಲೆ ಕುಳಿತುಕೊಳ್ಳಲಿಲ್ಲ.

"ಶಾಲೆ ಅಂದ್ಮೇಲೆ ಒಂದೆರಡು ಬೆಂಚಾದರೂ ಇರಬೇಕಪ್ಪ" ಎಂದರು ನಂಬೂದಿರಿ. ಅದು ವಿಶ್ವಸ್ಥ ಸಮಿತಿಯ ಮುಖ್ಯಸ್ಥನ ಮೇಲೆ ಅವರೆಸೆದ ಬಾಣ.

ಆ ಬಾಣವನ್ನು ಕೈಯಿಂದ ಸವರಿ ಬದಿಗೆಸೆಯುವಂತೆ ನಂಬಿಯಾರರೆಂದರು:

"ಬೆಂಚು ತಂದು ಹಾಕಿದರೆ ನಮ್ಮ ಮನೆ ಆಳುಗಳ್ನ ಇಲ್ಲಿ ಕಾವಲೂ ಇಡಬೇಕಾಗ್ತದೆ!"

ಆ ಇಬ್ಬರೂ ಮಾಸ್ತರೊಡನೆ ಶಾಲೆಯ ಅಂಗಳಕ್ಕಿಳಿದರು. ಆಗತಾನೆ ಬರತೊಡಗಿದ್ದರು ಹುಡುಗರು. ನಂಬಿಯಾರರ ಮಗನೂ ನಂಬೂದಿರಿಯ ಮಕ್ಕಳೂ ತಂದೆಯನ್ನು ನೋಡುತ್ತ ಈ ದಿನ ಅಭಿಮಾನದಿಂದಲೇ ಒಳಗೆ ಬಂದರು. ಉಳಿದವರು ಧೈರ್ಯ ಸಾಲದೆ ಕಾಲು ಹಾದಿಯಲ್ಲೇ ನಿಂತರು.

ನಂಬಿಯಾರರು ಮಾಸ್ತರನ್ನುದ್ದೇಶಿಸಿ ಹೇಳಿದರು:

"ನಾವೊಂದು ಸುದ್ದಿ ಕೇಳಿದೆವು—"

ಮಾಸ್ತರು ಮುಂದುವರಿಸಲು ಅವರಿಗೆ ಆಸ್ಪದ ಕೊಡಲಿಲ್ಲ.

"ಹೌದು ನಾನಾಗಿಯೇ ಬಂದು ತಮಗೆ ತಿಳಿಸಬೇಕೂಂತಿದ್ದೆ. ಅಷ್ಟರಲ್ಲಿ ತಾವೇ ಇಲ್ಲಿಗೆ ದಯಮಾಡಿಸಿದಿರಿ."

ಮಾಸ್ತರು ಹಾಗೆ ಹೇಳಿದೊಡನೆಯೇ ನಂಬೂದಿರಿ ಎಂದರು:

"ನೋಡಿಯಪ್ಪ. ನಾನು ಮೊದಲೇ ಸ್ಪಷ್ಟವಾಗಿ ಹೇಳ್ಬಿಡ್ತೇನೆ. ಹಿಂದೆ ಈ ಶಾಲೆ ಕಟ್ಟಿಸೋದೇ ನನಗಿಷ್ಟವಿರಲಿಲ್ಲ. ಈ ಮಹಾರಾಯರು ಗೆದ್ದರು. ಅಂತೂ ಎಲ್ಲರಿಗೂ ವಿದ್ಯೆ ಸಿಗಬೇಕು ಅನ್ನೊ ತತ್ತ್ವ ಆಗ ಒಪ್ಪಿಕೊಂಡಹಾಗಾಯಿತು.

ಅಂದ್ಮೇಲೆ, ಈಗ ರೈತರು ತಮಗೂ ವಿದ್ಯೆ ಬೇಕೂಂತ ಕೇಳಿದರೆ ವಿರೋಧಿಸೋದು ಸರಿಯಲ್ಲ. ಆದರೆ ಈ ಮಹಾರಾಯರಿಗೆ ಆ ಅಭಿಪ್ರಾಯ ಸಮ್ಮತವಿಲ್ಲ, ಏನು ಮಾಡೋಣ?"

ಇಬ್ಬರು ಪ್ರಮುಖರು ವೈಯಕ್ತಿಕ ಪ್ರತಿಷ್ಠೆಗಾಗಿ ತಮ್ಮೊಳಗೆ ಸೂಕ್ಷ್ಮವಾಗಿ ವಾದಿಸುತ್ತಿದ್ದ ರೀತಿ ನೋಡಿ ಮಾಸ್ತರಿಗೆ ಮೋಜೆನಿಸಿತು.

ಈಗ ನಂಬಿಯಾರರು ಏನು ಹೇಳುವರೋ ಎಂದು ಅವರು ಕುತೂಹಲ ತಳೆದರು. ಯಾವ ಅಸ್ತ್ರವನ್ನು ಹೇಗೆ ಪ್ರಯೋಗಿಸಬೇಕೆಂದು ನಂಬಿಯಾರರು ಚಡಪಡಿಸುವಂತೆ ತೋರಿತು.

"ಇದಕ್ಕೆಲ್ಲ ಅರ್ಥವಿಲ್ಲ. ಇಲ್ಲಿ ತತ್ತ್ವದ ಪ್ರಶ್ನೆಯೇ ಎಲ್ಲ. ಇವರೆಲ್ಲ ವಿದ್ಯೆ ಕಲಿತೇ ಪ್ರಪಂಚ ಉದ್ಧಾರವಾಗ್ಬೇಕೇನೋ. ಚಿಕ್ಕವರು ಆದಷ್ಟು ಜನ ಕಲಿಯೋದು ಸರಿ. ಆದರೆ ದೊಡ್ಡವರು ಕೂಡ ಕಲಿಯೋದು ಅಂದರೇನು?"

ನಂಬೂದಿರಿಗೆ, ಮಾಸ್ತರು ತಮ್ಮ ಕಡೆಗೇ ಇರುವರೆಂಬ ಆತ್ಮವಿಶ್ವಾಸ ಹೆಚ್ಚಿನ ಬಲವನ್ನು ಕೊಟ್ಟಿತು. ಅವರು ನಂಬಿಯಾರರತ್ತ ತಿರುಗಿ 'ನಾನೇ ಗೆದ್ದೆ' ಎನ್ನು ಧ್ವನಿಯಲ್ಲಿ ಹೇಳಿದರು:

"ಬೆಳಿಗ್ಗಿನಿಂದ ಚರ್ಚೆ ಮಾಡ್ತಾ ಇಲ್ಲಿವರೆಗೂ ಬಂದಿದ್ದೇವೆ. ಏನಪ್ಪಾ, ಆವತ್ತು ಏನು ಹೇಳಿದ್ದಿರಿ? ಕಾಲಧರ್ಮಕ್ಕೆ ಸರಿಯಾಗಿ ನಾವು ನಡೀಬೇಕೂ ಅಂತ. ಇವತ್ತು ನಾನು ಹೇಳೋದೂ ಅದೇ ಮಾತು."

ನಂಬಿಯಾರರ ಧ್ವನಿ ಏರಿತು:

"ಹೊಲದಲ್ಲಿ ಅವರು ದುಡಿಯೋದು ಕಮ್ಮಿಯಾದರೆ?"

"ಉಪವಾಸ ಬಿದ್ದು ಸಾಯ್ತಾರೆ ಅಷ್ಟೆ! ಅದಕ್ಕೆ ನೀವ್ಯಾಕೆ ಚಿಂತಿಸ್ತೀರಿ?"

"ಹಾಗೆಲ್ಲ ಪರಿಸ್ಥಿತಿ ಕೈಬಿಟ್ಟು ಹೋಗದಂತೆ ನೋಡ್ಕೊಳ್ಬೇಕು" ಎಂದು ತನ್ನನ್ನೇ ಕೇಳಿಕೊಂಡರು. ಆದರೆ ಅವರಿಬ್ಬರೂ ಮಾಸ್ತರರ ಮಾತಿಗೆ ಲಕ್ಷ್ಯ ಕೊಡಲಿಲ್ಲ.

ನಂಬಿಯಾರರು ರೇಗಿ ನುಡಿದರು:

"ಹಾಳಾಗಿ ಹೋಗಲಿ! ನನಗೇನು?"

"ಅಬ್ಬ! ಅಂತೂ ಈ ಸಲ ನಾನು ಗೆದ್ದೆ!"

ನಂಬಿಯಾರರಿಗಿಂತ ವಯಸ್ಸಿನಲ್ಲಿ ದೊಡ್ಡವರಾಗಿದ್ದ ಈ ನಂಬೂದಿರಿಯ ಮಾತಿನಲ್ಲಿ ಮಗುವಿನ ಮಂಗತನವಿತ್ತು.

ಮುಖ ಸಿಂಡರಿಸಿ ನಂಬಿಯಾರರು ನುಡಿದರು:

"ಆಗಲಿ! ಆದರೆ ಆ ವಿದ್ಯಾಭ್ಯಾಸ ಈ ಶಾಲೇಲಿ ನಡೀಕೂಡ್ದು. ಇದು ಮಕ್ಕಳ

ಶಾಲೆ. ಮುದುಕರ ಶಾಲೆಯಲ್ಲ. ಇದರಲ್ಲೆಲ್ಲ ಅಷ್ಟು ಆಸಕ್ತಿ ಇದ್ದವರು ಬೇ
ಶಾಲೆ ಕಟ್ಟಿಸ್ಲಿ."

ಕೊನೆಯ ಮಾತು ನಂಬೂದಿರಿಯ ಮೇಲೆಸೆದ ಮರುಬಾಣ. ನಂಬೂದಿ
ಸುಮ್ಮನಿದ್ದುದನ್ನು ಕಂಡು ಮಾಸ್ತರತ್ತ ತಿರುಗಿ, ನಂಬಿಯಾರರು ಹೇಳಿದರು:

"ಏನು ಹೇಳ್ತೀರಿ ಮಾಸ್ತರೆ?"

ತಮಗೆ ಅನುಕೂಲವಾಗುವಂತೆ ನಡೆದ ಈ ಪ್ರಕರಣದಿಂದ ಉತ್ತೇಜಿತರಾ
ಮಾಸ್ತರು ಉತ್ತರವಿತ್ತರು:

"ಈ ಶಾಲೆಯಲ್ಲೇ ವಯಸ್ಕರಿಗೂ ಪಾಠ ಹೇಳಬಾರ್ದು. ಅವರೇ ಎಲ್ಲಾದರ
ಜಾಗ ಗೊತ್ಮಾಡ್ಲಿ."

ಈಗ ನಂಬೂದಿರಿ ಮಾಸ್ತರನ್ನು ಕೇಳಿದರು:

"ಇದೆಲ್ಲ ನೋಡಿದರೆ ನಾಲ್ಕು ಕಾಸು ಹೆಚ್ಚಿನ ಸಂಪಾದನೆಗೆ ನೀವೇ ಏರ್ಪಾ
ಮಾಡಿಕೊಂಡಹಾಗೆ ಕಾಣ್ತದೆ!"

ಮಾಸ್ತರ ಮುಖ ಅವಮಾನದಿಂದ ರಂಗೇರಿತು. ಆದರೂ ಅವರು ನಕು
ಅಂತಹ ಆರೋಪವೂ ಒಳ್ಳೆಯದೇ ಎಂದು ಭಾವಿಸಿ ಉತ್ತರವಿತ್ತರು:

"ಹಾಗೇನೂ ಇಲ್ಲ. ಕೊಟ್ಟರೂ ಮಹಾ ಅವರೆಷ್ಟು ಕೊಡಬಹುದು?"

"ಕೊಡ್ತಾರೆ ಮಣ್ಣು!" ಎಂದು ನಂಬಿಯಾರರು ಸಿಡುಕಿನಿಂದ ನುಡಿದು
ಸಿಗರೇಟಿಗೆ ಕೈ ಹಾಕಿದರು.

ನಂಬೂದಿರಿ ನಗುತ್ತ ಅಂದರು:

"ನಿಮಗೆ ಒಂದು ಹೇಳ್ತೇನೆ ಮಾಸ್ತರೆ. ಅವರನ್ನ ನೆಚ್ಕೊಂಡು ನೀವಿರ್ಬೇ
ನಿಮ್ಮ ರಾತ್ರಿಶಾಲೆ ನಾಲ್ಕು ದಿವಸ ನಡೆದ್ರೆ ದೊಡ್ಡದು. ವಿದ್ಯಾ ಸರಸ್ವತಿ ಎಲ್ಲಿ-
ರೈತರೆಲ್ಲಿ! ಕುಣಿಯೋ ಕೋತೀನ ನೋಡೋದಕ್ಕೆ ಇವರೆಲ್ಲ ಬಂದಾರೆ ಹೊರತು...

ರೈತರು ಮತ್ತು ವಿದ್ಯೆಗೆ ಸಂಬಂಧಿಸಿ ಇಬ್ಬರು ಜಮೀನ್ದಾರರಲ್ಲಿ
ಭಿನ್ನಾಭಿಪ್ರಾಯಗಳಿರಲಿಲ್ಲ. ಅವರೊಳಗಿನ ವೈಯಕ್ತಿಕ ಅಸೂಯೆಯಿಂದ ರೈತರ
ಆ ವಿಷಯದಲ್ಲಿ ಹಿತವಾಗಿತ್ತು ಅಷ್ಟೆ. ಅದು ಸ್ಪಷ್ಟವಾಗಿತ್ತು, ಮಾಸ್ತರಿಗೆ.

ಕರುಣಾಕರನನ್ನೂ ನಂಬೂದಿರಿಯ ಮಕ್ಕಳನ್ನೂ ಕರೆದು ಮಾಸ್ತರೆಂದರು:

"ನನ್ನ ಕೊಠಡಿಗೆ ಹೋಗಿ ಕೂತ್ಕೊಳ್ಳಿ, ಬಂದ್ಬಿಟ್ಟೆ."

ಅದು ತಮ್ಮ ಮಕ್ಕಳಿಗೋಸ್ಕರ ವಿಶೇಷ ಪಾಠ. ಜಮೀನ್ದಾರರಿಬ್ಬರಿಗ
ಆದರಿಂದ ಸಮಾಧಾನವಾಯಿತು.

"ಇನ್ನು ಹೋಗೋಣವೇನಪ್ಪ?" ಎಂದರು ನಂಬೂದಿರಿ ನಂಬಿಯಾರರಿಗೆ,

ನಂಬಿಯಾರರು "ಹೂಂ" ಎಂದರು. ಕಾಲುಹಾದಿಗಿಳಿಯುತ್ತ ಅವರು ಹಿಂತಿರುಗಿ, ತಮಗಿಬ್ಬರಿಗೂ ಕೈ ಜೋಡಿಸಿ ನಮಸ್ಕರಿಸುತ್ತಿದ್ದ ಮಾಸ್ತರನ್ನು ನೋಡಿ ಹೇಳಿದರು:

"ಈ ಸಂಭ್ರಮದಲ್ಲಿ ಶಾಲೆ ಹುಡುಗರಿಗೆ ಸರಿಯಾಗಿ ಪಾಠ ಹೇಳೋದು ಮರೀಬೇಡಿ!"

"ಎಲ್ಲಾದರೂ ಉಂಟೆ? ಛೆ! ಛೆ!" ಎಂದರು ಮಾಸ್ತರು ಎಲ್ಲ ಹಲ್ಲುಗಳನ್ನೂ ತೋರಿಸಿ, ನಗುತ್ತ.

ಹೊರಟುಹೋದ ಜಮೀನ್ದಾರರನ್ನು ಅವರ ಆಳುಗಳು ಹಿಂಬಾಲಿಸಿದರು. ಕಾಲುಹಾದಿಯಲ್ಲಿ ನಿಂತಿದ್ದ ಹುಡುಗರು ಈಗ ಗದ್ದಲಮಾಡಿ ಧೂಳೆಬ್ಬಿಸುತ್ತ ಒಳಕ್ಕೆ ಬಂದರು.

.....ರಾತ್ರಿ ಶಾಲೆಗೆ ಸಂಬಂಧಿಸಿ ಬಲು ಸುಲಭವಾಗಿ ದೊರೆತ ಈ ವಿಜಯವನ್ನು ಕಂಡು ಅಪ್ಪು ಮತ್ತು ಚಿರುಕಂಡ ನಲಿದಾಡುವ ಹಾಗಾಯಿತು. ಕೋರನ ಹಟ್ಟಿಯೇ ಕಯ್ಯೂರಿನ ರಾತ್ರಿ ಶಾಲೆ. ಅದನ್ನು ಗೊತ್ತುಪಡಿಸುವುದು ಸುಲಭವಾಗಿತ್ತು. ಆದರೆ ಕಷ್ಟವಾಗಿದ್ದುದು ಜನರನ್ನು ಅಲ್ಲಿಗೆ ಕರೆತರುವ ಕೆಲಸ. ಮೊದಲ ಒಂದೆರಡು ವಾರ ಬಂದವರು ಮೂವರೋ ನಾಲ್ವರೋ. ಆಮೇಲೆ ಸಂಖ್ಯೆ ಹನ್ನೆರಡಕ್ಕೆ ಏರಿತು. ಪುನಃ ಆರಕ್ಕೆ ಇಳಿಯಿತು. ಮಾಸ್ತರು ಅದರಿಂದೇನೂ ಎದೆಗುಂದಲಿಲ್ಲ. ಅಕ್ಷರಜ್ಞಾನವನ್ನೂ ಲೋಕ ಜ್ಞಾನವನ್ನೂ ಹೇಳಿಕೊಡುವ ಅವರ ನವೀನ ಪದ್ಧತಿಗೆ ಆ ಶಾಲೆ ಪ್ರಯೋಗ ಕ್ಷೇತ್ರವಾಯಿತು.

ಯುವಕ ರೈತನೊಬ್ಬನ ಪರಿಚಯ ಮಾಸ್ತರಿಗಾದುದು ಆ ಸಂದರ್ಭದಲ್ಲೇ. ಆತನ ಹೆಸರು ಕಣ್ಣ. ಅವನು ಹಳ್ಳಿಯ ಹೆಣ್ಣುಗಳ ಕಣ್ಮಣಿಯಾಗಿದ್ದ. ಸೊಗಸಾದ ಮೈಕಟ್ಟು. ಕುಡಿಯೊಡೆಯುತ್ತಿದ್ದ ಮೀಸೆ. ತೇಜಸ್ಸು ತುಂಬಿದ್ದ ಕಣ್ಣುಗಳು. ಆ ಆಕರ್ಷಕ ವ್ಯಕ್ತಿತ್ವ ತಮಗಿಲ್ಲವಲ್ಲ ಎಂದು ಕರುಬುತ್ತಿದ್ದವರೆಷ್ಟೋ ಜನ. ಸಾಲದುದಕ್ಕೆ ಅವನಿಗೆ ಅಮೋಘವಾದ ಕಂಠವಿತ್ತು. ಯಾವುದಾದರೂ ಪಾಡ್ದನವನ್ನು ಆತ ತುಂಬುಸ್ವರದಿಂದ ಹಾಡಿದನೆಂದರೆ, ಜನರಷ್ಟೇ ಅಲ್ಲ ಮೃಗ-ಮರಗಳೂ ತಲೆದೂಗಿ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಿವೆಯೇನೋ ಎನಿಸುತ್ತಿತ್ತು.

ಅವನನ್ನು ಮಾಸ್ತರು ರಾತ್ರಿ ಶಾಲೆಗೆ ಕರೆದು ತಂದರು. ಓದು ಅವನಿಗೆ ಬೇಕಾಗಿರಲಿಲ್ಲ. ಹಾಡು ಎಂದಾಗ ಮಾತ್ರ ಮುಖವರಳುತ್ತಿತ್ತು. ತರಗತಿ ಆರಂಭವಾಗುವುದಕ್ಕೆ ಮುಂಚೆ ಪ್ರತಿ ರಾತ್ರಿಯೂ ಆತ ಹಾಡಿದ. ಆಗ ಇರುಳಲ್ಲಿ ಆ ಪ್ರದೇಶವೆಲ್ಲ ನಾದಮಯವಾಗಿ ಮೈಮರೆಯುತ್ತಿತ್ತು. ಆತನಿಗೆ ಮಾಸ್ತರು, ಕೇರಳದ ಶ್ರೇಷ್ಠ ಕವಿ ಕುಮಾರನ್ ಆಶಾನ್ ಬರೆದ ಕವಿತೆಗಳ ಪರಿಚಯ

ಮಾಡಿಕೊಟ್ಟರು; ಮಹಾಕವಿ ವಲ್ಲತ್ತೋಳರ ಕವನಗಳನ್ನು ತಿಳಿಯ ಹೇಳಿದರು. ಹೀಗೆ ಆ ಮಧುರ ಕಂಠ ಹೊಸ ಚೈತನ್ಯದಿಂದ ಮೈತುಂಬಿಕೊಂಡಿತು. ಕಣ್ಣ ಎಲ್ಲರ ಗೌರವಕ್ಕೂ ಪಾತ್ರನಾದ.

ತನ್ನನ್ನು ಆ ಸ್ಥಿತಿಗೆ ತಂದ ಮಾಸ್ತರರೊಡನೆ ಓದುಬಾರದ ಕಣ್ಣ ಒಂದು ದಿನ ಕೇಳಿದ:

"ಇನ್ನು ಬೇರೆ ಹಾಡುಗಳಿಲ್ಲವ ಮಾಸ್ತರೆ?"

"ಬೇಕಾದಷ್ಟಿವೆ. ಮನುಷ್ಯ ಮಾತು ಬಂದ ದಿನದಿಂದ ಹಾಡಿಲ್ವೆ? ಹಾಡು ಕಟ್ಟಿಲ್ವೆ?"

"ಹಾಗಲ್ಲ ಮಾಸ್ತರೆ...."

ಆತ ಏನು ಹೇಳಲು ಹೊರಟಿದ್ದನೆಂಬುದು ಅವರಿಗೆ ಸ್ಪಷ್ಟವಾಗಿತ್ತು. ಮನಸ್ಸಿನಲ್ಲೇ ನಕ್ಕು ಅವರೆಂದರು:

"ನೋಡಪ್ಪ ಕಣ್ಣ. ನನ್ನ ಹತ್ತಿರ ಹತ್ತು ಹಾಡಿನ ಪುಸ್ತಕಗಳಿವೆ. ಎಲ್ಲ ನಿನಗೆ ಕೊಡ್ತೇನೆ. ನೀನೇ ಇಟ್ಕೊಂಡಿರು."

ಕಣ್ಣನ ಮುಖ ಸಪ್ಪಗಾಯಿತು. ಮಾಸ್ತರು ಸಣ್ಣನೆ ನಕ್ಕರು.

"ಯಾಕೆ, ಪುಸ್ತಕ ಬೇಡ್ವೆ?"

ಉತ್ತರ ಕೊಡದೆ ಕಣ್ಣ ಹೊರಟುಹೋದ. "ಅವನಿಗೆ ಅವಮಾನವಾಯ್ತೂಂತ ತೋರ್‍ತದೆ" ಎಂದ, ಹತ್ತಿರದಲ್ಲೇ ಇದ್ದ ಚಿರುಕಂಡ.

"ಹೋಗಲಿ ಬಿಡು" ಎಂದರು ಮಾಸ್ತರು.

ಮಾರನೆಯ ರಾತ್ರಿ ಕೋರನ ಹಟ್ಟಿಗೆ ಬಂದಾಗ, ಕಣ್ಣ ನಗುಮುಖನಾಗಿರಲಿಲ್ಲ. ಹಾಡಿದಾಗ ಕಂಠವೂ ಹೃದಯದ ತಾಕಲಾಟದ ಫಲವಾಗಿ ಕಂಪಿಸಿತು. ಹಾಡು ಮುಗಿದೊಡನೆಯೇ ಆತ ಮಾಸ್ತರ ಬಳಿಗೆ ಬಂದು, ತಾನು ದೊರಕಿಸಿ ತಂದಿದ್ದ ಸ್ಲೇಟನ್ನು ಅವರ ಮುಂದಿಟ್ಟು, "ಅಕ್ಷರ ಬರಕ್ಕೊಡಿ" ಎಂದ.

ಮಾಸ್ತರು ನಗಲಿಲ್ಲ. ಸ್ಲೇಟನ್ನು ಪರೀಕ್ಷಿಸಿ ನೋಡಿ, "ಚೆನ್ನಾಗಿದೆ; ಎಲ್ಲಿಂದ ತಂದೆ?" ಎಂದರು.

"ನೀಲೇಶ್ವರದಿಂದ."

"ಓ! ಇವತ್ತು ಹೋಗಿ ತಂದಿಯಾ?"

"ಹೌದು. ಅಕ್ಷರ ಬರಕ್ಕೊಡಿ."

ಕಂಪಿಸುತ್ತಿದ್ದ ಆ ಸ್ವರದಲ್ಲಿ ಅಸಹನೆಯೂ ಬೆರತಿತ್ತು. ಮಾಸ್ತರ ಹೃದಯ ತುಂಬಿಬಂದಿದ್ದರೂ ಅದನ್ನು ತೋರಗೊಡದೆ, ಆ ಸ್ಲೇಟಿನ ಮೇಲೆ ಮೊದಲ

ಅಕ್ಷರಗಳನ್ನು ಬರೆದುಕೊಟ್ಟರು. ಸ್ಲೇಟನ್ನು ಹಿಂದಕ್ಕೆ ಕೊಟ್ಟು ಕಣ್ಣನ ಭುಜವನ್ನು ಅವರು ಮೃದುವಾಗಿ ಅದುಮಿದರು. ಆತ ತಲೆಯೆತ್ತಿ ನೋಡಿದ. ಅವನ ಎರಡು ಕಣ್ಣುಗಳಲ್ಲೂ ಕಂಬನಿ ತುಂಬಿತ್ತು.....

......ಆ ರಾತ್ರಿ—ಶಾಲೆಗೆ ಎಂದಾದರೊಮ್ಮೆ ಬೇರೆ ಹಳ್ಳಿಯ ಅಪರಿಚಿತರು ಬರುವುದಿತ್ತು. ಅವರೆಲ್ಲರನ್ನೂ ಉಪಾಧ್ಯಾಯರೆಂದೇ ಮಾಸ್ತರು ಪರಿಚಯಮಾಡಿ ಕೊಡುತ್ತಿದ್ದರು. ಹಾಗೆ ಬಂದವರು ಎಷ್ಟೋಸಾರೆ ಅಲ್ಲಿ ನೆರೆದಿದ್ದವರನ್ನು ಕುರಿತು ಲೋಕಜ್ಞಾನದ ವಿಷಯವಾಗಿ ಮಾತನಾಡುವುದಿತ್ತು.

ಈ ರೀತಿ ಬರುತ್ತಿದ್ದವರ ಮೂಲಕ ಪೆನ್ಸಿಲಿನಲ್ಲಿ ಬರೆದ ಹಾಳೆಗಳು ಕಯ್ಯೂರು ತಲುಪುತ್ತಿದ್ದವು. ಮಾಸ್ತರು ಅವುಗಳನ್ನು ಅಪ್ಪು-ಚಿರುಕಂಡರಿಗೆ ಕೊಟ್ಟು ಓದಿಸುತ್ತಿದ್ದರು; ಓದಿ ಅವರೊಡನೆ ಚರ್ಚಿಸುತ್ತಿದ್ದರು.

ಅದು ಹೋರಾಟದ 'ವಿಶಿಷ್ಟ ಸಾಹಿತ್ಯ.'

ಅಂತಹ ಒಂದು ಶಿರೋನಾಮೆ ಹೀಗಿತ್ತು: 'ರೈತ-ಕೂಲಿಕಾರರ ಕ್ರಾಂತಿಯ ಮೂಲಕವೇ ಸ್ವಾತಂತ್ರ್ಯ ಸಾಧ್ಯ!' ಮಸಕು ಮಸಕಾದ ಅಕ್ಷರಗಳು. ಆದರೂ ಅಪ್ಪು ಮತ್ತು ಚಿರುಕಂಡ ಜತೆಯಾಗಿ ಅದನ್ನೋದಿದ್ರು. ಲೇಖನದ ಮೊದಲಲ್ಲೇ ಒಂದು ಸಂಬೋಧನೆಯಿತ್ತು :'ಸಂಗಾತಿಗಳೇ!' ಆ ಪದದಿಂದ ಹೊರಟುದು ಆತ್ಮೀಯತೆಯ ಧ್ವನಿ. ಕೊನೆಯಲ್ಲೊಂದಿತ್ತು: 'ಲೋಕದೆಲ್ಲಾ ದುಡಿಯುವ ಜನರೇ ಒಗ್ಗಟ್ಟಾಗಿರಿ!' ಎಂಬ ಘೋಷ. ಆ ಸಾಲಲ್ಲೇ ರಣಘರ್ಜನೆ: 'ಸಾಮ್ರಾಜ್ಯಶಾಹಿ ನಾಶವಾಗಲಿ!' 'ಕ್ರಾಂತಿಗೆ ಜಯವಾಗಲಿ!'

ಆ ಪದಗಳ ಗುಂಯಾರವದಲ್ಲೇ ಸ್ವಲ್ಪ ಹೊತ್ತು ತನ್ಮಯನಾಗಿ ಕುಳಿತ ಅಪ್ಪು ಎಚ್ಚತ್ತು ಹೇಳಿದ:

"ನಮ್ಮದೆಲ್ಲ ಮಾತಿನಲ್ಲೇ ಮುಗೀತು ಕಣೋ. ತ್ರಿಕರಪುರಕ್ಕೆ ಹೋಗಿ ಚಂದುವನ್ನಾದರೂ ನೋಡಬಹುದಿತ್ತು. ಧಾಂಡಿಗ ಆವತ್ತು ಹೇಳಿದಹಾಗೆ ನಾವು ಬಾವೀಲಿರೋ ಕಪ್ಪೆಗಳು...."

ಪದಗಳನ್ನು ತೂಗಿ ನೋಡುತ್ತ ಚಿರುಕಂಡನೆಂದ:

"ನಾವು ಗಿಡುಗಗಳಾಗ್ಬೇಕೂಂತ ತಾನೆ ನೀನು ಹೇಳೋದು? ಆಗಲಿ; ತ್ರಿಕರಪುರ ಒಂದೇ ಏನು? ಮಡಿಕ್ಕೆಗೆ ಹೋಗೋಣ, ಪುದುಕ್ಕೆಗೆ ಹೋಗೋಣ—ನೀಲೇಶ್ವರಕ್ಕೆ, ಹೊಸದುರ್ಗಕ್ಕೆ, ಕಲ್ಲಿಕೋಟೆಗೆ, ದಿಲ್ಲಿಗೆ... ಸಾಕೇನಪ್ಪ?

ಅಪ್ಪು ಚಿರುಕಂಡನ ಕೊರಳನ್ನು ತನ್ನ ಬಲಗೈಯಿಂದ ಸುತ್ತುವರಿದು ತನ್ನೆಡೆಗೆ ಬರಸೆಳೆದ.

೯

ಅಮಾವಾಸ್ಯೆಯ ಅದೊಂದು ರಾತ್ರಿ ತರಗತಿ ಮುಗಿದು ಕೊನೆಯದಾಗಿ ಹೊರಬಿದ್ದವರು ಮಾಸ್ತರು, ಕಣ್ಣ ಮತ್ತು ಅಪ್ಪು. ಮಾಸ್ತರು ತಮ್ಮ ಶಾಲೆಯತ್ತ ತಿರುಗಿದ ಮೇಲೆ ಕಣ್ಣ-ಅಪ್ಪು ಇಬ್ಬರೇ ಹಾದಿ ನಡೆದರು.

"ನಮ್ಮನೆವರೆಗೂ ಬಾ ಅಪ್ಪು. ಅಮ್ಮ ಇವತ್ತು ಸಿಹಿಗಡುಬು ಮಾಡಿಟ್ಟಿದ್ದಾಳೆ. ತಿಂದು ಹೋಗುವಿಯಂತೆ" ಎಂದು ಕಣ್ಣ ಅಪ್ಪುವಿಗೆ ಆಹ್ವಾನ ನೀಡಿದ.

"ಬೇಡ ಕಣ್ಣ, ತಡವಾಗ್ತದೆ. ಇನ್ನೊಂದ್ಸಲ ಯಾವತ್ತಾದರೂ ಬರ್ತೇನೆ" ಎಂದು ಹೇಳಿ ಅಪ್ಪು ತಪ್ಪಿಸಿಕೊಳ್ಳಲು ಯತ್ನಿಸಿದ.

"ನೀನು ಹೀಗೆ ಹೇಳ್ತಿರೋದು ಮೂರನೆಯ ಸಲ. ಊಹುಂ, ಇವತ್ತು ನೀನು ಬಂದೇ ತೀರ್ಬೇಕು. ಕಡುಬು ತಿಂದಾದ್ಮೇಲೆ ನಿನ್ನ ಮನೆವರೆಗೂ ಬಿಟ್ಟು ಬರ್ತೇನೆ."

ಈ ಆಗ್ರಹದ ಕರೆಯನ್ನು ನಿರಾಕರಿಸಲಾರದೆ, ಅಪ್ಪು ಕಣ್ಣನನ್ನು ಹಿಂಬಾಲಿಸಿದ. ಆತನ ಗುಡಿಸಲು ಇದ್ದುದು ನದಿಯ ದಡದಲ್ಲಿ. ದೋಣಿ ನಡೆಸುತ್ತಿದ್ದ ತಂದೆ ನೀರು ಪಾಲಾದಾಗ ಕಣ್ಣ ಎಳೆ ಮಗು. ತಂದೆ ಸತ್ತ ಆ ಮಗುವನ್ನು ಬಡತಾಯಿ ಸಾಕಿ ದೊಡ್ಡವನಾಗಿ ಮಾಡಿದ್ದಳು. ಇದ್ದ ಇಷ್ಟಗಲ ಜಾಗದಲ್ಲಿ ತರಕಾರಿ ಬೆಳೆಸಿ, ನೀಲೇಶ್ವರದ ಪೇಟೆಗೊಯ್ದು ಮಾರಿ ಮಗನ ಲಾಲನೆ ಪೋಷಣೆ ನಡೆಸಿದ್ದಳು. ಮಗ ದೊಡ್ಡವನಾದ ಮೇಲೂ—ಆ ತರಕಾರಿ ತೋಟದ ಕೆಲಸವನ್ನೆಲ್ಲ ಒಬ್ಬನೆ ಮಾಡಲು ಸಮರ್ಥನಾದ ಮೇಲೂ—ಆ ತಾಯಿ ದುಡಿಯುವುದನ್ನು ಬಿಟ್ಟಿರಲಿಲ್ಲ. ನೆರೆಗೂದಲಿನ, ಸುಕ್ಕು ಮುಖದ ಆ ಜೀವ ಕಣ್ಣನನ್ನು ಈಗಲೂ ಎಳೆಯ ಮಗುವಾಗಿಯೇ ಕಾಣುತ್ತಿತ್ತು.

....ಆ ಹೊಲದ ಈ ಕೊನೆಯಲ್ಲಿ ಹಾದಿಗಳು ಕವಲೊಡೆದಿದ್ದುವು. ಎಡಕ್ಕೆ ತಿರುಗಿ ನಡೆದರೆ, ಕಣ್ಣನ ಗುಡಿಸಲು. ಆದರೆ ಕಣ್ಣ ತಿರುಗದೆ ತಡೆದು ನಿಂತು, ಬಲಕ್ಕೆ ನೋಡಿದ. ಅಲ್ಲೇ ಕೂಗಳತೆಯ ದೂರದಿಂದ ಒಂದು ಹೆಣ್ಣಿನ ಒಂದು ಗಂಡಿನ ಧ್ವನಿಗಳು ತೀವ್ರಗತಿಯಿಂದ ಕೇಳಿಸುತ್ತಿದ್ದುವು. ಕಣ್ಣ ಆಲಿಸಿದ. ಅಪ್ಪುವೂ ಕಿವಿ ನಿಗುರಿಸಿದ. ಉದ್ವೇಗದ ಜಗಳದ ನುಡಿಗಳು.... ಅಸಹಾಯಕತೆಯಿಂದ ಕಂಪಿಸುತ್ತಿದ್ದ ಹೆಣ್ಣು ಧ್ವನಿ. ಗಂಡಿನ ಕೆಣಕುತ್ತಿದ್ದ ಗಡಸುಸ್ವರ.

ಕಣ್ಣ ಕಾತರಗೊಂಡು ಕೇಳಿದ:

"ಅಪ್ಪು, ಕೇಳಿಸ್ತಾ?"

"ಹೂಂ. ಅದು ಯಾರ ಮನೆ?"

"ದೇವಕೀದು."

"ದೇವಕಿ?"

"ಹೂಂ. ಬಾ....."

ಕಣ್ಣ ಬಲಕ್ಕೆ ಹೊರಳಿ ಬಿರಬಿರನೆ ನಡೆದ. ಅಪ್ಪುವೂ ಅಷ್ಟೇ ಚುರುಕಾಗಿ ಅವನನ್ನು ಹಿಂಬಾಲಿಸಿದ. ಮಿದುಳು ಧಿಮಿಗುಡುತ್ತ ಯೋಚಿಸಿತು. ದೇವಕಿ— ಯಾರು ದೇವಕಿ? ಕಳೆದ ವರ್ಷ ವಿಷಮ ಜ್ವರದಿಂದ ಸತ್ತ ಬಡ ರೈತನ ಹೆಂಡತಿ. ಎಳೆಯ ಮಗುವಿನ ತಾಯಿ."ನಮ್ಮಮ್ಮನ ಜತೇಲಿ ದೇವಕೀಂತಲೂ ಒಬ್ಬಳು ಕಾಯಿಪಲ್ಯ ಮಾರೋಕೆ ಹೋಗ್ತಾಳೆ...." ಹಾಗೆಂದು ಸ್ವಲ್ಪ ಕಾಲದ ಹಿಂದೆ ಕಣ್ಣನೇ ಅಪ್ಪುವಿಗೆ ಹೇಳಿದ್ದ. ಹಾಗಾದರೆ, ಆ ದೇವಕಿಯನ್ನು ಜರೆದು ನುಡಿಯುವ ಗಂಡಸು ಯಾರಿರಬಹುದು?.... ಒಮ್ಮೆಲೆ, ಪರಿಸ್ಥಿತಿ ಏನಿರಬೇಕೆಂಬುದರ ಅರಿವಾಗಿ ಅಪ್ಪುವಿನ ರಕ್ತ ತಣ್ಣಗಾಯಿತು. ಆದರೆ ಮರುಕ್ಷಣವೇ ರಕ್ತ ಹಿಂದಿಗಿಂತಲೂ ಹೆಚ್ಚು ವೇಗದಿಂದ ಧುಮುಧುಮಿಸಿ ಹರಿಯಿತು.

ಕಣ್ಣ ಆ ಕತ್ತಲೆಯಲ್ಲೂ ಹಾದಿಯನ್ನು ಗುರುತಿಟ್ಟು ಮೆಲ್ಲಮೆಲ್ಲನೆ ಓಡಿದ. ಅಪ್ಪು ಆತನನ್ನೇ ಹಿಂಬಾಲಿಸಿದ.

ಆ ಗುಡಿಸಲು ಮತ್ತು ಹತ್ತಿರಲು ಸಮೀಪಿಸಿದೊಡನೆ, ಅವರು ತಡೆದು ನಿಂತರು. ಅಲ್ಲಿಗೆ ಮಾತುಗಳು ಸ್ಪಷ್ಟವಾಗಿ ಕೇಳಿಸಿದವು.

ಕಣ್ಣ ಪಿಸು ಮಾತನಾಡಿದ:

"ಅವನು ನಂಬಿಯಾರರ ಚಾಕರ, ಸ್ವರ ಗುರುತು ಹಿಡಿದ್ಯಾ?"

"ಹೂಂ."

"ಕುಡಿದಿದ್ದಾನೆ."

"ಹೂಂ."

"ಕುಡಿದಿದ್ದ ಆ ಮನುಷ್ಯ, ಬಡಗುಡಿಸಲಿನ ಬಿದಿರುತಡಿಕೆಯ ಬಾಗಿಲಿಗೆ ಒದೆಯುತ್ತಿದ್ದ.

"ಇದು ಮುರ್ದ್ಹೋದೇನೂ ದೊಡ್ಡ ವಿಷಯ ಅಲ್ಲ. ನೀನಾಗಿ ಕರಕೊಂಡ್ರೆ ಚಂದ—ಒಡೆಯ ಏಳ್ಬಿಟ್ಟಿದ್ದಾರೆ. ಅವರ ಸೇವೆ ನೀನು ಮಾಡ್ಬೇಕ್ಕುಂಚೆ.... ಹಿಕ್..."

ಒಳಗೆ, ತಾಯಿ ಎದೆಗವಚಿಕೊಂಡಿದ್ದ ಹಸುಳೆ ಅಳುತ್ತಿತ್ತು. ದೇವಕಿ ಗಟ್ಟಿಯಾಗಿ ಹೇಳುತ್ತಿದ್ದಳು:

"ದೇವರು ನಿನಗೆ ಶಿಕ್ಷೆ ಕೊಡದೆ ಇರಲಾರ ಪಾಪಿ!"

"ಇಷ್ಟು ದಿವಸ... ನೀನಾಗಿಯೇ ಹಾದಿಗ್ಬರ್‍ತೀಂತ ಕಾದದ್ದಾಯ್ತು.... ಹಿಕ್...

ಆದರೆ.... ಎಷ್ಟು ಜಂಬ ನಿನಗೆ! ಹಿಕ್.... ಅದ್ಯಾಕ್ಗೆ ಯಾರೂ ಇಲ್ದೆ ಒಬ್ಳೇ ಇರ್‍ತೀಯೆ?"

"ಇಂಥ ಮಾತಾಡಿ ನೀನು ನರಕಕ್ಕೆ ಹೋಗ್ತಿ, ನೋಡು!"

"ಹಿಕ್—ಒಮ್ಮೆ ಕರಕೊ. ಆಗ ಗೊತ್ತಾಗ್ತದೆ ಸ್ವರ್ಗವೋ ನರಕವೋ ಅಂತ."

"ದುರಾತ್ಮ!"

"ಎಷ್ಟು ಹೊತ್ತೇ? ತೆಗೀ ಕದ!"

"ನಾನು ತೆಗೆಯೋದಿಲ್ಲ."

ಮಾತನಾಡುತ್ತಿದ್ದ ಮನುಷ್ಯ ಗಟ್ಟಿಯಾಗಿ, ಗುಡಿಸಲೇ ಮುರಿದು ಬೀಳುವಂತೆ, ಬಾಗಿಲಿಗೆ ಬಡಿಯತೊಡಗಿದ. ಹೆಂಗಸು ಒಳಗಿನಿಂದ, "ಅಯ್ಯೋ ದೇವರೆ! ಅಯ್ಯೋ!" ಎಂದಳು.

ಮುಂದಕ್ಕೆ ನೆಗೆದ, ಕಣ್ಣ. ಮಾತಿಲ್ಲದೆ ಹಿತ್ತಿಲ ಬೇಲಿಯಲ್ಲಿದ್ದ ಬೊಂಬನ್ನೆಳೆದು ಅಪ್ಪುವಿನ ಕೈಗೆ ಕೊಟ್ಟ. ಅರೆಕ್ಷಣದಲ್ಲೇ ಜಮೀನ್ದಾರರ ಚಾಕರನ ಬೆನ್ನಿನ ಮೇಲೆ ಗುದ್ದು ಬಿತ್ತು; ನಡು ಮುರಿಯುವ ಹಾಗೆ ಒದೆ ಬಿತ್ತು. ಆತ ಹಿಂತಿರುಗಿ ನೋಡಿದಾಗ, ಚೇತರಿಸಿಕೊಳ್ಳುವುದಕ್ಕೂ ಅವಕಾಶವಿಲ್ಲದ ಹಾಗೆ, ಮುಸುಡಿನ ಮೇಲೆ ಮುಷ್ಟಿ ಪ್ರಹಾರ ನಡೆಯಿತು. "ಸತ್ತೆನೋ ಸತ್ತೆ" ಎನ್ನುತ್ತ ಆ ಮನುಷ್ಯ ಉರುಳಿದ. ಅಪ್ಪುವಿನ ಬೊಂಬು ಆತ ಉರುಳಿದುದೆಲ್ಲೆಂದು ಹುಡುಕಿ ನೋಡಿತು.

ಅಷ್ಟರಲ್ಲೆ ದೇವಕಿ ಬಾಗಿಲು ತೆರೆದಳು. ರಕ್ಷಣೆಗೆ ಬಂದವನು ಯಾರೆಂದು ಗುರುತಿಸುವುದು ಆ ಕತ್ತಲಲ್ಲೂ ಅವಳಿಗೆ ಕಷ್ಟವಾಗಲಿಲ್ಲ, ಅಳುತ್ತ ಕೃತಜ್ಞತೆ ತುಂಬಿದ ಧ್ವನಿಯಲ್ಲಿ ಅವಳೆಂದಳು:

"ನನ್ನಿಂದ ಎಷ್ಟೊಂದು ತೊಂದರೆ ನಿಮಗೆಲ್ಲಾ....."

ಅಪ್ಪುವಿನ ಬೊಂಬು ಬಿದ್ದಿದ್ದವನ ಬೆನ್ನನ್ನು ಮತ್ತೊಮ್ಮೆ ಮುಟ್ಟಿತು. ಆಗ ದೇವಕಿಯೆಂದಳು:

"ಆತನನ್ನು ಕೊಲ್ಬೇಡೀಪ್ಪ. ನಾಳೆ ನಮಗೆಲ್ಲಾ ಗಲ್ಲಾದೀತು!"

"ಥೂ!" ಎಂದು ಉಗಿದು ಕಣ್ಣ ಹೇಳಿದ: "ಆತನನ್ನು ಯಾರು ಕೊಲ್ತಾರೆ? ಅದೊಂದು ಕೀಟ."

ಆದರೆ ಆ ಕೀಟ ಅಲುಗುವ ಚಿನ್ಹೆ ತೋರಲಿಲ್ಲ. ಕಣ್ಣ ಬಗ್ಗಿ ನೋಡಿದ.

"ನಾಯಿಗೆ ಪ್ರಜ್ಞೆ ತಪ್ಪಿದೆ. ಒಳ್ಳೇದೇ ಆಯ್ತು. ಅಪ್ಪು, ಇವನನ್ನು ಹೊತ್ಕೊಂಡು ಸ್ವಲ್ಪ ದೂರ ಹೋಗಿ ಬಿಟ್ಟಿಡೋಣ."

"ಹೂಂ" ಎಂದ ಅಪ್ಪು.

"ದೇವಕಿ, ನೀನು ಬಾಗಿಲೆಳೆದುಕೊಂಡು ನಮ್ಮ ಗುಡಿಸಲಿಗೆ ಹೋಗ್ತೀಯಾ? ಡು ಈಗ ಬರ್ತೇವೇಂತ ಅಮ್ಮನಿಗೆ ಹೇಳು."

ಆಕೆ ಅನಿಶ್ಚಯತೆಯಿಂದ ತಡವರಿಸಿದಂತೆ ತೋರಿತು.

"ಸುಮ್ನೆ ಯೋಚಿಸ್ಬೇಡ, ಈ ಲಫಂಗರ ಕಾಟ ಇದ್ದದ್ದೇ. ಮಗೂನ ಎತ್ಕೊಂಡು ಒಂಟಿಯಾಗಿ ಹೋಗೋದಕ್ಕೆ ಆಗ್ತದೇನು? ಅಥವಾ ನಾವು ಬರುವವರೆಗೂ ಕಾದಿರ್ತೀಯೋ?"

ಗುಡಿಸಲಿನೊಳಗೆ ತೂರಾಡುತ್ತಿದ್ದ ಸೀಮೆಎಣ್ಣೆಯ ದೀಪದ ಮಬ್ಬು ಬೆಳಕಿನಲ್ಲಿ ಸಹನೆಯ ಸಂಕಟದ ಪ್ರತಿಮೂರ್ತಿಯಾಗಿ ಆಕೆ ಅಪ್ಪುವಿಗೆ ತೋರಿದಳು. ಆತನ ಗಂಟಲಿನಿಂದಲೂ ಸ್ವರ ಹೊರಟು ಹೇಳಿತು:

"ಅಕ್ಕಾ! ಇಲ್ಲಿರ್ಬೇಡಿ. ನೀವು ಕಣ್ಣನ ಮನೆಗೆ ಹೋಗಿ!"

ಸ್ವರ ಅಪರಿಚಿತವಾಗಿದ್ದರೂ ತನ್ನನ್ನು 'ಅಕ್ಕಾ' ಎಂದು ಕರೆದ ಹುಡುಗನನ್ನು ದೇವಕಿ ಆತ್ಮೀಯತೆಯಿಂದ ನೋಡಿದಳು.

ಕಣ್ಣನೂ ಅಪ್ಪುವೂ ಮುದುರಿಬಿದ್ದಿದ್ದ ಆ ಮನುಷ್ಯನನ್ನೆತ್ತಿ ನಡೆದರು. ದೇವಕಿ ಅಳು ನಿಲ್ಲಿಸಿದ ಮಗುವನ್ನೆತ್ತಿಕೊಂಡು, ಕಣ್ಣನ ಮನೆಯತ್ತ ಹೊರಟಳು.

ಸ್ವಲ್ಪ ದೂರದಲ್ಲೇ ಜಮೀನ್ದಾರರ ತೆಂಗಿನ ತೋಟ ಆರಂಭವಾಗಿತ್ತು. ಅಲ್ಲೊಂದು ತೆಂಗಿನ ಮರದ ಬಳಿ ಆ ಮನುಷ್ಯನನ್ನು ಕಣ್ಣನೂ ಅಪ್ಪುವೂ ಇಳಿಯಬಿಟ್ಟರು. ಆತನ ಪಂಚೆಯನ್ನು ಬಿಚ್ಚಿ ಆ ದೇಹವನ್ನು ಮರದ ಕಾಂಡಕ್ಕೆ ಬಿಗಿದರು. ಆತ ಸತ್ತಿಲ್ಲವೆಂದು ಮತ್ತೊಮ್ಮೆ ಖಚಿತಮಾಡಿಕೊಂಡು, ತಮ್ಮ ಹಾದಿ ಹಿಡಿದರು.

ಕಣ್ಣನ ಮನೆಯಲ್ಲೀಗ ಅಪ್ಪು ಸಿಹಿಗಡುಬು ತಿನ್ನಲಿಲ್ಲ. ಅಲ್ಲಿ ಆತ ನಿಲ್ಲಲೇ ಇಲ್ಲ. ದೀಪದ ಬೆಳಕಿನಲ್ಲಿ ದೇವಕಿಯನ್ನೂ ಮಗುವನ್ನೂ ಮತ್ತೊಮ್ಮೆ ನೋಡಿದಾಗ, ಯಾವುದೋ ಭಾವಾವೇಶದಿಂದ ಅಪ್ಪುವಿನ ಕಣ್ಣುಗಳು ಹನಿಗೂಡಿದವು. ಆತ "ನಾಳೆ ಸಿಗ್ತೇನೆ ಕಣ್ಣ" ಎಂದು ಹೇಳಿ, ಕತ್ತಲಲ್ಲಿ ಒಬ್ಬನೇ ತನ್ನ ಮನೆಯತ್ತ ಹೊರಟುಹೋದ.

ಮನೆಯಲ್ಲಿ ಊಟ ಮುಗಿಸಿ ಮಲಗುವ ಸಿದ್ಧತೆಯಲ್ಲಿದ್ದ ತಂದೆಯಿಂದ ಪ್ರಶ್ನೆ ಬಂತು:

"ಯಾಕೋ ಇಷ್ಟು ತಡ?"

ಅಪೂರ್ವವಾದೊಂದು ಅನುಭವದ ತೆರೆಗಳ ಮೇಲೆಯೇ ಇನ್ನೂ ತೇಲುತ್ತಿದ್ದ ಅಪ್ಪು ಉತ್ತರವೀಯಲಿಲ್ಲ.

"ಬೆಳಕಾದರೂ ಹಿಡಕೊಂಡು ಬರಬಾರ್ದೇನೊ? ರಾತ್ರೆ ದೆವ್ವದ ಹಾಗೆ ಒಬ್ನೇ ನಡೀತಿಯಲ್ಲ?"

ಈಗಲೂ ಮಗ ಮೌನವಾಗಿದ್ದುದನ್ನು ಕಂಡು, ಆತನಿಗೆ ಊಟಕ್ಕಿಡುತ್ತಿದ್ದ ತಾಯಿ ಹೇಳಿದಳು:

"ಹುಡುಗ ಒಂದು ಬ್ಯಾಟರಿ ತೆಗೆಸ್ಕೊಡೂಂತ ಹೋದ ವರ್ಷವೇ ಹೇಳಿದ್ದ."

"ಇವನೊಬ್ಬ ಬ್ಯಾಟರಿ ಹಿಡಕೊಂಡು ಬೇಟೆಗೆ ಹೊರಡೊ ದೊಡ್ಡ ಮನುಷ್ಯ. ತೆಗೆಸಿಕೊಡ್ಬೇಕಾಗಿತ್ತು."

ತಂದೆ ಹಾಗೆ ಆಡುತ್ತಿದ್ದರೂ ಆ ಹೃದಯ ಮೃದುವಾಗಿತ್ತೆಂದು ಅಪ್ಪು ಚೆನ್ನಾಗಿ ತಿಳಿದಿದ್ದ.

"ದುಡ್ಡಿರ್ಲಿಲ್ಲ" ಎಂದಳು ತಾಯಿ ಮೆಲ್ಲನೆ ನಕ್ಕು.

"ಹೂಂ—" ಎಂದು ತಂದೆ ಮಾತು ನಿಲ್ಲಿಸಿದ.

....ಮಲಗಿಕೊಂಡು ಬಹಳ ಹೊತ್ತಾದರೂ ಅಪ್ಪುವಿಗೆ ನಿದ್ದೆ ಬರಲಿಲ್ಲ. ಆ ಪ್ರಾಣಿ ಎಲ್ಲಾದರೂ ಸತ್ತೇಹೋದರೆ? ನಾಳೆ ಗೊಂದಲವಾಗುವುದು ಖಂಡಿತ. ಆದರೆ, ಅವನು ಸತ್ತಹಾಗಿರಲಿಲ್ಲ. ಉಸಿರೂ ಸ್ವಲ್ಪ ಆಡುತ್ತಿತ್ತು.... ಅಂತೂ ಬೆಳಗ್ಗೆ ಓಡಿ ಹೋಗಿ ಚಿರುಕಂಡನಿಗೆ ಈ ವಿಷಯ ಹೇಳಬೇಕು; ಇಬ್ಬರೂ ಹೋಗಿ ಮಾಸ್ತರರಿಗೂ ತಿಳಿಸಬೇಕು... ಆ ಕಣ್ಣ ಎಷ್ಟು ಒಳ್ಳೆಯವನು! ದೇವಕಿ ಕೂಡಾ— ಆ ಎಳೆಯ ಮಗುವೂ....

ಈ ರೀತಿಯ ಯೋಚನೆಯಲ್ಲೆ ಅಪ್ಪು ನಿದ್ರಿಸಿದ.

.....ರಾತ್ರೆ ಕಳೆಯಿತು. ನಸುಕಿನಲ್ಲೆ ಎದ್ದು ಅಪ್ಪು ಜಮೀನ್ದಾರರ ಚಾಕರನನ್ನು ತಾವು ಕಟ್ಟಹಾಕಿದ್ದ ದಿಕ್ಕಿಗೆ ಓಡಿ, ದೂರದಲ್ಲಿ ನಿಂತು, ಆ ಮರದತ್ತ ದೃಷ್ಟಿ ಹರಿಸಿದ. ಮರದ ಬುಡದಲ್ಲಿ ಏನೂ ಇರಲಿಲ್ಲ. ಆ ಮನುಷ್ಯ ಎದ್ದು ಹೋಗಿದ್ದನೆಂಬುದು ಸ್ಪಷ್ಟವಾಗಿತ್ತು. ಅಪ್ಪುವಿಗೆ ಹೃದಯ ಹಗುರವೆನಿಸಿತು. ಹಕ್ಕಿಯ ವೇಗದಲ್ಲಿ ಚಿರುಕಂಡನ ಮನೆಗೆ ಹೋಗಿ ಆತನನ್ನು ಎಬ್ಬಿಸಿದ.

ಉದ್ವೇಗ ತುಂಬಿದ ಧ್ವನಿಯಲ್ಲಿ ಅಪ್ಪು ಒಪ್ಪಿಸಿದ ವರದಿ ಕೇಳಿ, ಚಿರುಕಂಡನ ಮುಖ ಗಂಭೀರವಾಯಿತು. ಎತ್ತ ಹೋಗಬೇಕೆಂದು ಅವರು ಮಾತನಾಡದೆ ಇದ್ದರೂ, ಇಬ್ಬರ ಕಾಲುಗಳೂ ಮಾಸ್ತರಲ್ಲಿಗೇ ನಡೆದವು. ಗೆಳೆಯನ ಮೌನ ಕಂಡು ಒಂದು ರೀತಿಯ ದಿಗಿಲಾಗಿ ಹಾದಿಯಲ್ಲಿ ಅಪ್ಪು ಕೇಳಿದ:

"ನಾವು ಹಾಗೆ ಮಾಡಿದ್ದು ತಪ್ಪಾಯ್ತಾ?"

ಚಿರುಕಂಡ ಯೋಚಿಸುತ್ತಿದ್ದುದೂ ಆ ವಿಷಯವನ್ನು ಕುರಿತೇ

"ತಪ್ಪೇನೂ ಅಲ್ಲ. ಆದರೂ ಹೆಚ್ಚು ಕಡಿಮೆ ಆಗಿದ್ದರೆ, ಆ ಸಣ್ಣ ಕಾರಣದಿಂದ ನಮಗೆಲ್ಲರಿಗೂ ಗಂಡಾಂತರ ಒದಗ್ತಿತ್ತು."

ಕ್ರಾಂತಿಕಾರಿ ಎಂದು ತಾನು ಭಾವಿಸಿದ್ದ ಈ ಚಿರುಕಂಡ ಅಂಜುಗುಳಿಯೇ—ಎಂಬ ಶಂಕೆ ಅಪ್ಪುವಿನ ಮನಸ್ಸನ್ನು ಹೊಕ್ಕು, ಕಣ್ಣುಗಳ ಕಾವು ಆರಿ, ಅವು ತಣ್ಣಗಾದುವು. ಆತ ಕೇಳಿದ : "ಅಂದರೆ?"

"ರಾತ್ರಿ ಶಾಲೆ ನಡೆಸೋದು ನಂಬಿಯಾರಿಗೆ ಏನೇನೂ ಇಷ್ಟವಿಲ್ಲ. ಏನಾದರೂ ನೆಪ ಸಿಕ್ಕಿದ್ರೂಡ್ನೆ ಅವರು ಇದನ್ನು ನಿಲ್ಲಿಸ್ಬಹುದೂಂತ ಮಾಸ್ತರು ಹೇಳಿದ್ರು. ರಾತ್ರಿ ಕಣ್ಣನೂ ನೀನೂ ಸಿಕ್ಕಿಬಿದ್ದಿದ್ರೆ ನಂಬಿಯಾರಿಗೆ ಎಷ್ಟು ಸಂತೋಷವಾಗ್ತಿತ್ತೊ! ಹೀಗೆ ಈ ಸಣ್ಣ ವಿಷಯಕ್ಕೇ ದೊಡ್ಡ ಹೊಡೆತ ಬಿದ್ದರೆ, ಬೇರೆ ಕೆಲಸಕ್ಕೆಲ್ಲ ಅಡ್ಡಿಯಾಗ್ತಿತ್ತು. ಹೌದಾ?"

ಅಪ್ಪುವಿನ ಕಣ್ಣುಗಳು ಮತ್ತೆ ಚಲಿಸಿದುವು: ಚಿರುಕಂಡ ಅಂಜುಗುಳಿಯಾಗುವುದು ಎಂದಿಗೂ ಸಾಧ್ಯವಿರಲಿಲ್ಲ. ಆತ ವಿಚಾರವಂತ, ದೂರಾಲೋಚನೆಯುಳ್ಳವನು. ಆದೊಂದು ವಿಷಯ ತನಗೆ ಹೊಳೆದೇ ಇರಲಿಲ್ಲ....

ಅಪ್ಪು ನುಡಿದ:

"ನೀನು ಹೇಳೋದು ನಿಜ. ಆದರೆ ಆತ ಬದುಕಿದ್ದಾನೆ. ಈಗೇನೂ ಆಗಲಾರದು, ಅಲ್ವೆ? ಅಲ್ದೆ, ನಾವು ಯಾರು ಅನ್ನೋದೂ ಅವನಿಗೆ ಗೊತ್ತಾಗಿರೋದಿಲ್ಲ."

"ಹೂಂ. ಈಗ ಅಪಾಯ ಕಮ್ಮಿ. ಆದರೂ ನಂಬಿಯಾರಿಗೆ ಕಣ್ಣನ ಮೇಲೆ ಸಂಶಯ ಬಂದೇಬರ್ತದೆ. ಅವರು ಬೇಟೆಯಾಡೋಕೇಂತ ಗುರುತು ಹಾಕಿದ್ದ ಮಿಕ, ದೇವಕಿ. ಈಗ ಆಕೆ ಕೈಗೆ ಸಿಗೋದಿಲ್ಲಾಂತ ಆದ್ಮೇಲೆ, ಸುಮ್ಮಿರ್ತಾರಾ?"

ಚಿರುಕಂಡನ ಆ ಎಣಿಕೆಯೂ ಅಪ್ಪುವಿಗೆ ನಿಜವಾಗಿ ತೋರಿತು. ನೆಮ್ಮದಿ ನೀಡುವ ಉತ್ತರ ತೋರದೆ ಅವನ ಮನಸ್ಸು ಕಸಿವಿಸಿಗೊಂಡಿತು.

..... ಶಾಲೆ ಸೇರಿ, ಅದರ ಹಿಂಭಾಗದಲ್ಲಿದ್ದ ಮಾಸ್ತರ ಕೊಠಡಿಯತ್ತ ಅವರು ನಡೆದರು. ಆದರೆ ಕಣ್ಣ ಅಲ್ಲಿಗೆ ಬಂದಿದ್ದ. ಹಾಸಿಗೆ ಇನ್ನೂ ಮಡಚಿಯೇ ಇರಲಿಲ್ಲ. ಅದರ ಮೇಲೆಯೇ ಕುಳಿತು ಬೀಡಿ ಸೇದುತ್ತ ಕಣ್ಣನ ಮಾತುಗಳಿಗೆ ಮಾಸ್ತರು ಕಿವಿಗೊಟ್ಟಹಾಗಿತ್ತು. ಹುಡುಗರು ಒಳಕ್ಕೆ ಬಂದಾಗ ಅವರತ್ತ ನೋಡಿ, ಅಪ್ಪುವನ್ನು ದಿಟ್ಟಿಸಿ, ಮಾಸ್ತರು ಮುಗುಳು ನಕ್ಕರು. ಗಾಬರಿ ತಾಂಡವವಾಡದೆ ಮಾಸ್ತರ ತುಟಿಗಳ ಮೇಲೆ ನಗೆ ಕುಣಿದುದನ್ನು ಕಂಡು, ಅಪ್ಪುವಿಗೆ ಸಮಾಧಾನವಾಯಿತು. ಅವರಿಬ್ಬರೂ ಹಾಸಿಗೆಯ ಬಳಿ ನೆಲದ ಮೇಲೆ ಕುಳಿತರು. ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ.

ಯೋಚಿಸುತ್ತಿದ್ದುದು ಮುಗಿದು, ಮಾಸ್ತರು ಮೌನವನ್ನು ಮುರಿದರು:

"ಕಣ್ಣ, ನೀನೇನೂ ಚಿಂತಿಸ್ಬೇಡ. ಅವರಿಗೆ ಸಂಶಯ ಬಂದೇ ಬಂದೀತು. ಆದರೆ ನೀನು, ಏನೂ ಆಗೇ ಇಲ್ಲ ಅನ್ನೋಹಾಗೆ ಇದ್ದುಬಿಡು."

ಈ ಒಂದು ವಿಷಯ ಪ್ರಾಯಶಃ ಇವರಿಗೆ ತಿಳಿದಿರಲಾದೆಂದು ಅಪ್ಪುವೆಂದ:

"ಅವನು ಅಲ್ಲಿಲ್ಲ. ಎದ್ದು ಹೋಗಿದ್ದಾನೆ."

"ಹೂಂ. ನಸುಕಿನಲ್ಲೇ ಹೋದ. ಕುಂಟಕೊಂಡು ಜಮೀನ್ದಾರರ ಮನೆ ಕಡೆ ಹೋದದ್ದನ್ನು ನಾನೇ ನೋಡ್ದೆ" ಎಂದ ಕಣ್ಣ.

ಮಾಸ್ತರು ಕಣ್ಣನ ಮುಖವನ್ನೇ ನೋಡುತ್ತ ಇನ್ನೊಂದು ಪ್ರಶ್ನೆ ಕೇಳಿದರು:

"ದೇವಕಿ ಸ್ವಲ್ಪ ದಿವಸ ನಿಮ್ಮನೇಲೇ ಇರ್ಲಿ, ಆಗ್ದಾ?"

ಕಣ್ಣನ ಮುಖ ಬಣ್ಣ ಬದಲಿಸಿತು. ಆತ ದೃಷ್ಟಿ ತಗ್ಗಿಸಿ ನೆಲವನ್ನು ನೋಡಿದ.

"ಆಗಲಿ. ಅಮ್ಮನಿಗೆ ಹೇಳ್ತೇನೆ."

"ಹಾಗೆ ಮಾಡು. ಇಲ್ಲದೆ ಹೋದರೆ ಅವಳು ಮರ್ಯಾದೆಯಿಂದ ಬದುಕುವುದಕ್ಕೆ ಈ ಜನ ಖಂಡಿತ ಬಿಡೋದಿಲ್ಲ."

ಕಣ್ಣ ತಲೆಯೆತ್ತಿ ಮಾಸ್ತರನ್ನೇ ನೋಡಿದ. ತುಟಿಗಳು ಬಿಗಿದು ಅವನ ಮುಖ ಬೀಗಿತ್ತು. ಆತ ಎದ್ದು ನಿಂತು ಹೊರಕ್ಕೆಳೆದ. ನಡಿಗೆಯಲ್ಲಿ ಆತುರ ಇರಲಿಲ್ಲವಾದರೂ ಹೆಜ್ಜೆಗಳು ಭದ್ರವಾಗಿದ್ದುವು.

ಮಾಸ್ತರು ಎದ್ದು ಹಾಸಿಗೆ ಸುರುಳಿ ಸುತ್ತಿದರು. ಹುಡುಗರತ್ತ ನೋಡಿ ನಕ್ಕರು. ಬಾಗಿ, ಅಪ್ಪುವಿನ ಬೆನ್ನಿಗೆ ಮೆಲ್ಲನೆ ಗುದ್ದಿ ಅಂದರು:

"ಏನೋಂತಿದ್ದೆ. ಅಂತೂ ಪರವಾಗಿಲ್ಲ ನೀನು!"

ಒಳಗಿನ ಎದೆಗುದಿಯೆಲ್ಲವೂ ಮಾಯವಾಗಿ, ಅಪ್ಪು ಉಲ್ಲಾಸಗೊಂಡ. ಚಿರುಕಂಡನ ಮುಖದಲ್ಲೂ ಗೆಲವು ಮೂಡಿತು. ರಾತ್ರೆಯ ಘಟನೆಯನ್ನು ಮಾಸ್ತರಿಗೆ ವಿವರಿಸಿ ಹೇಳಬೇಕೆಂಬ ಆಸೆಯಿಂದ ಅಪ್ಪು ಕೇಳಿದ:

"ಕಣ್ಣ ಎಲ್ಲಾ ಹೇಳಿದನಾ, ಸರ್?"

"ಹೂನಪ್ಪಾ, ಆದರೇನು?—ನೀನೂ ಒಂದ್ಸಲ ಹೇಳೀಯಂತೆ. ನಾನು ಮುಖ ತೊಳೆಯೋ ತನಕ ಕಾದಿರ್ಬೇಕು—ಅಷ್ಟೆ!"

ಶಿಷ್ಯನಲ್ಲಿ ಸ್ವಂತದ ಸಾಧನೆಗಳನ್ನು ಬಣ್ಣಿಸುವ ಚಪಲ ಹೇರಳವಾಗಿತ್ತು ಎಂಬುದು ಮಾಸ್ತರಿಗೆ ಚೆನ್ನಾಗಿ ಗೊತ್ತಿತ್ತು.

ಬಹುಶಃ ಚಿರುಕಂಡ ಊಹಿಸಿದಷ್ಟು ಪರಿಸ್ಥಿತಿ ಗಂಭೀರವಾಗಿರಲಾರದೆಂದು ಅಪ್ಪು ಭಾವಿಸಿದ. ಆದರೆ ಆ ಭಾವನೆ ಬಲವಾಗುವುದಕ್ಕೆ ಮೊದಲೆ ಮಾಸ್ತರರೆಂದರು:

"ಇಂಥದ್ದೆಲ್ಲ ನಾವು ನಿರೀಕ್ಷಿಸೋದಕ್ಕೆ ಮುಂಚೆಯೇ ಬರ್‍ತದೆ. ಏನೂ ಮಾಡದೇ ಇರೋದು ಹೇಡಿತನ. ಮಾಡಿದ್ದೇನಾದರೂ ಅತಿಯಾದರೆ ಈವರೆಗಿನ ಕೆಲಸಕ್ಕೆಲ್ಲ ಧಕ್ಕೆ. ಇದೊಳ್ಳೆ ಸಂದಿಗ್ಧ."

ಮತ್ತೆ ಹೃದಯ ವೇಗವಾಗಿ ಹೊಡೆದುಕೊಳ್ಳತೊಡಗಿ ಅಪ್ಪು ಹೇಳಿದ:

"ಮುಂದೇನಾದೀತು ಸರ್ ?"

"ಈಗ್ಲೇ ಹ್ಯಾಗೆ ಹೇಳೋಣ? ಆದರೂ ಕಣ್ಣನನ್ನು ಅವರು ಸುಮ್ನೆ ಬಿಡೋದಿಲ್ಲ. ದೇವಕಿಗೆ ಆಶ್ರಯ ಕೊಟ್ಟಿದ್ದಕ್ಕೆ ಅವನಿಗೆ ಕಷ್ಟ ಒದಗಿಯೇ ಒದಗ್ತದೆ."

ಮಾಸ್ತರು ಹೊರಹೋಗಿ ಒಂದು ಮಾವಿನೆಲೆ ತಂದು, ಅದನ್ನ ಸೀಳಿ ಸುರುಳಿ ಸುತ್ತಿ ಹಲ್ಲುಜ್ಜಿದರು. ಅವರು ಹೇಳಿದುದೂ ಚಿರುಕಂಡ ಊಹಿಸಿದ್ದುದೂ ಹೆಚ್ಚು ಕಡಿಮೆ ಒಂದೇ ಆಗಿದ್ದುವು.

ಮಾಸ್ತರು ಮುಖ ತೊಳೆದು ಬಂದಾಗ ಘಟನೆಯ ವರದಿ ಕೊಡುವ ಉತ್ಸಾಹವೇ ಅಪ್ಪುವಿಗಿರಲಿಲ್ಲ. ಆತನ ಮುಖ ಬಾಡಿತ್ತು.

ಸ್ವಲ್ಪ ಹೊತ್ತು ಮಾಸ್ತರು ಸುಮ್ಮನಿದ್ದು ಹೇಳಿದರು:

"ಅನ್ಯಾಯವನ್ನು ಪ್ರತಿಭಟಿಸುವವರು ಈ ಹಳ್ಳಿಯಲ್ಲಿದ್ದಾರೆ ಅಂತ ಇನ್ನು ಜನಕ್ಕ ಗೊತ್ತಾಗ್ತದೆ. ನಿನ್ನೆ ನಡೆದ ವಿಷಯ ಬಹಿರಂಗವಾಗಿ ಯಾರೂ ಮಾತಾಡದೆ ಇರಬಹುದು. ಆದರೆ ಗುಟ್ಟಾಗಿ ಅದು, ಕಿವಿಯಿಂದ ಕಿವಿಗೆ ಸಂಚಾರ ಮಾಡಿಯೇ ಮಾಡೀತು. ಜನ, ಎದ್ದು ನಿಲ್ಲೋದೆ ಹೀಗೆ. ನಿನ್ನೇದು ವೈಯಕ್ತಿಕ ಪ್ರಶ್ನೆ. ಆದರೆ ಮುಂದೆ ಸಾಮೂಹಿಕ ಪ್ರಶ್ನೆ ಬಂದಾಗಲೂ ನಮ್ಮ ಜನ ಇಂಥದೇ ಧೈರ್ಯ ಸಾಹಸ ತೋರಿಸ್ಬೇಕು."

ಹಿಂದಿನ ರಾತ್ರೆ ನಡೆದುದರ ವಿಷಯವಾಗಿ, 'ಇದು ಹೀಗೆ' 'ಇದು ಹಾಗೆ' ಎಂದು ತೀರ್ಪುಕೊಟ್ಟು, ನಾಳೆ ನಡೆಯುವುದರ ಮುನ್ಸೂಚನೆಯನ್ನಿತ್ತ ಹಾಗಿತ್ತು, ಅವರ ಮಾತು.

ಮತ್ತೊಂದು ಬೀಡಿ ಹಚ್ಚಿ ಮಾಸ್ತರೆಂದರು:

"ಇನ್ನು ಹೋಗಿ. ಜಮೀನ್ದಾರರ ಕಡೆಯೋರು ಯಾರಾದರೂ ಬಂದರೂ ಬರಬಹುದು. ನೀವಿಲ್ಲಿ ಸಪ್ಪೆಮೋರೆ ಹಾಕಿ ನಿಂತಿರೋದು ಸರಿಯಲ್ಲ. ಏನೂ ಆಗ್ದೆ ಇರೋಹಾಗೆ, ಏನೂ ಗೊತ್ತಿಲ್ದೆ ಇರೋರಹಾಗೆ, ಇದ್ಬಿಡಿ. ಸ್ವಲ್ಪ ಹೊತ್ತಾದ್ಮೇಲೆ ಚಿರುಕಂಡ, ಹೋಟೆಲಿನ ಹತ್ತಿರ ಸುಮ್ನೆ ಹೋಗಿರು. ಜನ ಏನೇನು ಮಾತು ಆಡ್ತಾರೆ ಅನ್ನೋದು ಗೊತ್ತಾಗ್ತದೆ."

ಹುಡುಗರು ಹೊರಟುಹೋದರು. ಸೂರ್ಯ ನೆತ್ತಿಗೇರಿದ. ಅಪ್ಪು ತೇಜಸ್ವಿನಿಯ ತಣುಪು ನೀರಿನಲ್ಲಿ ಮೈಮರೆಯಲು ಹೋದ ಮೇಲೆ, ಚಿರುಕಂಡ ಜನ ಆಡುವ ಮಾತುಗಳಿಗೆ ಕಿವಿಗೊಡುತ್ತ ಸುತ್ತಾಡಿದ.

ನಂಬಿಯಾರರ ಆ ಬಾಕರ ದುರ್ನಡತೆಯವನೆಂದು ಕುಖ್ಯಾತನೇ ಆಗಿದ್ದ. ಹಿಂದಿನ ರಾತ್ರಿ ಯಾರ ಮನೆಗೊ ಹೋಗಿ ಆತ ಮಂಗಳಾರತಿ ಮಾಡಿಸಿ ಕೊಂಡನೆಂಬ ಸುದ್ದಿ ಹರಡಿತು. ಅದನ್ನು ಕೇಳುತ್ತ ಜನ ನಕ್ಕರು. ಆ ಮಾತುಕತೆಯಲ್ಲೆಲ್ಲ ನಂಬಿಯಾರರ ಪ್ರಸ್ತಾಪವೇ ಇರಲಿಲ್ಲ...

.....ಮಾರನೆಯ ದಿನ ಅಲ್ಲಲ್ಲಿ ದೇವಕಿಯ ಹೆಸರು ಕೇಳಿಬಂತು. ನಗೆ ಮಾತು, ಪ್ರಶ್ನಾರ್ಥಕ ಚಿಹ್ನೆಯಾಗಿ ಗಂಟಿಕ್ಕಿದ ಹುಬ್ಬು, ಸಹಾನುಭೂತಿಯ ಧ್ವನಿ, ಬಳಿಕ ಅವರ ಸಂಭಾಷಣೆಯೊಳಗೆ ನುಸುಳಿಕೊಂಡ ಕಣ್ಣ. ಅರ್ಥಪೂರ್ಣ ನೋಟಗಳು.

ಬೀಸಿದ್ದ ಬಿರುಗಾಳಿ ಶಮನವಾಗಿರಲಿಲ್ಲ. ಶಾಂತತೆ ನೆಲಸಿದ್ದಂತೆ ಕಂಡರೂ ಒಮ್ಮೆಲೆ ಗಾಳಿ ಗಿಡುಗನಂತೆ ಎರಗಿಬಂದು ತರಗೆಲೆಗಳನ್ನೆತ್ತಿಕೊಂಡು ಏರುವ ಹಾಗೆ, ಮಾತುಗಳು ಕೇಳಿಬಂದುವು.

ಜಮೀನ್ದಾರರಿಂದ ಮಾಸ್ತರಿಗೆ ಕರೆಬಂತು. ದೇವಕಿಯ ಹೆಸರನ್ನೇ ಎತ್ತದೆ ಅವರು ಹೇಳಿದರು :

"ರಾತ್ರೆ ಹೊತ್ತು ನಮ್ಮ ಒಬ್ಬ ಆಳಿಗೆ ಕಣ್ಣ ಅಂತ ಯಾವನೋ ಹೊಡೆದನಂತೆ."

ಅದೇ ಮೊದಲ ಬಾರಿ ಆ ವಿಷಯ ಕೇಳಿದವರಂತೆ ಮಾಸ್ತರೆಂದರು:

"ಹಾದೇನು? ಕಣ್ಣನ? ರಾತ್ರಿ ಶಾಲೆಗೆ ಕಣ್ಣ ಅಂತ ಒಬ್ಬ ಬರ್ತಿರ್ತಾನೆ. ಯುವಕ."

ನಂಬಿಯಾರರು ಮಾಸ್ತರ ಪ್ರಾಮಾಣಿಕತೆಯನ್ನು ತೂಗುವಂತೆ ಸೂಕ್ಷ್ಮ ನೋಟದಿಂದ ನೋಡಿದರು:

"ಅವನೇ. ಈ ಕಯ್ಯೂರಿನಲ್ಲಿ ಬೇರೆ ಕಣ್ಣ ಯಾವನಿದ್ದಾನೆ? ನನಗೆ ಗೊತ್ತಿಲ್ವ?"

"ಏನು ವಿಷಯ ಅಂತ ವಿಚಾರಿಸ್ತೇನೆ."

"ನೀವೇನು ವಿಚಾರಿಸ್ತೀರಿ ಮಾಸ್ತರೆ? ವಿಚಾರಣೆ ಮಾಡೋದೆಲ್ಲ ನನಗೆ ಬಿಟ್ಬಿಡಿ. ಏನು ಕ್ರಮ ತಗೋಬೇಕು ಅನ್ನೋದನ್ನು ನಾನೇ ಇತ್ಯರ್ಥ ಮಾಡ್ತೇನೆ. ನಿಮ್ಮ ರಾತ್ರಿ ಶಾಲೆಗೆ ಆತ ಬರ್ತಾ ಇರ್ತಾನಲ್ಲ—ಅದಕ್ಕೋಸ್ಕರ ಅವನ ವಿಷಯದಲ್ಲಿ ನಿಮಗಿಷ್ಟು ಎಚ್ಚರಿಕೆ ಹೇಳೋಣಾಂತ ಕರೆದೆ. ನೀವಿನ್ನು ಹೋಗ್ಬಹುದು."

ಸಂಭಾಷಣೆ ಚುಟುಕಾಗಿ ಮುಗಿದುದು ಅನಿರೀಕ್ಷಿತವಾಗಿತ್ತು. ಮಾಸ್ತರು ಎದ್ದು ನಿಂತರು.

ಅವರು ಹೊರಡುತ್ತಿದ್ದಂತೆ ನಂಬಿಯಾರರು ಕೊನೆಯ ಮಾತೆಂದರು:

"ಅವರೆಲ್ಲಾ ಪೋಲಿಗಳು. ಪೋಲಿಗಳ ಸಹವಾಸದಿಂದ ನಿಮಗೆ ತೊಂದರೆಯಾಗಬಾರ್ದು ಮಾಸ್ತರೆ. ನಿಮ್ಮ ಕೆಲಸಕ್ಕೆ ಅಡ್ಡಿಯಾಗಬಾರ್ದು. ತಿಳೀತೆ?"

ಗಂಟಲು ಒಣಗಿದ್ದರೂ ಮಾಸ್ತರು ಪ್ರಯತ್ನಪಟ್ಟು, "ಹೂಂ ಬರ್ತೇನೆ ನಮಸ್ಕಾರ" ಎಂದರು.

ಅನಂತರದ ನಾಲ್ಕಾರು ದಿನಗಳಲ್ಲೂ ಕಣ್ಣನಿಗೇನೂ ಆಗಲಿಲ್ಲ. ಅದೊಂದು ರೀತಿಯಲ್ಲಿ ಆಶ್ಚರ್ಯದ ವಿಷಯವಾಗಿತ್ತು. ತಮಗಾದ ಅವಮಾನವನ್ನು ನುಂಗಿಕೊಂಡು ನಂಬಿಯಾರರೆಂದೂ ಸುಮ್ಮನೆ ಕುಳಿತವರಲ್ಲ. ಈಗ ತಮಗೆ ಇದಿರಾದವನು ಒಬ್ಬ ವ್ಯಕ್ತಿ ಮಾತ್ರವಲ್ಲ ಎಂಬ ಅಸ್ಪಷ್ಟ ಭೀತಿಯೇ, ದುಡುಕದಂತೆ ಅವರನ್ನು ತಡೆಹಿಡಿದಿರಬೇಕೆಂದು ಮಾಸ್ತರು ಯೋಚಿಸಿದರು. ಈಗ ಪ್ರತಿ ರಾತ್ರೆಯೂ ಅವರು ಕಾಣುತ್ತಿದ್ದುದು ನಿರುತ್ಸಾಹಿಯಾದ ಕಣ್ಣನನ್ನು. ಆತನ ಮುಖ ನಿಸ್ತೇಜವಾಗಿರುತ್ತಿತ್ತು. ಆ ಹೃದಯದೊಳಗಿನ ಸಂಕಟವನ್ನು ಸ್ವಲ್ಪಮಟ್ಟಿಗೆ ಸರಿಯಾಗಿಯೇ ಮಾಸ್ತರು ಊಹಿಸಿದ್ದರು. ಆದರೆ, ಅದಕ್ಕೆ ಇಂತಹದೇ ಪರಿಹಾರವೆಂದು ಬಾಯಿ ತೆರೆದು ಸಲಹೆ ಮಾಡಲು ಅವರು ಹಿಂಜರಿದರು.

ಆ ಹೃದಯದ ಗೊಂದಲವೇನೆಂಬುದನ್ನೂ ಆ ಮೆದುಳಿನಲ್ಲಿ ಸುಳಿಯುತ್ತಿದ್ದ ವಿಚಾರಗಳನ್ನೂ ಮೊದಲು ತಿಳಿದವನು ಅಪ್ಪು. ಸ್ನಾನಕ್ಕೆಂದು ನದಿಗೆ ಹೋಗಿದ್ದ ಆತ, ಕಲ್ಲುಬಂಡೆಯ ಮೇಲೆ ಒಬ್ಬಂಟಿಗನಾಗಿಯೆ ಕುಳಿತಿದ್ದ ಕಣ್ಣನನ್ನು ಕಂಡ. ಇಬ್ಬರೂ ನೀರಿಗಿಳಿದು ಈಸಿದರು, ಮಿಂದರು. ಆದರೆ ಮನದಣಿಯುವವರೆಗೂ ನೀರಲ್ಲಿರಲು ಇಬ್ಬರಿಗೂ ಆಸಕ್ತಿ ಇರಲಿಲ್ಲ. ದಡವನ್ನೇರಿ ಅವರು ಬಿಸಿಲಲ್ಲಿ ಮೈ ಕಾಯಿಸಿದರು.

ಕಣ್ಣನನ್ನೇ ದಿಟ್ಟಿಸಿ ಅಪ್ಪು ಕೇಳಿದ :

"ಯಾಕೋ ಸಪ್ಪಗಿದ್ದೀಯಲ್ಲಣ್ಣ?"

ಆ ಪ್ರಶ್ನೆಗೆ ಉತ್ತರವಿರಲಿಲ್ಲ. ಆದರೆ ಸ್ವಲ್ಪ ಹೊತ್ತು ತಡೆದು ಕಣ್ಣ ಕೇಳಿದ:

"ಮಾಸ್ತರು ನನ್ನ ವಿಷಯ ಏನಾದರೂ ಹೇಳಿದರಾ?"

"ಇಲ್ವಲ್ಲ!"

ಮತ್ತೂ ಮೌನ ಅಪ್ಪುವಿನ ಸಹನೆಯನ್ನು ಪರೀಕ್ಷಿಸಿತು.

"ನಾನು ಈ ಊರು ಬಿಟ್ಟು ಹೋಗ್ಬೇಕೂಂತ ಮಾಡಿದ್ದೇನೆ ಅಪ್ಪು. "

ಅಪ್ಪು ನಿರೀಕ್ಷಿಸಿದುದಕ್ಕಿಂತಲೂ ಕೆಟ್ಟುದಾಗಿತ್ತು ಉತ್ತರ.

"ಯಾಕಣ್ಣ?"

"ನಿನಗೆ ಗೊತ್ತಾಗಲ್ವ? ಇಲ್ಲಿರೋದು ಕಷ್ಟವಾಗ್ತದೆ. ಜನ ಏನೇನು

ಮಾತಾಡ್ತಿದ್ದಾರೆ? ನನಗೆ ಕಿವಿ ಇಲ್ವೇನು? ಕೇಳಿಸೋಲ್ವೇನು?"

ಅದು ಕಣ್ಣ-ದೇವಕಿಯರಿಗೆ ಸಂಬಂಧಿಸಿದ ಮಾತುಕತೆ. ವಯಸ್ಸಿನಲ್ಲಿ ಕಿರಿಯವನಾದ ತಾನು ಈ ವಿಷಯ ಏನು ಹೇಳಬೇಕೆಂದು ತಿಳಿಯದೆ ಅಪ್ಪು ತಡವರಿಸಿದ. ಆದರೂ, ಏನೂ ಹೇಳದೆ ಸುಮ್ಮನಿರುವುದು ಸರಿ ಎನಿಸದೆ ಆತನೆಂದ:

"ಅದನ್ನೆಲ್ಲ ನೀನು ಮನಸ್ಸಿಗೆ ಹಚ್ಕೊಬಾರ್ದು. ಜನ ಎಲ್ರೂ ಕೆಟ್ಟೋರೆ ಇರ್ತಾರ?"

ಅದು ಮಾಸ್ತರಿಂದ ಅಪ್ಪು ಕಲಿತಿದ್ದ ಪಾಠ. ಎಲ್ಲ ಜನರೂ ಯಾವಾಗಲೂ ಕೆಟ್ಟವರಲ್ಲ. ಜನರಲ್ಲಿ ಒಳ್ಳೆಯವರೂ ಇರ್ತಾರೆ, ಕೆಟ್ಟವರೂ ಇರ್ತಾರೆ, ಅತಿ ಕೆಟ್ಟವರ ಸಂಖ್ಯೆಯಂತೂ ಬಹಳ ಕಡಮೆ.....

"ದೇವಕಿ ಹೀಗೇ ಇರೋಕಾಗೋದಿಲ್ಲ ಅಪ್ಪು. ಅವಳ್ನ ನಾನು ಮದುವೆಯಾಗ್ತೇನೆ."

ಆ ಉತ್ತರ ಕೇಳಿದಾಗ ಅಪ್ಪುವಿನ ಒಳಗೇನೋ ಕುಪ್ಪಳಿಸಿತು. ತನಗೆ ತಿಳಿದ ರೀತಿಯಲ್ಲಿ ಆತನೂ ಆ ವಿಷಯ ಯೋಚಿಸಿದ್ದ. ದೇವಕಿಯನ್ನು ಕಣ್ಣ ಮದುವೆಯಾದರೆ ಸಮಸ್ಯೆ ಬಹಳ ಮಟ್ಟಿಗೆ ಬಗೆಹರಿಯುವುದೆಂದು ಆತನಿಗೆ ತೋರಿತ್ತು. ಆದರೆ ದೇವಕಿ ವಿಧವೆ, ಎಳೆಯ ಮಗುವಿನ ತಾಯಿ, ಆದರೂ....

ಕಣ್ಣನೇ ಮಾತು ಮುಂದುವರಿಸಿದ:

"ಕಾಸರಗೋಡಿಗೊ ಕಣ್ಣಾನೂರಿಗೊ ಹೋಗಿ ಕೂಲಿಯಾಗ್ತೇನೆ. ಈ ಊರಿನ ನೀರಿನ ಋಣ ಮುಗೀತೂಂತ ತಿಳೀತೇನೆ."

ಆತನ ಕಂಠ ಗದ್ಗದಿತವಾಗಿ ಕಣ್ಣಿನ ಅಂಚಿನಲ್ಲಿ ನೀರು ತುಳುಕಾಡಿತು. ನೀರಿನ ಋಣ—ಎನ್ನುವ ಮಾತೆಲ್ಲ ಸಾಂಪ್ರದಾಯಿಕ. ಅಪ್ಪುವಿಗೆ ಅದು ಗೊತ್ತಿತ್ತು. ಆ ಮಾತಿನ ಹಿಂದಿನ ಭಾವನೆಯ ಆಳವೂ ಆತನಿಗೆ ಅರಿವಾಗುತ್ತಿತ್ತು.

"ಯಾಕೆ ಹಾಗೆ ಹೇಳ್ತೀಯಾ? ಈ ಊರು ಬಿಟ್ಟು ಯಾಕೆ ಹೋಗ್ಬೇಕು?"

"ಮತ್ತೆ ಇಲ್ಲಿ ಬದುಕೋದಕ್ಕೆ ಬಿಡ್ತಾರೇಂತ ತಿಳಿದ್ಯೇನು?"

ಆ ದೌರ್ಬಲ್ಯದ ಧ್ವನಿ ಅಪ್ಪುವಿಗೆ ಏನೇನೂ ಇಷ್ಟವಾಗಲಿಲ್ಲ.

"ನಾವು ಇಷ್ಟೊಂದು ಜನ ಇರುವಾಗ ನಿನಗೆ ಯಾವ ಭಯ? ದುಡಿದು ಬದುಕುವ ಜನ ಯಾರಿಗೆ ಯಾಕೆ ಹೆದರ್ಬೇಕು? ನಾವು ಒಗ್ಗಟ್ಟಾಗಿದ್ದರೆ—"

ಸಾವಿರ ಸಾರೆ ಕೇಳಿದ, ನೂರು ಸಾರೆ ತಾನೇ ಹೇಳಿದ್ದ ಮಾತನ್ನೇ ಇಲ್ಲಿ ಪುನರುಚ್ಚರಿಸುತ್ತಿದ್ದೇನೆಂದು ಅಪ್ಪುವಿಗೆ ಮನವರಿಕೆಯಾಯಿತು. ಅದು ಮೂಲಮಂತ್ರ: ಒಗ್ಗಟ್ಟು—ಜನರ ಐಕ್ಯ. ಆ ಮಾತುಗಳನ್ನು ಆಡಿದ್ದ ನಿಜ. ಆದರೆ

ಕಣ್ಣನ ಮೇಲೆ ಅದು ಅಪೇಕ್ಷಿಸಿದಷ್ಟು ಪರಿಣಾಮ ಬೀರಿದಂತೆ ತೋರಲಿಲ್ಲ. ಒಡನೆಯೆ ಮಾಸ್ತರ ನೆನಪಾಗಿ ಆತ ಕೇಳಿದ:

"ಮಾಸ್ತರಿಗೆ ಹೇಳಿದ್ಯಾ?"

"ಇಲ್ಲ."

"ಮತ್ತೆ? ಹೇಳೋದು ಬೇಡವಾ ?"

"ಹೇಳೋದಕ್ಕೆ ಒಂದು ರೀತಿಯ ಸಂಕೋಚ ಅಪ್ಪು. ಅವರು ಏನು ಅಂದ್ಕೊಳ್ತಾರೋ ?"

"ಛೆ! ಛೆ! ಒಳ್ಳೇ ಹೇಳ್ದೆ! ಇಂಥಾದ್ದೆಲ್ಲ ಅವರಿಗೆ ತಿಳಿಸದೆ ಇರೋದಕ್ಕಾಗ್ತದಾ?"

ಎರಡು ನಿಮಿಷ ಸುಮ್ಮನಿದ್ದು ಶಾಂತಸ್ವರದಲ್ಲಿ ಕಣ್ಣ ಹೇಳಿದ:

"ಮಾಸ್ತರ ಎದುರು ಕೂತಾಗ ನನಗೆ ಮಾತೇ ಬರೋದಿಲ್ಲ. ನೀನೊಂದು ಕೆಲಸ ಮಾಡ್ತೀಯಾ ಅಪ್ಪು? ನನ್ನ ಮನಸ್ಸಿನಲ್ಲಿ ಏನಿದೆ ಅನ್ನೋದನ್ನ ಮಾಸ್ತರಿಗೆ ಹೇಳ್ತೀಯಾ?"

"ಹೂಂ" ಎಂದ ಅಪ್ಪು. ತನ್ನಲ್ಲಿ ವಿಶ್ವಾಸವಿಟ್ಟು ಕಣ್ಣ ಅಂತಹ ಕೆಲಸ ಒಪ್ಪಿಸಿದನೆಂದು ಆತನಿಗೆ ಸಂತೋಷವಾಯಿತು.....

.....ಮಾಸ್ತರಿಗೆ ಆಶ್ಚರ್ಯವಾಗಲಿಲ್ಲ. ಕಣ್ಣ ದೇವಕಿಯನ್ನು ಮದುವೆಯಾದರೆ ಒಳಿತಾಗುವುದೆಂದು ಅವರು ಆ ಮೊದಲೇ ಯೋಚಿಸಿದ್ದರು. ಆದರೆ ಕಣ್ಣ ಮತ್ತು ದೇವಕಿಯ ಮನಸ್ಸನ್ನು ತಿಳಿಯದೆ ಏನನ್ನೂ ಹೇಳುವುದು ಸರಿಯಲ್ಲವೆಂಬುದು ಅವರ ಅಭಿಪ್ರಾಯವಾಗಿತ್ತು. ಮದುವೆಗೆ ಕರುಣೆ ಸಹಾನುಭೂತಿ ಮಾತ್ರ ಸಾಲದು. ಗಂಡು ಹೆಣ್ಣು ಪರಸ್ಪರ ನೀಡುವ ಒಲವೂ ಬೇಕು—ಎಂದು ನಂಬಿದ್ದ ಮಾಸ್ತರು, ಕಣ್ಣನಿಂದಲೇ ಈ ಪ್ರಸ್ತಾಪ ಬರುವವರೆಗೂ ತಾವು ಸುಮ್ಮನಿರಬೇಕು ಎಂದು ಕೊಂಡಿದ್ದರು. ಈಗ ವಿಷಯ ಸ್ಪಷ್ಟವಾದುದಕ್ಕಾಗಿ ಅವರಿಗೆ ಸಮಾಧಾನವಾಯಿತು.

ತನ್ನ ಪಾಲಿಗೆ ವ್ಯಾಕುಲಕ್ಕೆ ಕಾರಣವಾಗಿದ್ದೊಂದು ಮಾತನ್ನು ಅಪ್ಪು ಹೇಳಿದ:

"ಮದುವೆ ಆದ್ಮೇಲೆ ಊರುಬಿಟ್ಟು ಹೋಗ್ತೇನೇಂತ ಕಣ್ಣ ಮಾತಾಡ್ತಿದ್ದ."

ಮಾಸ್ತರಿಗೆ ಸೋಜಿಗವೆನಿಸಲಿಲ್ಲ.

"ವ್ಯಥೆಯಾದಾಗ ಹಾಗೆ ಮಾತಾಡೋದು ಸ್ವಾಭಾವಿಕ. ನಾನು ಅವನಿಗೆ ಹೇಳ್ತೇನೆ."

....ಆ ರಾತ್ರಿಯೆ ಮಾಸ್ತರು ಕಣ್ಣನನ್ನು ಕರೆದು ಪ್ರತ್ಯೇಕವಾಗಿ ಮಾತನಾಡಿದರು. ಪರಿಣಾಮವಾಗಿ; ಬಹಳ ದಿನಗಳ ಬಳಿಕ ಕಣ್ಣ ಮತ್ತೊಮ್ಮೆ ಹಸನ್ಮುಖಿಯಾದ. ಕೊಯ್ದ ಕಣ್ಣುಗಳು ಮಿನುಗಿದುವು. ತುಟಿಗಳ ಮೇಲೆ ನಗೆ ಮತ್ತೆ ಕಾಣಿಸಿಕೊಂಡಿತು.

ರಾತ್ರಿ ಶಾಲೆಯ ತರಗತಿ ಮುಗಿಯುವ ಹೊತ್ತಿಗೆ ಅಲ್ಲಿದ್ದವರನ್ನು ಉದ್ದೇಶಿಸಿ

ಮಾಸ್ತರು ಹೇಳಿದರು:

"ಈಗ ನಿಮಗೊಂದು ಸಂತೋಷದ ವಿಷಯ ಹೇಳ್ತೇನೆ. ನಮ್ಮ ಶಾಲೆಯ ವಿದ್ಯಾರ್ಥಿ ಕಣ್ಣ ನಿಮಗೆಲ್ಲರಿಗೂ ಪರಿಚಿತಳೇ ಆಗಿರುವ ದೇವಕಿಯನ್ನು ಮದುವೆಯಾಗಲಿದ್ದಾರೆ. ಈ ಶುಭಕಾರ್ಯ ಆದಷ್ಟು ಬೇಗನೆ ಜರಗಿ ನಿಮಗೆಲ್ಲರಿಗೂ ಭೂರಿ ಭೋಜನ ಸಿಗುವಂತಾಗಲಿ ಅನ್ನೋದೆ ನಮ್ಮ ಹಾರೈಕೆ. ಅಲ್ಲವೇನ್ರಪ್ಪಾ? ಬೇರೇನು ಹೇಳೋಣ?"

ಕುಳಿತವರಿಂದ, ಪಿಸುಪಿಸು ಗುಜುಗುಜು ಮಾತು, ಮೆಚ್ಚುಗೆಯ ಉದ್ಗಾರಗಳು ಹೊರಟುವು.....

.....ಒಂದು ಕಾಲದಲ್ಲಿ ಎಳೆಯ ಮಗುವನ್ನೆತ್ತಿಕೊಂಡು ತಾನೂ ಪಾಡು ಪಟ್ಟಿದ್ದ ಕಣ್ಣನ ವಿಧವೆ ತಾಯಿ ಮದುವೆಗೆ ಆಕ್ಷೇಪಿಸಲಿಲ್ಲ. ಗುಣವತಿಯಾದ ರೂಪವತಿಯಾದ ದೇವಕಿ ತನ್ನ ಸೊಸೆಯಾಗುವಳೆಂದು ಮುದುಕಿಗೆ ಹೆಮ್ಮೆಯೆ ಆಯಿತು.

ಮದುವೆ ಹೆಚ್ಚಿನವೆಚ್ಚವಿಲ್ಲದೆ ನಡೆಯಿತು. ಆ ಸಮಯದಲ್ಲಿ ಹಿರಿಯನಾಗಿ ಓಡಾಡಿದವನು ಚಿರುಕಂಡನ ತಂದೆ. ಒಂದು ಕಾಲದಲ್ಲಿ ಸಾಧುಪ್ರಾಣಿಯಾಗಿ ಮೂಕನಾಗಿರುತ್ತಿದ್ದ ಈತ, ಪುನರ್ಜನ್ಮ ಪಡೆದ ಹೊಸ ಮನುಷ್ಯನ ಹಾಗೆ ಲವಲವಿಕೆಯಿಂದಿದ್ದುದು, ಬೆರಗುಗೊಳಿಸುವ ಸಂಗತಿಯಾಗಿತ್ತು. ಜಮೀನ್ದಾರರು ಕೆಂಗಣ್ಣು ಉರಿಯುತ್ತಿದ್ದಂತೆಯೇ. ಅವರ ನಂಬುಗೆಯ ಚಾಕರ ತನ್ನ ಸೊಂಟವನ್ನಿನ್ನೂ ಮುಟ್ಟಿ ನೋಡುತ್ತಿದ್ದಂತೆಯೇ. ಕಣ್ಣ-ದೇವಕಿ ಗಂಡ ಹೆಂಡತಿಯಾದರು. ಮಾಸ್ತರು ಮದುವೆಯ ಸಮಯದಲ್ಲಿ ಅತ್ತ ಸುಳಿಯದೆ ಇದ್ದರೂ, ರಾತ್ರಿ ಊಟಕ್ಕೆ ತಪ್ಪದೆ ಬಂದರು.

ಕಣ್ಣನ ಸೂಚನೆಯಂತೆ, ಮಾಸ್ತರ ಒಪ್ಪಿಗೆ ಪಡೆದು ಕೋರ, ತನ್ನ ಹಟ್ಟಿಯನ್ನು ಬಿಟ್ಟು, ಈಗ ತೆರವಾಗಿದ್ದ ದೇವಕಿಯ ಗುಡಿಸಲಿಗೆ ಬಂದು ನೆಲಸಿದ. ರಾತ್ರಿ ಶಾಲೆಗೆ ಬರುತ್ತಿದ್ದ ರೈತರು ಅಲ್ಲಿ ಇಲ್ಲಿ ಆ ಗುಡಿಸಲನ್ನು ದುರಸ್ತಿಪಡಿಸಿ ಮತ್ತಷ್ಟು ಭದ್ರಗೊಳಿಸಿದರು.

ಕಣ್ಣ ಕಯ್ಯೂರಿನವನಾಗಿಯೇ ಉಳಿದ. ಕೇಳಿ ಕಲಿತ, ಓದಿ ಕಲಿತ, ಹಳೆಯ ಹೊಸ ಹಾಡುಗಳೆಲ್ಲವನ್ನು ಈಗಲೂ ಆತನ ಚೇತನಕಂಠ ಹಾಡಿತು.

ಹಳ್ಳಿಯ ಹುಡುಗಿಯರು ಯುವತಿಯರು ದೇವಕಿಯದಾದ ಆ ಒಡವೆಯನ್ನು ಇನ್ನೂ ನೋಡಿದರು. ಆದರೆ ನೋಟದಲ್ಲೀಗ ಆಕ್ರಮಣದ ಆಕಾಂಕ್ಷೆ ಇರಲಿಲ್ಲ; ಆಸೆ ಇರಲಿಲ್ಲ.

# ೧೦

ಕಾಲ ಎಂದಿನಂತೆ ಕಳೆಯಿತು. ರೈತರ ಪಾಲಿಗೆ ಅದು ಉರುಳುತ್ತಿದ್ದುದು ಒಂದೇ ಬಗೆಯಾಗಿ. ನಿಸರ್ಗದ ನಿಯಮದಂತೆ ಬಂದು ಹೋಗುತ್ತಿದ್ದ ಋತುಗಳು. ಋತುಗಳಿಗೆ ಅನುಗುಣವಾಗಿ ಉಳುಮೆ, ಬಿತ್ತನೆ, ಕುಯಿಲು, ಒಂದೋ ಹೆಚ್ಚು ಬೆಳೆ, ಇಲ್ಲ ಕಡಮೆ ಬೆಳೆ, ಸ್ವಲ್ಪ ಸುಖ, ಇಲ್ಲವೆ ಹೆಚ್ಚು ಸಂಕಟ. ಅವರಲ್ಲಿ ಬಹು ಜನರ ಸಾಮಾನ್ಯ ದೃಷ್ಟಿಗೆ ಕಾಣಿಸುತ್ತಿದ್ದುದು ನೀರಸವಾದ ಏರಿಳಿತವಿಲ್ಲದ ಬದುಕು. ಮನುಷ್ಯ ಹುಟ್ಟುತ್ತಾನೆ, ಬೆಳೆಯುತ್ತಾನೆ, ಸಾಯುತ್ತಾನೆ. ಹಿಂದೆಯೂ ಹಾಗಾಗುತ್ತಿತ್ತು. ಈಗಲೂ ಹಾಗಾಗುತ್ತಿದೆ. ಮುಂದೆಯೂ ಅಷ್ಟೆ. ಆದರೆ ಬೇರೆ ಕೆಲವರಿದ್ದರು. ಹೊಸ ವಿಚಾರಗಳ ಸಾಣೆಗೆ ಮೆದುಳನ್ನು ತೀಡಿ ನೋಡಿದವರು. ಬದುಕು ಯಾಕೆ ಹೀಗಿದೆ ಎಂಬುದು ಅವರಿಗೆ ತಿಳಿದಿತ್ತು. ಅದನ್ನು ಹಸನುಗೊಳಿಸಬೇಕೆಂಬ ಬಲವತ್ತರವಾದ ಆಸೆ ಆ ಜನಕ್ಕೆ. ಯಾವಾಗ ಹಾಗೆ ಮಾಡುವೆವೋ ಎಂಬ ತವಕ. ಕಾಲ ಬಲು ನಿಧಾನವಾಗಿ ಉರುಳುತ್ತಿದೆ, ಎಂದು ಅವರು ಆಕ್ಷೇಪಿಸುತ್ತಿದ್ದರು.

ಅಪ್ಪು ಮತ್ತು ಚಿರುಕಂಡ ಈಗ 'ಬರಿಯ ಪೋರರು' ಎಂದು ತಾತ್ಸಾರ ಮಾಡಬಹುದಾದ ಎಳೆಯರಲ್ಲ. ವರ್ಷವರ್ಷವೂ ಮಳೆಗಾಲದಲ್ಲಿ ಚಿಗುರಿ ಬಲಿತ ಹಾಗೆ ಅವರು ಬೆಳೆದಿದ್ದರು.

"ಹುಡುಗ ದೊಡ್ಡವನಾದ" ಎನ್ನುತ್ತಿದ್ದಳು ಕಲ್ಯಾಣಿ, ತೆಳ್ಳಗೆ ಎತ್ತರಕ್ಕೆ ಬೆಳೆದಿದ್ದ ಮಗ ಚಿರುಕಂಡನನ್ನು ನೋಡುತ್ತ. ಎಲ್ಲಾದರೂ ಹೆಣ್ಣು ನೋಡುತ್ತಿರಬೇಕು— ಎಂಬ ಪರೋಕ್ಷ ಸೂಚನೆಯೇ ಆ ಮಾತಿನ ಅರ್ಥ. ಆದರೆ ದಿನಹೋದಂತೆ ಎಳೆಯನಾಗುತ್ತ ನಡೆದಿದ್ದ ಆಕೆಯ ಗಂಡನಿಗೆ ಅದರ ಲಕ್ಷ್ಯವಿರಲಿಲ್ಲ.

ನೋಡಲು ಅಪ್ಪುವೇ ಕಟ್ಟಾಳು. ತಾಯಿ ಬ್ಯಾಟರಿಯನ್ನೂ ಕೊಡಿಸಿದ್ದಳು; ಚಪ್ಪಲಿಯನ್ನೂ ಕೊಡಿಸಿದ್ದಳು. ರಾತ್ರೆ ವಿಶೇಷ ಕೆಲಸವೇನೂ ಇಲ್ಲದೆ ಹೊರಹೋದಾಗ ಅಪ್ಪು ಬ್ಯಾಟರಿ ಉಪಯೋಗಿಸುತ್ತಿದ್ದ. ಮಂದ ಪ್ರಕಾಶದ ಒಂದು ಬ್ಯಾಟರಿ ಕಂಡೊಡನೆ ಅದು ಅಪ್ಪುವಿರಬೇಕೆಂದು ಊರವರ ನಂಬಿಕೆ. ಆದರೆ, ವಿಶಿಷ್ಟವಾದ ಯಾವುದಾದರೂ ಕೆಲಸಕ್ಕಾಗಿ ಹೊರಬಿದ್ದಾಗ ಅಪ್ಪು ಅದನ್ನು ಉಪಯೋಗಿಸುತ್ತಿರಲಿಲ್ಲ. ಗೋಪ್ಯ ಚಲನವಲನಕ್ಕೆ ಹಾಗಿರುವುದೇ ಅನುಕೂಲವಾಗಿತ್ತು. ಚಪ್ಪಲಿಯ ವಿಷಯದಲ್ಲೂ ಅಷ್ಟೆ. ಚಿರುಕಂಡನಿಗೆ ಇಲ್ಲದ್ದು ತನಗೆ ಯಾಕೆ? ಎಂದಿದ್ದ ಅಪ್ಪು. "ಹೆಚ್ಚು ಓಡಾಡುವವನು ನೀನೋ? ನಾನೋ?

ಮುಜುಗರ ಮಾಡದೆ ತಗೋ" ಎಂದು ಚಿರುಕಂಡ ಒತ್ತಾಯಿಸಿದ್ದ. ಆದರೆ ಗುಪ್ತವಾಗಿ ಬರುತ್ತಿದ್ದ ಮಾಸ್ತರರ ಸ್ನೇಹಿತರನ್ನು ಕರೆತರುವುದಕ್ಕೋ ಬಿಟ್ಟುಬರುವುದಕ್ಕೋ ರಾತ್ರಿ ಹೊತ್ತು ಹೊರಬಿದ್ದಾಗ, ಅಪ್ಪು ಚಪ್ಪಲಿ ಉಪಯೋಗಿಸುತ್ತಿರಲಿಲ್ಲ, ಸದ್ದಾಗಬಾರದೆಂದು.

ಪದೇ ಪದೇ ಅಪ್ಪು ಮಾಸ್ತರನ್ನು ಕೇಳುತ್ತಿದ್ದ:

"ಯಾವಾಗ ಸರ್ ಸಂಘ ಕಟ್ಟೋದು? ಯಾಕೆ ಸರ್ ತಡ?"

ಅವರು ಬಾರಿಬಾರಿಗೂ ಸಮಾಧಾನ ಹೇಳುತ್ತಿದ್ದರು:

"ಇನ್ನೂ ಸ್ವಲ್ಪ ತಡಿಯಪ್ಪ. ಕಬ್ಬಿಣ ಕಾದಾಗ ಅಲ್ವ ಹೊಡೀಬೇಕು?"

ಒಂದು ದಿನ ಅಪ್ಪು ಮಾಸ್ತರು ಒಪ್ಪಿಸಿದ ಕೆಲಸದ ಮೇಲೆ ಆ ತಾಲೂಕಿನ ಕೇಂದ್ರವಾದ ಹೊಸದುರ್ಗಕ್ಕೆ ಹೋಗಿ ಬಂದ. ಅಲ್ಲಿ ಒಂದು ಮನೆಯಲ್ಲಿ ಗುಪ್ತವಾಗಿದ್ದ ಪಂಡಿತರು ಆತನಿಗೆ ಕಾಣಲು ಸಿಕ್ಕಿದರು. ಅಪ್ಪು ಅಷ್ಟು ದೂರ ಪ್ರವಾಸ ಮಾಡಿದುದು ಅದೇ ಮೊದಲು. ಒಪ್ಪೊತ್ತಿನ ದಾರಿಯಾದರೂ, ಅದು ನೂರಾರು ಮೈಲಿಯ ಹಾದಿ ಎನ್ನುವಂತೆ ಅಪ್ಪುವಿಗೆ ಭಾಸವಾಗಿತ್ತು.

ಅಲ್ಲಿ ಆತನನ್ನು ಕಂಡ ಧಾಂಡಿಗ ಹೇಳಿದ:

"ಭೂಮಿ ಗೋಳವಾಗಿದೆ ಅನ್ನೋದಕ್ಕೆ ಇನ್ನೊಂದು ಸಾಕ್ಷ್ಯ ಇವತ್ತು ನನಗೆ ಸಿಕ್ತು."

ನಗೆ ಮಾತಿಗೆ ಇದು ಪೀಠಿಕೆ ಎಂದು ತಿಳಿದರೂ ಅದೇನೆಂದು ಅರ್ಥವಾಗದೆ ಅಪ್ಪು ಕೇಳಿದ:

"ಯಾವುದು ಹೇಳಿ?...."

"ಬೇರೆ ಬೇರೆ ಹಾದಿಯಿಂದ ಹೊರಟರೂ ನಾವು ಆಗಾಗ್ಗೆ ಒಬ್ಬರನ್ನೊಬ್ಬರು ಸಂಧಿಸ್ತಾನೇ ಇದ್ದೇವೆ !"

ಅಪ್ಪು ನಕ್ಕ. ಆಮೇಲೆ ಒಂದು ಮಾತು ಸೇರಿಸಿದ:

"ಇಷ್ಟು ದೂರ ಬಂದಿದ್ದೇನೆ. ಇನ್ನು ಕಯ್ಯೂರಿನವರನ್ನು ಕಪ್ಪೆಗಳೂಂತ ಹೇಳ್ಬೇಡಿ !"

ಹುಬ್ಬುಗಳನ್ನು ಹಣೆಯ ನಡುವೆಗೊಯ್ದು ಸರ್ಕಸಿನ ವಿದೂಷಕನಂತೆ ಕಣ್ಣು ಹೊರಳಿಸುತ್ತ ಧಾಂಡಿಗ "ಅಪ್ಪಣೆ" ಎಂದ.

..... ಕಯ್ಯೂರಿಗೆ ಹಿಂತಿರುಗಿ ಮಾಸ್ತರಿಗೆ ಪ್ರವಾಸದ ವರದಿಯನ್ನೊಪ್ಪಿಸುತ್ತ ಅಪ್ಪು ಹೇಳಿದ:

"ಹೊಸದುರ್ಗದಲ್ಲಿ ಬಹಳ ಜನ ಕನ್ನಡ ಮಾತಾಡ್ತಾರೆ."

ಮಾಸ್ತರು ಆತನಿಗೆ ಮತ್ತೊಮ್ಮೆ ಭೂಗೋಳ ಪಾಠದ ನೆನಪು ಮಾಡಿ ಕೊಟ್ಟರು:

"ಹೌದು. ಇನ್ನೂ ಉತ್ತರಕ್ಕೆ ಹೋದ ಹಾಗೆ ಕನ್ನಡವೇ ಜಾಸ್ತಿ. ಅದೆಲ್ಲ ಕರ್ನಾಟಕ. ದಕ್ಷಿಣಕ್ಕೆ ಹೋದರೆ ಅದೆಲ್ಲ ಕೇರಳ. ನಮ್ಮ ಪ್ರದೇಶ ನಿಜವಾಗಿ ಮಲಬಾರಿಗೆ ಸೇರಬೇಕು. ಆದರೆ ಇಂಗ್ಲಿಷಿನವರು ಬೇಕುಬೇಕೆಂದೇ ಕರ್ನಾಟಕಕ್ಕೆ ಸೇರಿಸಿದ್ದಾರೆ, ಯಾಕೆ ಹೇಳು?"

"ಕನ್ನಡಿಗರೂ ಮಲೆಯಾಳಿಗಳೂ ಪರಸ್ಪರ ಜಗಳ ಆಡ್ತಾ ಇರ್ಲಿ೦ತ.

"ಸರಿ ಹೇಳ್ದೆ."

......ಚಿರುಕಂಡ ಎಷ್ಟೋ ವೇಳೆ ಬೇರೆಯ ರೀತಿಯ ಕೆಲಸದಲ್ಲಿ ನಿರತನಾಗುತ್ತಿದ್ದ. ಯಾರ ಮನೆಯಲ್ಲಾದರೂ ಬಚ್ಚಿಟ್ಟುಕೊಂಡು, ಮಾಸ್ತರು ಒದಗಿಸುತ್ತಿದ್ದ ಲೇಖನಗಳನ್ನು ಪ್ರತಿಮಾಡುತ್ತಿದ್ದ. ಬೇರೆ ಹಳ್ಳಿಗೋ ಊರಿಗೋ ಸಂಬಂಧಿಸಿದ ಕರಪತ್ರಗಳನ್ನು ಬರೆದು ಪ್ರತಿ ತೆಗೆದು ಸಿದ್ಧಗೊಳಿಸುತ್ತಿದ್ದ. ಹಾಗೆ ಬರೆದು ಬರೆದು ಕೈ ಸೋಲುತ್ತಿತ್ತು, ಆಯಾಸವಾಗುತ್ತಿತ್ತು. ಆಗ ತೋಳನ್ನೇ ದಿಂಬಾಗಿ ಮಾಡಿ ಸ್ವಲ್ಪ ಹೊತ್ತು ನಿದ್ದೆಹೋಗುತ್ತಿದ್ದ. ಹಾಗೆ ಐದೇ ನಿಮಿಷ ಕಳೆದರೂ ಎಷ್ಟು ಹೊತ್ತಾಯಿತೋ ಏನೋ ಎಂದ ಗಡಬಡಿಸಿ ಏಳುತ್ತಿದ್ದ. ಎದ್ದ ಮೇಲೆ ಮತ್ತೆ ಬರವಣಿಗೆ ಮುಂದುವರಿಯುತ್ತಿತ್ತು.

ತ್ರಿಕರಪುರದ ಚಂದುವಾಗಲೇ, ಅಪ್ಪು ಚಿರುಕಂಡರ ಪಾಲಿಗೆ 'ನಮ್ಮವ'ನಾಗಿದ್ದ. ಚಂದುವಿನ ಬೀಡಿಯಂಗಡಿ, ಚಳುವಳಿಯ ಒಂದು ಕೊಂಡಿಯಾಯಿತು. ಆ ಸಂಬಂಧಿಗೆ ಅಪ್ಪು ಹೇಳಿದ್ದ:

"ನಮ್ಮದಿನ್ನು ಇಮ್ಮಡಿ ಬಾಂಧವ್ಯ ಚಂದು. ಒಂದು ಮನೆತನದ ಸಂಬಂಧ; ಇನ್ನೊಂದು ಅದಕ್ಕಿಂತಲೂ ಗಾಢವಾದ ರಕ್ತ ಸಂಬಂಧ."

ಕರಪತ್ರಗಳ ಕಟ್ಟನ್ನು ಅಲ್ಲಿಗೆ ಒಯ್ದು ಮುಟ್ಟಿಸಿದಾಗಲೆಲ್ಲ, ಹೇಳಬಾರದೆಂಬ ನಿಯಮವನ್ನು ಸ್ವಲ್ಪ ಮಟ್ಟಿಗೆ ಮುರಿದೇ ಚಂದುವಿಗೆ ಅಪ್ಪು ತಿಳಿಸುತ್ತಿದ್ದ:

"ಇದೆಲ್ಲ ಚಿರುಕಂಡ ಬರೆದದ್ದು ಕಣೋ."

ಆದರೆ ಈವರೆಗೂ ಚಿರುಕಂಡನನ್ನು ನೋಡದೆ ಇದ್ದ ಚಂದುವಿಗೆ ಅಷ್ಟರಿಂದ ತೃಪ್ತಿಯಾಗುತ್ತಿರಲಿಲ್ಲ. ಒಮ್ಮೆ ಆತನೆಂದ:

"ಪ್ರತಿ ಸಾರಿಯೂ ಅದನ್ನೇ ಹೇಳ್ತೀಯ. ಒಂದ್ಸಲ ಕರಕೊಂಡು ಬರಬಾರ್ದೇನು?"

ಒಬ್ಬೊಬ್ಬರದು ಒಂದೊಂದು ಜವಾಬ್ದಾರಿ ಎಂಬ ನಿಯಮವನ್ನು ಉದ್ವೇಗ ತುಂಬಿದ ಮೆಲುದನಿಯಲ್ಲಿ ವಿವರಿಸಿ ಅಪ್ಪು ಹೇಳಿದ:

"ತಾಳು. ಈ ಪ್ರದೇಶದ ನಮ್ಮವರೆಲ್ಲ ಗುಪ್ತವಾಗಿ ಒಂದೆಡೆ ಸೇರುವ ಪ್ರಮೇಯ ಬರ್ತದೆ. ಆಗ ನೋಡುವೆಯಂತೆ."

"ಅದು ಯಾವತ್ತೊ?"

"ಯಾವತ್ತೂಂತ ಈಗ್ಲೆ ಹ್ಯಾಗೆ ಹೇಳೋಣ? ಕಬ್ಬಿಣ ಕಾದಾಗ ಅಲ್ವ ಹೊಡೆಯೋದು?"

ಮಾಸ್ತರು ತನಗೆ ಹೇಳಿದ್ದನ್ನೇ ಅಪ್ಪು ಚಂದುವಿಗೆ ಹೇಳಿದ್ದ. ಅದು ಪರಿಣಾಮ ಬೀರಿತು.

"ಬೇರೆ ಮುಖಂಡರನ್ನೂ ಆಗ ನನಗೆ ತೋರಿಸ್ತೀಯಾ?"

"ಹೂಂ."

ತನಗೆ ಪರಿಚಯವಿದ್ದ ದೊಡ್ಡ ಮುಖಂಡ ಒಬ್ಬರೇ. ಅವರ ವಿಷಯ, ತಾನು ಕಂಡಿದ್ದ ಅವರ ಸಂಗಡಿಗರು ಕೆಲವರ ವಿಷಯ, ಆಗಲೆ ಅಲ್ಲಿಯೆ ಚಂದುವಿಗೆ ಎಲ್ಲವನ್ನೂ ಹೇಳಬೇಕೆಂಬ ಬಯಕೆ ಅಪ್ಪುವಿನ ಹೃದಯದಲ್ಲಿ ಒತ್ತರಿಸಿ ಬಂತು. ಆದರೂ ರಹಸ್ಯ ಚಟುವಟಿಕೆಯ ಉಗ್ರನಿಯಮಾವಳಿಯ ನೆನಪಾಗಿ, ಆತ ಸುಮ್ಮನಾದ.

ಚಂದು ಒಂದೆರಡು ಪುಸ್ತಕ ಓದಿ ಶಾಲೆ ಬಿಟ್ಟವನು. ಅಲ್ಲಿ ಸಂಪಾದಿಸಿದ ಅಕ್ಷರಜ್ಞಾನವನ್ನು ಉಳಿಸಿಕೊಳ್ಳಬೇಕೆಂಬ ಹಿರಿಯಾಸೆಯೇನೂ ಶಾಲೆ ಬಿಟ್ಟಾಗ ಆತನಿಗಿರಲಿಲ್ಲ. ಕ್ರಮೇಣ, ಪುಸ್ತಕ ಕೈಗೆತ್ತಿಕೊಳ್ಳುವ ಅಭ್ಯಾಸವೂ ತಪ್ಪಿಹೋಗಿ, ತಡೆಯಿಲ್ಲದೆ ಏನನ್ನೂ ಓದಲಾಗುತ್ತಿರಲಿಲ್ಲ. 'ನನ್ನ ವಿದ್ಯೆ ಏನಿದ್ದರೂ ಸಹಿ ಹಾಕೋದಕ್ಕೆ ಮಾತ್ರ'—ಎಂದು ಆತ ಸುಮ್ಮನಾಗಿದ್ದ. ಆದರೆ ಅಪ್ಪುವಿನ ಒಡನಾಟದಿಂದ, ರೈತ ಚಳವಳಿಯ ಸಂಬಂಧದಿಂದ ಆತನ ಜ್ಞಾನದಾಹ ಮತ್ತೆ ಕಾಣಿಸಿಕೊಂಡಿತು. ಆತ ಪತ್ರಿಕೆಯೋದಿದ; ಕರಪತ್ರಗಳನ್ನೋದಿದ. ಹೀಗೆ ಅಂಗಡಿಯಲ್ಲಿ ಕುಳಿತಾಗ ಅಲ್ಲಿಗೆ ಬಂದವರೊಡನೆ ಹರಟೆ ಹೊಡೆಯಲು ಆತನಿಗೆ ಬೇರೆ ವಿಷಯಗಳು ದೊರೆತುವು.

ವಿದ್ಯಾರ್ಜನೆಯ ಹುಚ್ಚು ಆ ಅವಧಿಯಲ್ಲಿ ಹೆಚ್ಚಾಯಿತು. ಮಾಸ್ತರ ಸೂಚನೆಯಂತೆ, ನಾಲ್ಕಾರು ಹೆಂಗಸರಿಗೆ ಚಿರುಕಂಡ ಅಕ್ಷರಾಭ್ಯಾಸ ಮಾಡಿಸಿದ. ಬಳಿಕ ಆ ಹೆಂಗಸರೇ ವಿದ್ಯೆಯ ಸೊಡರನ್ನೆತ್ತಿಕೊಂಡು ಕತ್ತಲಿದ್ದಲ್ಲಿ ಬೆಳಕು ಅಂಟಿಸಲು ಹೊರಟರು.

ಈ ದಿನಗಳಲ್ಲಿ ನೆಮ್ಮದಿ ಕೆಡಿಸಿಕೊಂಡು ಸಿಡುಕನಾದ ವ್ಯಕ್ತಿ ನಂಬಿಯಾರರು. ಮೊದಲು ಭಾವಿಸಿದ್ದಂತೆ ಈ ಮಾಸ್ತರು ಪ್ರಾಮಾಣಿಕನೆಂದು ಒಪ್ಪಿಕೊಳ್ಳಲು ಈಗ

ಅವರು ಸಿದ್ಧರಿರಲಿಲ್ಲ. ಆತನನ್ನು ಕಳುಹಿಸಿಬಿಡುವುದು ಬಲಾಢ್ಯರಾದ ಅವರಿಗೇನೂ ಕಷ್ಟದ ಮಾತಾಗಿರಲಿಲ್ಲ. ಆದರೆ ಖಾಲಿಯಾದ ಆ ಜಾಗಕ್ಕೆ ಬೇರೆ ಯಾರನ್ನು ನೇಮಿಸಬೇಕು?—ನಂಬೂದಿರಿ ಸಾಮಾನ್ಯವಾಗಿ ಪರ ಊರುಗಳಿಗೆ ಪಟ್ಟಣಗಳಿಗೆ ಹೋಗುವ ವ್ಯಕ್ತಿಯಲ್ಲ. ಹೋದರೂ ಕೋರ್ಟು ಕಚೇರಿಗಳ ಕೆಲಸಕ್ಕೆ ಎಷ್ಟೋ ಅಷ್ಟೆ. ಒಮ್ಮೆಯೂ ಪತ್ರಿಕೆ ಮುಟ್ಟದ ಅವರು, ಕಯ್ಯೂರಿನ ಹೊರಗೆ ಏನಾಗುತ್ತಿದೆ ಎಂದು ಸ್ಪಷ್ಟವಾಗಿ ತಿಳಿದವರಲ್ಲ. ನಂದಿಯಾರರು ಭೇಟಿಯಾದಾಗ ಏನಾದರೂ ಹೇಳಿದರೆ, "ಹಾಗೇನು?" ಎಂದು ಹೇಳಿ, ಮರುಕ್ಷಣವೇ ಅದನ್ನು ಮರೆತುಬಿಡುತ್ತಿದ್ದರು. ಆದರೆ ಹೊರಗಿನ ವ್ಯವಹಾರವನ್ನು ತಕ್ಕ ಮಟ್ಟಿಗೆ ತಿಳಿದಿದ್ದ ನಂದಿಯಾರರು, ಇಂತಹ ಸಮಸ್ಯೆಗಳನ್ನು ಕುರಿತು ಹೊರಗಿನವರೊಡನೆ ಚರ್ಚಿಸಿದ್ದವರು, ಎಲ್ಲ ಕಡೆಗಳಲ್ಲೂ ಈಗೀಗ 'ತಲೆಹೋಕ' ಉಪಾಧ್ಯಾಯರೇ ಇರುವರೆಂದು ಕೇಳಿದ್ದರು. ಹಾಗಿರುತ್ತ, ಇರುವ ಮಾಸ್ತರನ್ನು ಕಳುಹಿಸಿ ಆತನಿಗಿಂತ ಹೆಚ್ಚು ಭಯಂಕರನಾದವನನ್ನು ಕರೆಸಲು ಅವರು ಸಿದ್ಧರಿರಲಿಲ್ಲ. ಅಲ್ಲದೆ, ಅವರ ಹುಡುಗ ಕರುಣಾಕರನಿಗೆ ಅಲ್ಲಿದ್ದುದು ಮತ್ತೊಂದು ವರ್ಷದ ವಿದ್ಯಾಭ್ಯಾಸ ಮಾತ್ರ. ಮುಂದೆ ನೀಲೇಶ್ವರಕ್ಕೆ ಅವನನ್ನು ಕಳುಹಿಸಬೇಕು. ಅಷ್ಟರವರೆಗೆ ಈ ಮಾಸ್ತರೇ ಇರಲಿ—ಎಂಬುದೂ ಅವರ ಯೋಚನೆಯಾಗಿತ್ತು.

ಹೀಗಿದ್ದರೂ, ಒಮ್ಮೆ ಮಾತ್ರ ನಂದಿಯಾರರಿಗೆ ತುಂಬ ದಿಗಿಲಾಯಿತು. ಕರುಣಾಕರನ ಪುಸ್ತಕಗಳ ಮೇಲೆ ಕಣ್ಣೋಡಿಸುತ್ತಿದ್ದಾಗ ಚರಿತ್ರೆಯ ಟಿಪ್ಪಣಿ ಪುಸ್ತಕದಲ್ಲಿದ್ದ ಕೆಲ ವಾಕ್ಯಗಳನ್ನೋದಿ, ಅವರು ದಂಗಾದರು. ಪ್ರಶ್ನೋತ್ತರಗಳ ರೂಪದಲ್ಲಿತ್ತು ಆ ಟಿಪ್ಪಣಿ.

"ನಮ್ಮನ್ನಾಳುವವರು ಯಾರು?"

"ಪರಕೀಯರು."

"ಅವರ ಊರು ಎಲ್ಲಿದೆ ?"

"ಅದು ಸಾವಿರ ಮೈಲುಗಳ ಆಚೆ."

"ಆಳುವವರಿಗೆ ಏನೆನ್ನುತ್ತಾರೆ?"

"ರಾಜರು."

"ಆಳಲ್ಪಡುವವರಿಗೆ ಏನೆನ್ನುತ್ತಾರೆ?"

"ಪ್ರಜೆಗಳು."

ಈ ಪುಟದಲ್ಲೆ ಕೆಳಗೊಂದು ಸಾಲಿತ್ತು:

"ಪರಕೀಯ ರಾಜರ ಪ್ರಜೆಗಳು ಗುಲಾಮರು.

ದೇಶಕ್ಕೆ ಸ್ವಾತಂತ್ರ್ಯ ಬೇಕೆನ್ನುವವರೆಲ್ಲ ಅವಿವೇಕಿಗಳು; ಹೋರಾಟ ನಡೆಸುವವರೆಲ್ಲ ನಿರುದ್ಯೋಗಿಗಳು—ಎಂಬುದು ನಂಬಿಯಾರರ ಸ್ಪಷ್ಟ ಅಭಿಪ್ರಾಯವಾಗಿತ್ತು. ಕಳೆದ ಸಾರೆ ಮದರಾಸಿನ ಗವರ್ನರರು ಪ್ರವಾಸ ಬಂದಾಗ, ನಂಬಿಯಾರರು ಮಂಗಳೂರಿಗೆ ನಾಲ್ಕು ದಿನ ಮುಂಚಿತವಾಗಿಯೇ ಹೋಗಿ ಕಾದಿದ್ದು ದರ್ಶನ ಪಡೆದಿದ್ದರು. ಗಾಂಧೀ ಭಕ್ತರ ವಿಷಯದಲ್ಲಿ ಅವರಿಗೆ ಯಾವ ಸಹಾನುಭೂತಿಯೂ ಇರಲಿಲ್ಲ.

ಈಗ ಕರುಣಾಕರನ ಟಿಪ್ಪಣಿ ಪುಸ್ತಕವನ್ನೋದುತ್ತ ನಂಬಿಯಾರರಿಗೆ ವಿಸ್ಮಯವಾಯಿತು. ತಮಗೆ ತಿಳಿದಂತೆಯೇ ಗಾಂಧಿ ಚಳುವಳಿ ಕಯ್ಯೂರಿಗೆ ಹರಡಿದೆಯೇನೋ ಎನ್ನಿಸಿತು.... ಆದರೆ ಇಲ್ಲಿ ಯಾರ ಭಾಷಣವೂ ಆಗಿರಲಿಲ್ಲ. ಯಾರೂ ಚರಖಾ ತಂದಿರಲಿಲ್ಲ; ಬಿಳಿಯ ಒರಟು ಬಟ್ಟೆ ತೊಟ್ಟು ಟೋಪಿ ಇಟ್ಟಿರಲಿಲ್ಲ ಯಾರೂ.

ಇಂತಹ ವಿಷಯದಲ್ಲೆಲ್ಲ ಕಾಲವಿಳಂಬ ಸರಿಯಲ್ಲವೆಂದು ಅವರು ಮಾಸ್ತರಿಗೆ ಹೇಳಿಕಳುಹಿಸಿದರು. ಈ ಸಲ ಇದೇನು ವಿಷಯವೋ? ಎಂದು ಯೋಚಿಸುತ್ತ ಬಂದ ಮಾಸ್ತರೆದುರು, ಕರುಣಾಕರನ ಟಿಪ್ಪಣಿ ಪುಸ್ತಕವನ್ನು ಅವರು ಹಿಡಿದರು.

"ಇದರ ಅರ್ಥ ಏನು ಮಾಸ್ತರೆ?"

ಮಾಸ್ತರು ಮುಗುಳು ನಕ್ಕರು. ನಂಬಿಯಾರರಿಗೆ ಸಿಟ್ಟು ಬಂತು.

"ಇದರಲ್ಲಿ ನಗುವ ವಿಷಯ ಏನಿದೆ? ನೀವು ಯೋಚಿಸಿ ಪಾಠ ಹೇಳ್ತೀರೋ ಅಲ್ಲ—"

"ಯಾಕೆ, ಏನಾಗಿದೆ? ಇದೆಲ್ಲ ಸತ್ಯ ಸಂಗತಿ ಅಲ್ವ?"

"ಸತ್ಯ ಸಂಗತಿ ಏನು ಬಂತು ಮಣ್ಣು? ಮೊದಲಿನ ವಾಕ್ಯಗಳನ್ನು ಕ್ಷಮಿಸ ಬಹುದು, ಬಿಟ್ಟುಬಿಡೋಣ. ಆದರೆ ಆ ಕೊನೇದು—ಪರಕೀಯ ರಾಜರ ಪ್ರಜೆಗಳು ಗುಲಾಮರು—ಅದೇನು ಗೊತ್ತೋ?"

ಮಾಸ್ತರು ಮತ್ತೆ ನಗಲು ಯತ್ನಿಸಿದರು.

"ನಗಬೇಡಿ. ನನ್ನ ಮಾತು ಕೇಳಿ, ನೀವಿನ್ನೂ ಚಿಕ್ಕ ವಯಸ್ಸೋರು. ಇಷ್ಟೆಲ್ಲ ಪತ್ರಿಕೆ ಓದಿಯೂ ನಿಮಗೇನೂ ಅರ್ಥವಾಗೋದಿಲ್ವ? ನೀವು ಮಾಡ್ತಿರೋದು ರಾಜದ್ರೋಹ! ಸರಕಾರಕ್ಕೆ ಗೊತ್ತಾದರೆ ನಿಮ್ಮನ್ನು ಬಂಧಿಸಿ ಜೈಲಿನಲ್ಲಿಡಬಹುದು! ಏನ್ಹೇಳ್ತೀರಾ?"

ಗಂಭೀರವಾಗಿ ಕುಳಿತರು ಮಾಸ್ತರು. ನಂಬಿಯಾರ್ ಸ್ವರತಗ್ಗಿಸಿ ಅಂದರು:

"ನಾನೊಂದು ಪ್ರಶ್ನೆ ಕೇಳ್ತೇನೆ. ನೀವು ಗಾಂಧಿವಾದಿಯೇನು?"

"ಖಂಡಿತ ಅಲ್ಲ."

ಹಾಗೆ ನೇರವಾದ ಖಚಿತ ಉತ್ತರ ಕೊಡಲು ಮಾಸ್ತರು ಏನೇನೂ ಅಳುಕಲಿಲ್ಲ.

"ಒಳ್ಳೇದಾಯ್ತು, ಈ ಉತ್ತರ ಕೇಳಿ ನನಗೆ ಸಮಾಧಾನವಾಯ್ತು. ಆದರೂ ಪರಕೀಯರ ಗುಲಾಮರು ಅನ್ನೋದೆಲ್ಲ ಗಾಂಧೀ ವಿಚಾರವೇ. ನಾಳೆ ಈ ಕೊನೇದೊಂದು ವಾಕ್ಯ ಅಳಿಸ್ಬಿಡಿ."

ಮಾಸ್ತರು ಮಾತಾಡಲಿಲ್ಲ.

"ಏನು ಹೇಳಿ! ಅಳಿಸ್ತೀರಿ ತಾನೆ ?'

"ಆಗಲಿ."

ಆ ಉತ್ತರ ಬಲು ಪ್ರಯಾಸದಿಂದ ಬಂತು.

ಅದಾದ ಮೇಲೆ ದೊಡ್ಡದೊಂದು ವಿಜಯ ಸಂಪಾದಿಸಿದವರಂತೆ ನಂಬಿಯಾರರು ನಿಟ್ಟುಸಿರುಬಿಟ್ಟು, ಸಿಗರೇಟನ್ನು ಹಚ್ಚಿ ಸೇದುತ್ತ, ಏಕಪ್ರಕಾರವಾದ, ಬೇಸರ ಹುಟ್ಟಿಸುವಂತಹ ಕರ್ಕಶ ಸ್ವರದಲ್ಲಿ ಅಂದರು:

"ಯಾಕೋ ಬರ್‍ತಾ ಬರ್‍ತಾ ಕಾಲ ಕೆಡ್ತಿದೆ. ಜನರು ಹೆಚ್ಚು ಮೈಗಳ್ಳರಾಗ್ತಿದ್ದಾರೆ. ಅವಿಧೇಯತೆ ಜಾಸ್ತಿಯಾಗ್ತಿದೆ. ಎಲ್ಲಿ ನೋಡಿದರೂ ವಿದ್ಯೆಯ ಹುಚ್ಚು. ವಿದ್ಯೆ-ವಿದ್ಯೆ—ವಿದ್ಯೆ.....ಹಂ.."

ಭಾವನೆಗಳಿಗೆ ಭದ್ರಕವಚ ತೊಡಿಸಿ, ಮುಂದಿನ ಎಲ್ಲ ಮಾತುಗಳಿಗೂ ಮಾಸ್ತರು ಕಿವಿಗೊಟ್ಟರು. ಮಾತು ಬರಿದಾಗಿ ನಂಬಿಯಾರರು ಮೌನತಳೆದ ಮೇಲೆ, ಹೊರಬಿದ್ದು ಶಾಲೆಯತ್ತ ನಡೆದರು.

.....ಮರುದಿನ ಕರುಣಾಕರನ ತರಗತಿಯಲ್ಲಿ ಚರಿತ್ರೆಯ ಪಾಠದ ಟಿಪ್ಪಣಿ ಪುಸ್ತಕ ತೆರೆಸಿ, "ಆ ಕೊನೆ ವಾಕ್ಯ ಅಳಿಸಿಬಿಡಿರೋ" ಎಂದರು ಮಾಸ್ತರು.

"ಯಾಕೆ ಸರ್?"

"ಜಮೀನ್ದಾರರು ಆ ವಾಕ್ಯ ಬೇಡ ಅಂದಿದ್ದಾರೆ."

....ಆದರೆ ಆದಾದ ಮೇಲೆ ಕೆಳತರಗತಿಯಲ್ಲಿ ಮಾಸ್ತರು ಗಣಿತ ಪಾಠದಲ್ಲಿ ಒಂದು ಲೆಕ್ಕ ಕೊಟ್ಟರು:

"ಒಬ್ಬನ ಹತ್ತಿರ ೬೦೦ ಎಕರೆ ಭೂಮಿ ಇದೆ. ಅದನ್ನು ಇನ್ನೂರು ಜನರಲ್ಲಿ ಸಮನಾಗಿ ಹಂಚಿದರೆ ಪ್ರತಿಯೊಬ್ಬನಿಗೂ ಸಿಗುವ ಹೊಲದ ವಿಸ್ತಾರವೆಷ್ಟು?"

## ೧೧

ತಳಿಪರಂಬ ಜಾತ್ರೆಯ ಸಮಯದಲ್ಲಿ ಅಲ್ಲಿಯೇ ಸಮೀಪದ ಒಂದು ಹಳ್ಳಿಯಲ್ಲಿ ಜರಗಲು ಏರ್ಪಾಡಾಗಿದ್ದ ಉತ್ತರ ಮಲಬಾರಿನ ರೈತಸಮ್ಮೇಳನಕ್ಕೆ ಕಯ್ಯೂರಿನಿಂದ

ಆದಷ್ಟು ಜನ ರೈತರನ್ನು ಪ್ರೇಕ್ಷಕರಾಗಿ ಕಳುಹಿಸಬೇಕೆಂದು ಮಾಸ್ತರು ಯೋಚಿಸಿದರು. ಸಮ್ಮೇಳನಕ್ಕೆ ಹೋಗುವ ಮಾತನ್ನು ಬಹಿರಂಗ ಗೊಳಿಸುವಹಾಗಿರಲಿಲ್ಲ. ಚರ್ವತ್ತೂರಿನಿಂದ ತಳಿಪರಂಬಕ್ಕೆ ರೈಲುಗಾಡಿಯಲ್ಲಿ ಕೆಲವೇ ಗಂಟೆಗಳ ಪ್ರವಾಸ. ಎರಡು ದಿನಗಳ ಸಮ್ಮೇಳನ ಮುಗಿಸಿ ಮೂರನೆಯ ಬೆಳಗು ಮುಂಜಾನೆ ಕಯ್ಯೂರಿಗೆ ಮರಳುವುದು ಸಾಧ್ಯವಿತ್ತು. ಈ ಪ್ರವಾಸವೇ ಕಯ್ಯೂರಿನಲ್ಲಿ ರೈತ ಸಂಘದ ಸ್ಥಾಪನೆಗೆ ಬುನಾದಿಯಾಗುವುದೆಂದು ಮಾಸ್ತರು ನಂಬಿದ್ದರು. ಅಪ್ಪು-ಚಿರುಕಂಡರಿಗೂ ಆ ಸಮ್ಮೇಳನದ ಮಹತ್ವ ಅರ್ಥವಾಗಿತ್ತು. ಹೋಗುವವರು ಯಾರು? ಆ ಜವ್ವನಿಗರಿಬ್ಬರು, ಚಿರುಕಂಡನ ತಂದೆ, ಸಾಧ್ಯವಾದರೆ ಅಪ್ಪುವಿನ ತಂದೆ ಕೂಡ, ಕಣ್ಣ, ಕೋರ ಬೇರೆಯೂ ನಾಲ್ಕಾರು ಜನ ರೈತರು. ಮಾಸ್ತರು ಈ ವಿಷಯ ಪ್ರಸ್ತಾಪಿಸಿದಾಗ ಅವರೆಲ್ಲ ತೋರಿದ ಆಸಕ್ತಿ ಅಷ್ಟಿಷ್ಟಲ್ಲ.

ಹೊಲಗಳಲ್ಲಿ ಕುಯಿಲು ಆರಂಭವಾಯಿತು. ಅನಂತರ ಸಮ್ಮೇಳನಕ್ಕಿದ್ದುದು ಒಂದೇ ವಾರ. ಪೈರು ಅಂಗಳಕ್ಕೆ ಬಂದೊಡನೆಯೇ ಹೋಗಿ ಬರಲು ದಿನ ಅನುಕೂಲವಾಗಿತ್ತು.

ಆದರೆ ಹೊರಡಬೇಕಾದ ಹಿಂದಿನ ದಿನ ಅಪ್ಪು ಸಪ್ಪೆಮೋರೆಯೊಡನೆ ಮಾಸ್ತರ ಬಳಿಗೆ ಬಂದ.

"ಏನು ವಿಶೇಷ ಅಪ್ಪು?" ಎಂದರು ಮಾಸ್ತರು.

"ಕೃಷ್ಣನ್ ನಾಯರ್ ಬರೋದಕ್ಕಾಗೋದಿಲ್ಲ ಮಾಸ್ತರೆ. ಅವನ ಹೊಲದಲ್ಲಿನ್ನೂ ಕುಯಿಲೇ ಆಗಿಲ್ಲ. ನಾಳೆಗೆ ಇಟ್ಟುಕೊಂಡಿದ್ದಾನೆ."

ಕೃಷ್ಣನ್ ನಾಯರ್ ನಂಬಿಯಾರರ ಒಕ್ಕಲು. ತುಂಬಾ ಉತ್ಸಾಹಿ. ಆತ ಸಮ್ಮೇಳನಕ್ಕೆ ಹೋಗಲೇಬೇಕೆಂಬುದು ಮಾಸ್ತರರ ಅಪೇಕ್ಷೆಯಾಗಿತ್ತು. ಅವರು ಯೋಚಿಸಿ ಹೇಳಿದರು:

"ಅಷ್ಟೇನೆ? ಸಮ್ಮೇಳನಕ್ಕೆ ಹೋಗುವವರೆಲ್ಲ ನಾಳೆ ಹೊಲಕ್ಕಿಳಿದು ಕೃಷ್ಣನ್ ನಾಯರಿಗೆ ಸಹಾಯಮಾಡಿ. ಅವನದೇನು ಹತ್ತು ಎಕರೆ ಜಮೀನೆ? ಕತ್ತಲಾಗುವ ಹೊತ್ತಿಗೆ ನೀವೆಲ್ಲ ಇಲ್ಲಿಂದ ಹೊರಟರೆ ಸಾಕು. ಸಾಯಂಕಾಲ ಮಂಗಳೂರಿನಿಂದ ಹೊರಡೋ ರೈಲು ಸಿಕ್ಕಿಯೇ ಸಿಗ್ತದೆ. ಅಲ್ಲವಾ?"

ಅಪ್ಪುವಿಗೆ ಸಮಾಧಾನವಾಯಿತು:

"ಹೂಂ. ಮಧ್ಯಾಹ್ನ ಚಿರುಕಂಡನೂ ಅದೇ ಸಲಹೆ ಮಾಡ್ದ. ಆದರೂ ಕೇಳೋಣಾಂತ ಬಂದೆ. ನೀವು ಹೇಳಿದ ಹಾಗೇ ಮಾಡ್ತೇವೆ."

..... ಮಾರನೆಯ ಬೆಳಗ್ಗೆ ಕೃಷ್ಣನ್ ನಾಯರನ ಹೊಲದಲ್ಲಿ ಎಲ್ಲಿಲ್ಲದ

ಸಂಭ್ರಮ. ಸಹಬಾಂಧವನಿಗೆ ನೆರವಾಗಲು ರೈತರ ತಂಡವೆ ಬಂದಿತ್ತು. ತಮ್ಮ ಕುಯಿಲು ಮುಗಿದಿದ್ದ ಅಕ್ಕಪಕ್ಕದವರೂ ಹೊಲಕ್ಕಿಳಿದರು. ಮೇಲೇರುತ್ತಿದ್ದ ಸೂರ್ಯನೊಡನೆ ಸ್ಪರ್ಧಿಸುತ್ತ ಕುಡುಗೋಲು ಹಿಡಿದ ಕೈಗಳು ಫಲಭಾರದಿಂದ ಬಾಗಿದ್ದ ಭತ್ತದ ಪಸಿಗಳನ್ನು ಕರಕರನೆ ಕುಯ್ದುವು. ರೈತಹೆಂಗಳೆಯರು ಪಾಡ್ಡನಗಳನ್ನು ಹಾಡಿದರು. ಕಣ್ಣ ಹೊಸ ಹಾಡಿನಿಂದ ದುಡಿಯುವವರ ಉಲ್ಲಾಸ ಹೆಚ್ಚುವಂತೆ, ಕೈಗಳ ಬಿರುಸು ಇಮ್ಮಡಿಯಾಗುವಂತೆ ಮಾಡಿದ. ಮಧ್ಯಾಹ್ನದ ವಿರಾಮದ ವೇಳೆಗೆ ಉಳಿದುದು ಸ್ವಲ್ಪವೇ. ಮೂರು ಗಂಟೆಯ ಹೊತ್ತಿಗೆಲ್ಲ ಕುಯ್ಲು ಮುಗಿದೇ ಹೋಯಿತು. ಕೃಷ್ಣನ್ ನಾಯರ ಮುಖ ಅರಳಿ, ಮೊರದಷ್ಟು ಅಗಲವಾಯಿತು.

ಇನ್ನೇನು, ಕುಯ್ದುದನ್ನು ರಾಶಿ ಹಾಕಿ ಕೃಷ್ಣನ್ ನಾಯರ ಗುಡಿಸಲಿಗೆ ಒಯ್ದು ಮುಟ್ಟಿಸುವುದೊಂದೇ ಕೆಲಸ. ಅದಕ್ಕೆ ಪೂರ್ವಭಾವಿಯಾಗಿ ನಾಲ್ಕು ನಿಮಿಷ ದಣಿವಾರಿಸಿಕೊಳ್ಳಲೆಂದು ರೈತರೆಲ್ಲ ಕುಳಿತರು. ಅಷ್ಟರಲ್ಲಿ, ಪುಷ್ಟವಾದ ಎತ್ತುಗಳನ್ನು ಹೂಡಿದ್ದ ಗಾಡಿ ಅತ್ತ ಬರತೊಡಗಿತ್ತು.

"ಗಾಡಿಗೆ ಹೇಳಿದ್ದೆ ಏನಪ್ಪ ಕೃಷ್ಣನ್ ನಾಯರ್? ಬರ್‍ತಾ ಇದೆಯಲ್ಲ ಯಾವುದೋ ರಥ !" ಎಂದು ಯಾರೋ ಅಂದರು.

ಇದೇನು ತಮಾಷೆಯೋ ವಾಸ್ತವವೋ ಎಂದು ತಿಳಿಯಲು ಎಲ್ಲರೂ ಅತ್ತ ಕತ್ತು ತಿರುಗಿಸಿ ನೋಡಿದರು.

ಕೃಷ್ಣನ್ ನಾಯರೇ ಮೊದಲು ಹೋರಿಗಳನ್ನು ಗುರುತಿಸಿ, "ಅದು ಜಮೀನ್ದಾರರ ಗಾಡಿ" ಎಂದ. ಹಾಗೆ ಹೇಳುತ್ತಲಿದ್ದಂತೆ ಆತನ ಮುಖ ಕಪ್ಪಿಟ್ಟಿತು.

"ತನ್ನ ಸಹಾಯವೂ ಒಂದಿಷ್ಟು ಇರಲೀಂತ ನಂಬಿಯಾರರೇ ಕಳಿಸಿದ್ದಾರೋ?" ಎಂದು ಹೇಳಿ ಯಾರೋ ನಕ್ಕರು.

ಆದರೆ ಆ ವಾತಾವರಣ ಬದಲಾಗಲು ಹೆಚ್ಚು ಹೊತ್ತು ಹಿಡಿಯಲಿಲ್ಲ. ಕೃಷ್ಣನ್ ನಾಯರ್ ಊಹಿಸಿದ್ದಂತೆಯೇ ಆಯಿತು. ಆತನ ಪೈರನ್ನು ವಶಪಡಿಸಿಕೊಂಡು ಜಮೀನ್ದಾರರ ಮನೆಗೊಯ್ಯುವುದಕ್ಕೇ ಆ ಗಾಡಿ ಬಂದಿತ್ತು. ಗಾಡಿಯ ಜತೆಯಲ್ಲಿ ಜಮೀನ್ದಾರರ ಕಡೆಯ ಕ್ರೂರಿಗಳೆಂದು ಕುಪ್ರಸಿದ್ಧರಾಗಿದ್ದ ಇಬ್ಬರು ಆಳುಗಳೂ ಇದ್ದರು. ಇಷ್ಟೊಂದು ಜನರನ್ನು ನೋಡಿ ಆಳುಗಳು ಸ್ವಲ್ಪ ಹಿಂತೆಗೆದರೂ ಅವರಲ್ಲೊಬ್ಬ ಕೃಷ್ಣನ್ ನಾಯರನ್ನು ಉದ್ದೇಶಿಸಿ ಹೇಳಿದ:

"ಪೈರನ್ನು ಸಾಗಿಸ್ಕೊಂಡು ಬರೋದಕ್ಕೆ ಜಮೀನ್ದಾರರು ಹೇಳಿದ್ದಾರೆ."

ಅದನ್ನು ಕೇಳಿ, ಮೊದಲು ನಿಂದೆಯ ಮಾತುಗಳನ್ನಾಡುತ್ತ, ಆಕ್ರೋಶ ಮಾಡಿದವಳು ಕೃಷ್ಣನ್ ನಾಯರ ಹೆಂಡತಿ. ಅಷ್ಟೊಂದು ಜನರ ಸಾಮೀಪ್ಯದಲ್ಲಿ

ಆಕೆಯ ಬಡಗಂಟಲಿಗೆ ಎಲ್ಲಿಲ್ಲದ ಬಲ ಬಂದಿತ್ತು. ರೈತರೆಲ್ಲ ಗಾಡಿಯನ್ನೂ ಬೆದರಿದ ಎತ್ತುಗಳನ್ನೂ ಆ ಇಬ್ಬರನ್ನೂ ಸುತ್ತುವರಿದರು. ಒಬ್ಬರು ಆಡಿದುದು ಇನ್ನೊಬ್ಬರಿಗೆ ಅರ್ಥವಾಗದ ಹಾಗೆ, ಆ ಪ್ರದೇಶವೆಲ್ಲ ಮಾತಿನಿಂದ ತುಂಬಿ ಹೋಯಿತು. ಕೃಷ್ಣನ್ ನಾಯರ್ ಸಂದಾಯಮಾಡದೇ ಉಳಿಸಿದ್ದ ಇನ್ನೂರು ರೂಪಾಯಿಗಳ ಸಾಲವೊಂದಿತ್ತು. ಬರಿಯ ಗೇಣಿಗಾಗಿ ಕಾಯದೆ ಇಡಿಯ ಪೈರನ್ನೇ ವಶಪಡಿಸಿಕೊಂಡು ತಮ್ಮ ಹಣವನ್ನು ಮರಳಿ ಪಡೆಯಲು ಜಮೀನ್ದಾರರು ನಿರ್ಧಸಿದ್ದರು. ಆದರಿಂದ ಕೃಷ್ಣನ್ ನಾಯರಿಗೆ ಮತ್ತಷ್ಟು ನಷ್ಟವಾಗುವುದೆಂಬುದೂ ಮತ್ತೆ ಜೀವನ ನಿರ್ವಹಣಕ್ಕೋಸ್ಕರ ಸಾಲ ಪಡೆಯಲು ಜಮೀನ್ದಾರರನ್ನೇ ಆತ ಅವಲಂಬಿಸಬೇಕಾಗುತ್ತದೆಂದೂ ಸ್ಪಷ್ಟವಾಗಿತ್ತು.

ರೈತಬಾಂಧವರೆಡೆಯಲ್ಲಿ ನಿಂತಿದ್ದ ಕೃಷ್ಣನ್ ನಾಯರ್ ಧೈರ್ಯಗೆಡಲಿಲ್ಲ. "ನ್ಯಾಯ ನೋಡ್ಕಳ್ಳಿ" ಎಂದು ವಾದಿಸಿದ. ಮಾತು ಬಲವಾಯಿತು. ನಂಬಿಯಾರರ ಭಟರ ಬೆದರಿಕೆಯ ನುಡಿಗಳಿಗೆ ರೈತರ ಅಣುಕುನುಡಿಗಳು ಸರಿ ಮಿಗಿಲೆನಿಸಿದ ಉತ್ತರವಾದುವು. ಅರ್ಧ ಘಂಟೆಯ ಹೊತ್ತು ಪರಿಸ್ಥಿತಿ ಹೀಗೆಯೇ ಉಳಿದು, ಗಾಡಿಯೂ ಆಳುಗಳೂ ಬಂದ ದಾರಿಯಲ್ಲೇ ಹಿಂತಿರುಗಬೇಕಾಯಿತು. ನೆರೆದಿದ್ದವರೆಲ್ಲ ಬೇಗಬೇಗನೆ ಪೈರನ್ನು ಹೊತ್ತು ಕೃಷ್ಣನ್ ನಾಯರ ಅಂಗಳಕ್ಕೆ ಸಾಗಿಸಿದರು.

ಆ ಕೆಲಸ ಮುಗಿಯುವ ಹೊತ್ತಿಗೆ ಚಿರುಕಂಡನ ತಂದೆಯೆಂದ:

"ಜಮೀನ್ದಾರರು ಸೋತದ್ದನ್ನು ನನ್ನ ಜೀವಮಾನದಲ್ಲಿ ಇದೇ ಮೊದಲ್ನೇ ಸಲ ನಾನು ಕಂಡದ್ದು!"

ಕಣ್ಣ ಗೆಲುವಿನ ಧ್ವನಿಯಲ್ಲಿ ಹೇಳಿದ:

"ಇದೆಂಥ ಸೋಲು ಮಾವ? ಈಗ ಶುರುವಾಗಿದೆ ಅಷ್ಟೆ. ಮುಂದೆ ನೋಡುವಿರಂತೆ !"

ಆದರೆ ಅಪ್ಪುವಿನ ತಂದೆ ಎಚ್ಚರಿಕೆಯ ಮಾತನ್ನಾಡಿದ:

"ಇದು ಇಷ್ಟೆಲ್ಲ ಸುಲಭ ಅಂತ ತಿಳಿದೀರೇನು? ಈ ಭತ್ತ ಕಣಜ ಸೇರೋದಕ್ಕುಂಚೆ ಜಮೀನ್ದಾರರು ಮತ್ತೊಮ್ಮೆ ಬರದೇ ಇದ್ದರೆ ಆಮೇಲೆ ಹೇಳಿ."

ಕೋರನೆಂದ:

"ಭತ್ತದ ಮಾತು ಯಾಕೆ? ರಾತ್ರಿಯೋ ನಾಳೆಯೋ ಹೆಚ್ಚು ಜನ ಬಂದು ಈ ಪೈರನ್ನು ಒಯ್ಯಬಹುದು."

ಅವರು ಮಾತುಗಳನ್ನಾಡುತ್ತಿದ್ದರು. ಆದರೆ ಕೃಷ್ಣನ್ ನಾಯರ ಗಂಟಲು

ಉಡುಗಿ ಹೋಗಿತ್ತು. ಆತ ಆ ದಿನ ಅತ್ಯಂತ ಸುಖಿಯೂ ಆಗಿದ್ದ; ಅತ್ಯಂತ ದುಃಖಿಯೂ ಆಗಿದ್ದ. ಒಂದು ದೃಷ್ಟಿಯಲ್ಲಿ ಆತನಿಗೆ ಅವಮಾನವಾಗಿತ್ತು. ಆದರೆ, ನೆರೆದಿದ್ದ ರೈತರು ಯಾರೂ ಅದು ಆತನಿಗಾದ ಅವಮಾನವೆಂದು ಭಾವಿಸಿರಲಿಲ್ಲ. ತಮ್ಮನ್ನೇ ಯಾರೋ ಜರೆದ ಹಾಗೆ ವರ್ತಿಸಿದ್ದರು.

ಆ ದಿನ ನಡೆದುದೆಲ್ಲವನ್ನೂ ಸ್ಮರಿಸಿಕೊಳ್ಳುತ್ತ ಕೃಷ್ಣನ್ ನಾಯಕರ ಕಣ್ಣುಗಳಿಂದ ಕಣ್ಣೀರು ಧಾರಾಕಾರವಾಗಿ ಸುರಿಯಿತು. ಆತನ ವೃದ್ಧ ತಾಯಿ ನಡೆಗೋಲನ್ನೂರಿಕೊಂಡು ಬಂದು, ಕಣ್ಣೆದುರು ನಡೆಯುತ್ತಿದ್ದುದನ್ನೆಲ್ಲ ನಂಬಬೇಕೆ ಬಾರದೆ ಎಂಬ ಶಂಕೆ ಬಾಧಿಸುತ್ತಲಿದ್ದರೂ, "ಕೂತ್ಕೊಳ್ಳಪ್ಪಾ, ಕೂತ್ಕೊಳ್ಳಪ್ಪಾ..." ಎಂದಳು.

ಹೆಚ್ಚಿನವರು ಒಬ್ಬೊಬ್ಬರಾಗಿ ತೆರಳಿದರು. ಸಮ್ಮೇಳನಕ್ಕೆ ಹೋಗಬೇಕಾಗಿದ್ದವರಷ್ಟೇ ಉಳಿದರು.

"ಮುಂದೇನು?" ಎಂದ ಅಪ್ಪುವಿನ ತಂದೆ.

ಕೋರ ಮತ್ತೂ ಹೇಳಿದ:

"ಜಮೀನ್ದಾರರ ಕಡೆಯೋರು ಪುನಃ ಇಲ್ಲಿಗೆ ಬರೋದು ಖಂಡಿತ. ಇವತ್ತು ರಾತ್ರೆಯೋ ನಾಳೆ ಬೆಳಗ್ಗೆಯೋ. ಬರೋದಂತೂ ಖಂಡಿತ."

"ಹಾಗಾದರೆ ನಾವು ಹೋಗೋದು ಬೇಡ. ಇಲ್ಲೇ ಇದ್ಬಿಡೋಣ" ಎಂದ ಚಿರುಕಂಡನ ತಂದೆ.

"ಯಾಕೆ, ಜಮೀನ್ದಾರರ ಕೈಲಿ ಜಗಳಾಡ್ಬೇಕೂಂತ ಆಸೆಯಾಗ್ತದೇನು?" ಎಂದು, ಅವರೆಗೂ ಸುಮ್ಮನೆ ಇದ್ದವನೊಬ್ಬ ಹೇಳಿದ.

ಮೂಲೆಯಲ್ಲಿ ಪ್ರತ್ಯೇಕವಾಗಿಯೇ ಇದ್ದ ಅಪ್ಪು ಮತ್ತು ಚಿರುಕಂಡರನ್ನು ಅಪ್ಪುವಿನ ತಂದೆ ಕೇಳಿದ:

"ಏನ್ರೋ ಸುಮ್ಮನಿದೀರಲ್ಲ. ಏನ್ಮಾಡೋಣ ಈಗ?"

ಚಿರುಕಂಡ ಸಮಾಧಾನವಾಗಿ ಹೇಳಿದ:

"ಪ್ರಯಾಣ ನಿಲ್ಲಿಸ್ಬಾರ್ದು."

"ಏನ್ಮಾಡೋದೂಂತ ಮಾಸ್ತರನ್ನ ಕೇಳಬಾರ್ದಾ? ಬೇಕಾದರೆ ನಾನೇ ಅವರಲ್ಲಿಗೆ ಹೋಗ್ಬರ್ತೇನೆ" ಎಂದ ಕೋರ.

ದೃಢವಾದ ಸ್ವರದಲ್ಲಿ ಚಿರುಕಂಡನೆಂದ:

"ಕತ್ತಲಾಗೋಕ್ಮುಂಚೆ ಯಾರೂ ಅವರನ್ನು ನೋಡ್ಕೂಡ್ದು!" ಕೃಷ್ಣನ್ ನಾಯರ್ ಕಂಪಿಸುವ ಧ್ವನಿಯಲ್ಲಿ ಹೇಳಿದ:

"ಇವತ್ತು ನೀವು ಇಷ್ಟೆಲ್ಲ ಮಾಡಿದ್ದು ನನಗೋಸ್ಕರ, ನಾನು ನಿಮ್ಮತೇಲಿ ಬರಬೇಕೂಂತ. ಈಗಿನ ಸ್ಥಿತೀಲಿ ನಾನಂತೂ ಬರೋಹಾಗಿಲ್ಲ. ದಯವಿಟ್ಟು ನೀವೆಲ್ಲ ಸಮ್ಮೇಳನಕ್ಕೆ ಹೋಗ್ಬನ್ನಿ."

ಆ ಮಾತಿಗೆ ಯಾರೂ ಏನನ್ನೂ ಪ್ರತಿ ಹೇಳಲಿಲ್ಲ. ಎಲ್ಲರೂ ಪರಸ್ಪರರ ಮುಖ ನೋಡಿದರು. ಕೊನೆಗೆ ಕೋರನೆಂದ:

"ನಾನು ಬಂದು ಆಗ್ಬೇಕಾದ್ದೇನು? ನನಗೆ ಅರ್ಥವಾಗೋದು ಅಷ್ಟರಲ್ಲೇ ಇದೆ. ನಾನು ಇಲ್ಲೇ ಇರ್ತೇನೆ.'

ಆ ಮಾತನ್ನು ವಿಮರ್ಶಿಸುತ್ತ ಚಿರುಕಂಡ ನುಡಿದ:

"ಅರ್ಥವಾಗೋದಿಲ್ಲ ಅನ್ನೋದೆಲ್ಲ ಬಿಟ್ಬಿಡಿ ಕೋರಣ್ಣ. ಹಾಗಲ್ಲ, ಯಾರಾದರೂ ಒಬ್ಬಿಬ್ಬರು ಇಲ್ಲೇ ಇರಬೇಕಾದದ್ದು ಧರ್ಮ. ನೀವು ಇರೋ ಹಾಗಿದ್ದರೆ ಸಂತೋಷವೇ. ಅಂತೂ ಹೋಗುವ ಕಾರ್ಯಕ್ರಮ ರದ್ದಾಗಬಾರ್ದು."

"ಹೇಗೆ ಹೇಳಿದರೂ ಒಂದೇ. ನಿನ್ನ ಮಾತೇ ಇರಲಿ, ನಾನು ಬುದ್ಧಿವಂತ ಅಂತಲೇ ಒಪ್ಕೊಳ್ಳೋಣ" ಎಂದ ಕೋರ ನಗುತ್ತ.

ಪ್ರಯಾಣದ ಸಿದ್ಧತೆಗಾಗಿ ಅವರೆಲ್ಲ ತಮ್ಮ ಗುಡಿಸಲುಗಳತ್ತ ಹೊರಟಾಗ ಕೋರ ಇಳಿಧ್ವನಿಯಲ್ಲಿ ಅಪ್ಪುವಿಗೆಂದ:

"ಹೋಗ್ತಾ ಮಾಸ್ತರಿಗೆ ಹೇಳ್ಬಿಡು ನಾನು ಇಲ್ಲೇ ಇದೇನೇಂತ."

ಕಯ್ಯೂರಿನ ಎಂಟು ಜನ ರೈತರು, ತಳಿಪರಂಬ ಜಾತ್ರೆಗೆ ಹೋಗುತ್ತಿದ್ದೇವೆ ಎಂದು ಹೇಳಿ ಸಮ್ಮೇಳನಕ್ಕೆ ಹೋದರು. ರಾತ್ರಿಯೇ ರೈತರು ಜಾತ್ರೆಗೆ ಹೋದ ವಾರ್ತೆ ನಂಬಿಯಾರರಿಗೆ ಸಿಗದೆ ಇದ್ದುದರಿಂದ, ಕೃಷ್ಣನ್ ನಾಯರನ ಪೈರಿನ ವಿಷಯದಲ್ಲಿ ಅವರೇನನ್ನೂ ಮಾಡಲಿಲ್ಲ. ರೇಗಿ ಕಿಡಿ ಕಾರಿದರೂ, ತಮಗಿರುವ ವಿರೋಧ ಎಷ್ಟೆಂಬುದನ್ನು ಮೊದಲು ಅಳೆದು ನೋಡಬೇಕೆಂಬ ವಿವೇಕ ಅವರಿಗಿತ್ತು. ಅದರ ಫಲವಾಗಿ, ಕೋರ ಮತ್ತು ಕೃಷ್ಣನ್ ನಾಯರ್ ನಸುಕಿನಲ್ಲಿ ಒಂದಿಷ್ಟು ಜೊಂಪು ಹತ್ತಿದ ಕಣ್ಣುಗಳನ್ನು ತಿಕ್ಕಿಕೊಂಡು ಎದ್ದಾಗಲೂ, ಅಂಗಳದಲ್ಲಿ ಪೈರಿನ ರಾಶಿ ನಿಶ್ಚಿಂತೆಯಿಂದ ಮಲಗಿಯೇ ಇತ್ತು.

ಮಾಸ್ತರು ಸಮ್ಮೇಳನಕ್ಕೆ ಹೋಗಲಿಲ್ಲ. "ಬನ್ನಿ ನಾವಿದ್ದೇವೆ" ಎಂದು ರೈತರು ಕರೆದರೂ ಅವರು ಹೊರಡಲಿಲ್ಲ.... ಬೆಳಗ್ಗೆ ಎದ್ದು ಅವರು 'ಸಾಹಿತ್ಯ' ಓದುತ್ತಾ ಕುಳಿತಿದ್ದರು. 'ಮಾಸ್ತರೆ' ಎಂಬ ಕೂಗು ಕೇಳಿದಾಗ ಒಮ್ಮೆ ಅವರಿಗೆ ಅಳುಕಿತು. ಒಡನೆಯೇ 'ಸಾಹಿತ್ಯ'ವನ್ನು ಹಾಸಿಗೆಯ ಕೆಳಗೆ ಮುಚ್ಚಿಟ್ಟು, ಕರೆವ ಸ್ವರವನ್ನು ಗುರುತಿಸಿ ಅವರು ಹೊರಕ್ಕೆ ಬಂದರು.

"ಯಾಕೆ ಗಾಬರಿಯಾಯ್ತು?" ಎಂದರು ನಂಬಿಯಾರರು; ಸ್ವತಃ ತಮ್ಮ ಹೃದಯದೊಳಗಿನ ಅವ್ಯವಸ್ಥೆಯನ್ನು ಹತೋಟಿಗೆ ತಂದುಕೊಳ್ಳುತ್ತ.

"ಇಲ್ಲಲ್ಲ! ಕರೆದದ್ದು ಹಾವೂಂತ ತಕ್ಷಣ ತಿಳೀತು."

ಮಾಸ್ತರು ಉತ್ತರ ಕೊಟ್ಟರೇ ಹೊರತು ನಂಬಿಯಾರರನ್ನು ತಮ್ಮ ಕೊಠಡಿಗೆ ಕರೆಯಲಿಲ್ಲ. ನಿಂತಲ್ಲಿಂದಲೇ ನಂಬಿಯಾರರೊಮ್ಮೆ ಅತ್ತ ಇಣಿಕಿ ನೋಡಿದರು.

"ಎಲ್ಲಿ, ನಿಮ್ಮ ರಾತ್ರಿ ಶಾಲೆ ನಿನ್ನೆ ಇರ್ಲಿಲ್ಲವಂತೆ!"

"ಹೌದು. ಎಲ್ಲಾ ತಳಿಪರಂಬ ಜಾತ್ರೆಗೆ ಎದ್ದಿಟ್ಟಿದ್ದಾರೆ."

"ಹಾಗೇಂತ ಬೆಳಿಗ್ಗೆ ತಿಳೀತು. ಮೊದಲೆಲ್ಲ ನಮ್ಮಲ್ಲಿ ಹೇಳದೆ ಕೇಳದೆ ಯಾರೂ ಎಲ್ಲಿಗೂ ಹೋಗ್ತಿರ್ಲಿಲ್ಲ; ಹೂಂ.... ನಿಮಗಾದರೂ ವಿಷಯ ಗೊತ್ತಿರ್ತದೇನೋಂತ ಬಂದೆ."

"ಇಲ್ಲ; ಹಾಗೇ ಹೊರಟಿದ್ದಾರೆ ನೋಡಿ."

ಶಾಲೆಯ ಛಾವಣಿಯ ಒಂದು ಬೊಂಬನ್ನು ಹಿಡಿದು, ಗಟ್ಟಿಯಾಗಿದೆಯೇ ಎಂದು ಅಲುಗಿಸಿ ನೋಡಿ, ನಂಬಿಯಾರರೆಂದರು:

"ಹಾಗೇ ಹೊರಡದೇನು ಮಾಡಿಯಾರು? ನಿನ್ನೆ ಏನಾಯ್ತೂಂತ ನಿಮಗೆ ಗೊತ್ತಿದ್ದೀತು."

ವಿಷಯ ತಿಳಿದಿದ್ದರೂ ಮಾಸ್ತರರೆಂದರು:

"ಇಲ್ಲ, ಏನಾಯ್ತು?"

ಮಾಸ್ತರ ಮಾತನ್ನು ನಂಬಬೇಕೋ ಬೇಡವೋ ಎಂದು ಕ್ಷಣ ಕಾಲ ಅನುಮಾನಿಸಿ ನಂಬಿಯಾರರು, ಹಿಂದಿನ ದಿನದ ಘಟನೆಯನ್ನು ತಮ್ಮ ದೃಷ್ಟಿಯಿಂದ ಸೂಕ್ಷ್ಮವಾಗಿ ವಿವರಿಸಿ ಅಂದರು:

"....ಆ ಕೃಷ್ಣನ್ ನಾಯರ್—ಅವನನ್ನು ಅವತ್ತೇ ಜೈಲಿಗೆ ಕಳಿಸ್ಬೇಕಾಗಿತ್ತು. ಈಗ ನೋಡಿ ಅಹಂಕಾರ! ಕಯ್ಯೂರಿನಲ್ಲಿನ್ನು ಈ ಬಡ್ಡಿ ಮಕ್ಕಳಿಗೆ ಬುದ್ಧಿ ಕಲಿಸೋರೆ ಇಲ್ಲಾಂತಾಯ್ತೆ ಹಾಗಾದರೆ? ಮನಸ್ಸು ಮಾಡಿದರೆ ಅಷ್ಟೂ ಜನರ ಮೇಲೆ ಕೇಸು ಹಾಕಿಸಿ ಅವರನ್ನೆಲ್ಲ ಅರೆಸ್ಟ್ ಮಾಡಿಸ್ಬಹುದು. ಇಷ್ಟಾದರೂ ಅರ್ಥವಾಗದೇನು ಅವರಿಗೆ?"

ರಾತ್ರೆ ಮತ್ತೇನಾಯಿತೆಂಬುದು ಮಾಸ್ತರಿಗೆ ಗೊತ್ತಿರಲಿಲ್ಲ. ಅಸ್ಲೇನಾದರೂ ಅನಾಹುತವಾಯಿತೆ ಎಂದು ತಿಳಿಯುವ ಆತುರ ಅವರಿಗಿತ್ತು. ಸುದ್ದಿ ಮುಟ್ಟಿಸುವವರಿಲ್ಲದೆ ಅವರು ಪೇಚಾಟಕ್ಕೆ ಒಳಗಾಗಿದ್ದರು. ನಂಬಿಯಾರರ ಬಾಯಿಂದಲೇ ಏನಾದರೂ ತಿಳಿಯೋಣವೆಂದು ಮೆಲ್ಲನೆ ಅವರೆಂದರು:

"ಆಮೇಲೇನಾಯ್ತು?"

"ಆಗೋದೇನು? ನಿನ್ನೆ ಸುಮ್ನಿದ್ದೆ. ಇವತ್ತು ನಮ್ಮ ಅಂಗಳಕ್ಕೆ ಪೈರು ಹೊರಿಸಿ ಹಾಕ್ತೇನೆ. ಯಾವನು ಅಡ್ಡಿ ಮಾಡ್ತಾನೋ ಬರ್ಲಿ. ಅಲ್ಲ ಮಾಸ್ತರೆ, ನನ್ನ ತಾಳ್ಮೆ ನೋಡಿ ಒಮ್ಮೊಮ್ಮೆ ನನಗೇ ಆಶ್ಚರ್ಯವಾಗ್ತದೆ. ನಾನು ಸೀದಾ ಮನುಷ್ಯ. ಖಂಡಿತವಾದಿ. ಹೇಳ್ತೇನೆ ಕೇಳಿ. ಇವರಿಗೆ ನಂಬೂದಿರಿಯಂತ ಯಜಮಾನರು ಸಿಗ್ಬೇಕು. ಬೆಣ್ಣೇಲಿ ಕೂದಲು ತೆಗೆಯೋವಂಥ ಮಾತಾಡ್ತಾ ಆಡ್ತಾ ಹ್ಯಾಗೆ ಅರೀತಾನೆ ಅಂತೀರಾ! ಮುಠ್ಠಾಳ ನನ್ಮಕ್ಳು ಥೂ !"

ಮಾಸ್ತರು, ನಂಬಿಯಾರರ ಆಲಾಪನೆಗೆ ಕಿವಿಗೊಡುತ್ತಿದ್ದರೂ ಮನಸ್ಸೆಲ್ಲ ಕೃಷ್ಣನ್ ನಾಯರರನ್ನು ಕುರಿತು ಚಿಂತಿಸುತ್ತಿತ್ತು. ಆತನಾಗಲೀ ಕೋರನಾಗಲೀ ಏನೂ ಮಾಡುವಂತಿರಲಿಲ್ಲ. ಪ್ರತಿಭಟನೆಯಿಂದ ಪ್ರಯೋಜನವೂ ಇರಲಿಲ್ಲ. ನಿನ್ನೆಯ ಸಾಧನೆ, ಸಮ್ಮೇಳನ ಮುಗಿಸಿ ಉತ್ಸಾಹದಿಂದ ಅವರೆಲ್ಲ ಹಿಂದಿರುಗುವ ವೇಳೆಗೆ ಮಣ್ಣುಗೂಡುವ ಪ್ರಮೇಯ.... ಆದರೆ ಹಾಗಾಗುವುದನ್ನು ತಡೆಯಲು ಹಾದಿಯೇ ಇರಲಿಲ್ಲ. ಅದು ಅನಿವಾರ್ಯವಾಗಿತ್ತು.....

ಹೆಚ್ಚು ಮಾತಿಗೆ ನಿಲ್ಲದೆ ನಂಬಿಯಾರರು ಹೊರಟೇ ಹೋದರು. ಜತೆಯಲ್ಲಿ ಬಂದಿದ್ದ ಆಳೂ ಒಡೆಯನನ್ನು ಹಿಂಬಾಲಿಸಿದ....

....................................

ಮಾಸ್ತರು ನಿರೀಕ್ಷಿಸಿದ್ದಂತೆಯೇ ಆಯಿತು. ಜಮೀನ್ದಾರರ ಎಂಟು ಜನ ದೂತರು ಕೃಷ್ಣನ್ ನಾಯರರ ಅಂಗಳದಲ್ಲಿದ್ದುದನ್ನೆಲ್ಲ ವಶಪಡಿಸಿಕೊಂಡರು, ಅಂತಹ ಪರಿಸ್ಥಿತಿಯಲ್ಲಿ ಅರ್ಥವಿಲ್ಲದ ಪ್ರತಿಭಟನೆಯನ್ನು ಕೋರನಾಗಲೀ ನಾಯರರಾಗಲೀ ಮಾಡಲಿಲ್ಲ. ದೂರದೂರದಿಂದಲೇ ಇತರ ರೈತರು ನಡೆಯುತ್ತಿದ್ದುದನ್ನೆಲ್ಲ ನೋಡಿದರು. ಅವರಲ್ಲಿ, ಇಬ್ಬರು ಜಮೀನ್ದಾರರ ಒಕ್ಕಲುಗಳೂ ಇದ್ದರು; ಕೆಲವರು ಸ್ವತಂತ್ರ ರೈತರೂ ಇದ್ದರು. ಆದರೆ ಯಾರೂ ಕೃಷ್ಣನ್ ನಾಯರರ ರಕ್ಷಣೆಗೆ ಬರಲಿಲ್ಲ. ಇದು ಎಷ್ಟೋ ಕಾಲದಿಂದ ನಡೆದು ಬರುತ್ತಿದ್ದುದರ ಸಹಜ ಪುನರಾವರ್ತನೆ—ಎಂದು ಅವರು ಸುಮ್ಮನಾದರು.

ರಾತ್ರೆ ಕೋರ, ತನ್ನನ್ನು ಯಾರೂ ಹಿಂಬಾಲಿಸದಂತೆ ಎಚ್ಚರ ವಹಿಸಿ ಬಂದು, ಮಾಸ್ತರನ್ನು ಸಂಧಿಸಿದ.

"ಕೃಷ್ಣನ್ ನಾಯರರನ್ನು ಗುಡಿಸಲಿನಿಂದ ಹೊರಹಾಕಿಲ್ಲ, ಅಲ್ವ?" ಎಂದು ಮಾಸ್ತರು ಕೇಳಿದರು.

"ಇಲ್ಲ."

ಯೋಚಿಸಿ ಮಾಸ್ತರೆಂದರು:

"ಬಹುಶಃ ಹೊರ ಹಾಕಲಾರರು. ಈಗಿನ ಪರಿಸ್ಥಿತೀಲಿ ಬೇರೆ ರೈತರನ್ನ ಹೊಂದಿಸೋದು ಜಮೀನ್ದಾರರಿಗೆ ಸುಲಭವಲ್ಲ."

"ಅದೇನೋ ನಿಜ. ಆದರೆ ಕೃಷ್ಣನ್ ನಾಯರಿಗೆ ತುಂಬಾ ಕಷ್ಟವಾಗ್ತದೆ." ಬಹಳ ಹೊತ್ತು ಸುಮ್ಮನಿದ್ದು ಮಾಸ್ತರು ಹೇಳಿದರು:

"ಹೋದವರೆಲ್ಲ ವಾಪಸು ಬರಲಿ. ಆಮೇಲೆ ಒಟ್ಟಾಗಿ ಮಾತಾಡೋಣ. ಕೋರ, ನಿನ್ನೆ ನಮಗೆ ಜಯವಾಯ್ತು. ಇವತ್ತು ಸೋಲು. ಪುನಃ ಈ ಸೋಲನ್ನು ಜಯವಾಗಿ ನಾವು ಮಾರ್ಪಡಿಸ್ಬೇಕು."

ಹೇಗೆ ಎಂಬುದು ಅರಿವಾಗದಿದ್ದರೂ ಧೈರ್ಯದ ಆ ಮಾತು ಕೋರನಿಗೆ ಮೆಚ್ಚುಗೆಯಾಗಿ, ಆತನ ಮುಖದಲ್ಲಿ ಉಲ್ಲಾಸದ ಕಳೆ ಮೂಡಿತು.

........................

ಮಾರನೆಯ ಮುಂಜಾವದಲ್ಲಿ, ತಳಿಪರಂಬ ಜಾತ್ರೆಗೆ ಹೋಗಿದ್ದವರೆಲ್ಲ ಮರಳಿ ಬಂದರು. ರೈತ ಜಾಗೃತಿಯನ್ನು ಕಣ್ಣಾರೆ ಕಂಡ ಅನುಭವ ಅವರೆಲ್ಲರಲ್ಲಿ ಹೊಸ ಶಕ್ತಿಯನ್ನು ತುಂಬಿತ್ತು. ಪ್ರವಾಸದಿಂದ ದಣಿದಿದ್ದರೂ ಅವರ ಬೆನ್ನುಗಳು ನೇರವಾಗಿದ್ದುವು. ಕಣ್ಣುಗಳು ನಿದ್ದೆ ಕೆಟ್ಟು ಕೆಂಪಾಗಿದ್ದರೂ ಹೊಳೆಯುತ್ತಿದ್ದವು. ಕಪೋಲಗಳು ಬತ್ತಿದ್ದರೂ, ಆತ್ಮವಿಶ್ವಾಸದ ನಗೆ ತುಟಿಗಳ ಮೇಲೆ ನರ್ತಿಸುತ್ತಿತ್ತು.

ಅಪ್ಪು ಮತ್ತು ಚಿರುಕಂಡ ನೇರವಾಗಿ ಮಾಸ್ತರಲ್ಲಿಗೆ ಹೋಗಿ, ಉತ್ಸಾಹದ ಅಂಟುಜಾಡ್ಯವನ್ನು ತಾವು ಹೊತ್ತುತಂದೆವೆಂದು ತಿಳಿಸಿದರು. ತಮ್ಮಂತೆಯೇ ಇದ್ದ ನೂರಾರು ಜನರನ್ನು, ಹಳೆಯ ಸ್ನೇಹಿತರಾದ ಪ್ರಭು-ಧಾಂಡಿಗ-ಕೇಳಪ್ಪನ್ ಮತ್ತಿತರರನ್ನು, ರೈತ ನಾಯಕರನ್ನು ಅವರು ಕಂಡುಬಂದಿದ್ದರು.

ಆ ಹುಡುಗರ—ಹುಡುಗರೆಂದು ಇನ್ನು ಕರೆಯಲಾಗದಂತಹ ಯುವಕರ—ನಡೆನುಡಿಯಲ್ಲಿನ ನೂತನ ದಿಟ್ಟತನವನ್ನು ಕಂಡು, ಒಂದೇ ಸಮ್ಮೇಳನ ಅವರಲ್ಲಿ ಮಾಡಿದ್ದ ಮಾರ್ಪಾಟನ್ನು ಗಮನಿಸಿ ಮಾಸ್ತರಿಗೆ ಹರ್ಷವೆನಿಸಿತು.

ಹಿಂತಿರುಗಿದವರು ತಾವು ಊರಲ್ಲಿ ಇಲ್ಲದೆ ಇದ್ದಾಗ ಕೃಷ್ಣನ್ ನಾಯರಿಗೊದಗಿದ ದುರ್ಗತಿಯ ವಿವರ ತಿಳಿದು ಬೇಸರಪಟ್ಟರು. ಆದರೆ ಅವರು ತುಂಬಿತಂದಿದ್ದ ಉತ್ಸಾಹದ ಹೊನಲಿನೆದುರು ಆ ಬೇಸರ ಕ್ಷಣಿಕವಾಯಿತು.

ಇವರೆಲ್ಲ ಜಾತ್ರೆಗೆ ಹೋಗಿದ್ದರೆಂದೇ ಹಳ್ಳಿಯಲ್ಲೆಲ್ಲರೂ ನಂಬಿದ್ದುದರಿಂದ ರಾತ್ರೆಯ ಹೊತ್ತು ಗೋಪ್ಯವಾಗಿ ಅಪ್ಪುವಿನ ಮನೆಯಲ್ಲಿ ಅವರು ಒಂದು ಗೂಡುವುದು ಕಷ್ಟವಾಗಲಿಲ್ಲ.

ಆ ರಾತ್ರೆ ಮಾಸ್ತರು ಬಹಳ ಹೊತ್ತು ಮಾತನಾಡಿದರು. ಅದು ಗಣಿತದ ಪಾಠವಾಗಿರಲಿಲ್ಲ, ಭೂಗೋಳ-ಚರಿತ್ರೆಯಾಗಿರಲಿಲ್ಲ. ಆದರೆ ಅವರ ಮಾತಿನಲ್ಲಿ ಶತಶತಮಾನಗಳಿಂದ ರೈತರಿಗೆ ಆದ ಅನ್ಯಾಯದ ಲೆಕ್ಕಾಚಾರವಿತ್ತು. ಕಯ್ಯೂರನ್ನೂ ಒಳಗೊಂಡ ಇಡೀ ಭೂಲೋಕದ ವೃತ್ತಾಂತವಿತ್ತು; ಅನಾದಿ ಕಾಲದಿಂದಲೂ ಮಾನವ ಒಳ್ಳೆಯ ಬದುಕಿಗಾಗಿ ನಡೆಸಿದ ಹೋರಾಟದ ಇತಿಹಾಸವಿತ್ತು. ಆ ಇತಿಹಾಸದ ಒಂದಂಶವಾಗಿತ್ತು, ಕೃಷ್ಣನ್ ನಾಯರ್ ಹೊಲದಲ್ಲಿ ಬೆಳೆಸಿದ ಪೈರನ್ನು ರಕ್ಷಿಸುವುದಕ್ಕೋಸ್ಕರ ನಡೆದ ಯತ್ನ ಕೂಡ. ಏನು ಬೇಕು ನಮ್ಮ ಜನಕ್ಕೆ? ದಾಸ್ಯದ ಬೇಡಿ ಕಳಚಬೇಕು; ಗುಲಾಮಗಿರಿಯ ನೊಗ ಕೆಳಕ್ಕಿಳಿಸಬೇಕು; ನಮ್ಮ ಭೂಮಿಯ ಮೇಲೆ ಸ್ವತಂತ್ರರಾಗಿ ನಾವು ನಡೆಯುವ ಹಾಗಾಗಬೇಕು....

.... ಅದಕ್ಕೋಸ್ಕರ ಕಯ್ಯೂರಿನ ರೈತರು ವಹಿಸಬೇಕಾದ ಪಾತ್ರ....

"ಸಂಘಟನೆಯೇ ಪ್ರಥಮ ಹೆಜ್ಜೆ. ಮೊದಲು ಕಯ್ಯೂರು ರೈತ ಸಂಘ ಸ್ಥಾಪಿಸಬೇಕು."

ಹೊಸತಾದುದೇನನ್ನೂ ಮಾಸ್ತರು ಹೇಳಿದಂತೆ ಅಲ್ಲಿದ್ದ ಯಾರಿಗೂ ತೋರಲಿಲ್ಲ. ತಮ್ಮೆಲ್ಲರ ಮನಸ್ಸಿನೊಳಗಿದ್ದ ವಿಚಾರಗಳಿಗೆ ಮಾಸ್ತರು ರೂಪು ಕೊಟ್ಟಹಾಗಿತ್ತು.

ಆ ಮಾತು ಮುಗಿದಾಗ ಅಪ್ಪುವಿನ ತಂದೆ ಕೇಳಿದ:

"ಯಾವಾಗ ಶುರು ಮಾಡ್ತೋಣ? ಯಾವಾಗಲೂ ಇದೇ ರೀತಿ ರಾತ್ರೆ ಹೊತ್ತು ನಾವು ಸೇರ್ತಿರ್ಬೇಕೇನು?"

"ಏನೂ ಬೇಕಾಗಿಲ್ಲ. ಬಹಿರಂಗವಾಗಿಯೇ ಸಭೆ ನಡೆದು ಸಂಘ ಸ್ಥಾಪನೆಯಾಗಲಿ" ಎಂದರು ಮಾಸ್ತರು.

ಚಿರುಕಂಡನ ತಂದೆ ಮೊದಲೇ ಗೊತ್ತಾಗಿದ್ದಂತೆ, ಕೃಷ್ಣನ್ ನಾಯರ ಪ್ರಕರಣಕ್ಕೆ ಸಂಬಂಧಿಸಿ ತಮ್ಮ ಕರ್ತವ್ಯವೇನೆಂಬುದನ್ನು ಸೂಚಿಸಿದ. ನಾಯರ್ ಈ ವರ್ಷವೂ ಜಮೀನ್ದಾರರಿಂದ ಸಾಲ ಪಡೆಯದ ಹಾಗೆ, ಆತನಿಗೆ ಧಾನ್ಯದ ವಂತಿಗೆ ಕೊಟ್ಟು ಎಲ್ಲರೂ ನೆರವಾಗಬೇಕೆಂಬ ಸಲಹೆ ಸರ್ವಮಾನ್ಯವಾಯಿತು.

ಅದಾದ ಮರುದಿನವೇ ನಂಬಿಯಾರರು ಶಾಲೆಯತ್ತ ಬಂದು, ಕೈಯಲ್ಲಿದ್ದ 'ಮಾತೃಭೂಮಿ' ಪತ್ರಿಕೆಯನ್ನಾಡಿಸುತ್ತ ಕಠೋರ ಸ್ವರದಲ್ಲಿ ಹೇಳಿದರು:

"ನೋಡಿದಿರಾ ಮಾಸ್ತರೆ? ತಳಿಪರಂಬದ ಹತ್ತಿರ ರೈತ ಸಮ್ಮೇಳನವಾಯ್ತಂತೆ! ಓದಿದಿರೋ ಇಲ್ಲೋ? ಸಾಮ್ರಾಜ್ಯಶಾಹಿಯೂ ನಾಶವಾಗ್ಬೇಕು; ಜಮೀನ್ದಾರಿ ಶಾಹಿಯೂ ನಾಶವಾಗ್ಬೇಕೂಂತ ಅಲ್ಲಿ ಕೂಗಾಡಿದರಂತೆ. ನಿಜ ಹೇಳಿ ಮಾಸ್ತರೆ,

ನಮ್ಮ ರೈತರು ಕೂಡ ಅಲ್ಲಿಗೆ ಹೋಗಿದ್ದರಲ್ಲ?"

ಪರಿಸ್ಥಿತಿ ವಿಷಮಿಸುವುದಕ್ಕೆ ಇನ್ನು ಬಹಳ ಕಾಲವಿಲ್ಲವೆಂದು ಗೊತ್ತಿದ್ದರೂ ತಾವಾಗಿಯೇ ದುಡುಕಬಾರದೆಂದು ಮಾಸ್ತರೆಂದರು:

"ಇದ್ದರೂ ಇರಬಹುದು. ನನಗಂತೂ ಯಾರೂ ಹೇಳಿಲ್ಲ."

"ಆಹಾ! ಆಹಾ!"

ಅದರ ಮಾರನೆಯ ದಿನವೂ ನಂಬಿಯಾರರು ಬುಸುಗುಟ್ಟುತ್ತ ಬಂದರು.

"ಮಾಸ್ತರೆ! ಒಂದು ಸುದ್ದಿ ಕೇಳಿದಿರೋ? 'ಮಾತೃಭೂಮಿ' ಪತ್ರಿಕೆಗೆ ಕಳಿಸಿದರೂ ಕಳಿಸ್ಬಹುದು."

ಶಾಂತವಾಗಿರಲು ಯತ್ನಿಸುತ್ತ ಮಾಸ್ತರೆಂದರು:

"ಏನಾಯ್ತು?"

"ಕಯ್ಯೂರಿನಲ್ಲಿ ಇನ್ನೆರಡು ದಿವಸದಲ್ಲಿ ರೈತಸಂಘ ಸ್ಥಾಪನೆಯಾಗ್ತದಂತೆ! ಹಹ್ಹಾ!"

"ಹಾಗೇನು ? ಯಾರಂದರು?"

ನಂಬಿಯಾರರು ಕೆಂಗಣ್ಣಿನಿಂದ ಮಾಸ್ತರರನ್ನ ನೋಡಿ, "ಥೂ!" ಎಂದು ಉಗುಳಿದರು. ಒಮ್ಮೆಲೆ ಸಂಬೋಧನೆ ಏಕವಚನಕ್ಕಿಳಿಯಿತು; ಕಂಠ ಮತ್ತಷ್ಟು ನಿಷ್ಠುರವಾಯಿತು.

"ಒಳ್ಳೆ ಕನ್ನಡಿ ಹಾವು ಕಣಯ್ಯ ನೀನು! ಎಂಥವನ್ನನ್ನ ಇಷ್ಟು ಕಾಲ ಸಾಕ್ದೆ! ಅಬ್ಬ!"

ಇನ್ನು ಸ್ವಾಭಿಮಾನದ ರಕ್ಷಣೆ ತಪ್ಪಾಗದೆಂದು ಮಾಸ್ತರು ನಂಬಿಯಾರರನ್ನು ನೇರವಾಗಿ ನೋಡಿ ನುಡಿದರು:

"ನೀವು ವಿಶ್ವಸ್ಥ ಸಮಿತಿಯ ಪ್ರಮುಖರು, ನಾನು ಶಾಲೆಯ ಉಪಾಧ್ಯಾಯ. ಕೆಲಸ ಎಷ್ಟಿದೆಯೋ ಅಷ್ಟು ಮಾತಾಡಿ!"

ನಂಬಿಯಾರರು ಹಾವಿನ ಹೆಡೆ ಮುಟ್ಟಿದ ಹಾಗಾಗಿ, ಒಮ್ಮೆ ಅಳುಕಿ, ಮತ್ತೆ ರೌದ್ರದ ಮುಖವಾಡ ಧರಿಸಿ, ದರ್ಪದಿಂದ ಅಂದರು:

"ನಮ್ಮ ಶಾಲೆಯ ವಾರ್ಷಿಕ ಪರೀಕ್ಷೆಗೆ ಇನ್ನೆಷ್ಟು ದಿವಸ ಇದೆ?"

"ಒಂದು ತಿಂಗಳು."

"ಅಷ್ಟು ದಿವಸ ತೆಪ್ಪಗಿದ್ದು ಕೆಲಸ ಮಾಡಿ. ಪರೀಕ್ಷೆ ಮುಗಿದ್ಮೇಲೆ ಚಾರ್ಜು ನನಗೆ ವಹಿಸ್ಕೊಟ್ಟು ಇಲ್ಲಿಂದ ಗಾಡಿ ಬಿಡಿ !"

ಕಯ್ಯೂರಿನ ರೈತರ ಸಭೆಯಲ್ಲಿ ಮೊದಲ ಬಾರಿಗೆ ಹಾರಾಡಿದ ಕೆಂಪು ಬಾವುಟ ಸಂಘದ ತಾತ್ಕಾಲಿಕ ಕಛೇರಿಯಾದ ಅಪ್ಪುವಿನ ಮನೆಯಲ್ಲಿ ನೆಲೆ ನಿಂತಿತು. ತನ್ನ ಶಾಲೆಯ ಪರೀಕ್ಷೆಗಾಗಿ ಸಿದ್ಧತೆ ಮಾಡುತ್ತಿದ್ದ ಅಪ್ಪುವಿನ ತಮ್ಮನೂ ಅದೇ ಆಗ ಸರಾಗವಾಗಿ ಓದತೊಡಗಿದ್ದ. ಕಿರಿಯವನಾದ ಕುಟ್ಟಿ ಅಭಿಮಾನದಿಂದ ಆ ಬಾವುಟವನ್ನು ನೋಡಿದನು. ಅವರ ಅಜ್ಜಿ ಬಾರಿಬಾರಿಗೂ ಆ ಬಾವುಟದ ಅರ್ಥವನ್ನು ಕೇಳುತ್ತ, ಏನಾದರೂ ನೆಪ ಹೂಡಿಕೊಂಡು ಹೆಚ್ಚುಹೆಚ್ಚಾಗಿ ಹೊರ ಹೋಗಿ ಛಾವಣಿಯ ಮೇಲೆ ಪಟಪಟನೆ ಹಾರಾಡುತ್ತಿದ್ದ ಬಾವುಟವನ್ನು ನೋಡುತ್ತ ಸಂತೋಷಪಟ್ಟಳು. ಅಪ್ಪುವಿನ ತಾಯಿ ನೀರು ಸೇದಲು ಬಂದಾಗ, ಮುಸುರೆ ತಿಕ್ಕುತ್ತಿದ್ದಾಗ, ಇಲ್ಲವೆ ಹೋರಿಗಳಿಗೆ ಮೇವು ನೀಡಲು ಹೊರಟಾಗ, ಬಾವುಟವನ್ನು ಕದ್ದುಕದ್ದು ನೋಡಿದಳು. ಮುಹಡಿಯ ಮನೆಯ ಸಿರಿವಂತಿಕೆಯೇ ತನಗೆ ದೊರೆಯಿತೆನ್ನುವಂತೆ ಆಕೆಗೆ ಮಹದಾನಂದವಾಯಿತು.

ಚಿರುಕಂಡನ ಮನೆಯಲ್ಲಿ ಆತನ ತಾಯಿ ಕೇಳಿದಳು:

"ಕಾರ್ಯದರ್ಶಿ ನೀನಲ್ವ ಚಿರುಕಂಡ?"

"ಹೌದು."

"ಮತ್ತೆ ಬಾವುಟ ಅಲ್ಲಿ ನೆಟ್ಟಿದ್ದಾರೇ...."

ತಾಯಿಯ ಈ ಅಸೂಯೆ ಕ್ಷಮ್ಯವಾದುದೆಂದು ತೋರಿತು ಚಿರುಕಂಡನಿಗೆ. ಆತ ಮುಗುಳುನಕ್ಕ.

"ಬಾವುಟ ಅಲ್ಲೇ ಇರ್ಬೇಕಮ್ಮ. ನಾವು ಜಮೀನ್ದಾರರ ಒಕ್ಕಲು. ಬಾವುಟ ಇಲ್ಲಿದ್ದರೆ, ಯಾವಾಗಬೇಕಾದರೂ ಅವರು ಅದನ್ನು ಕಿತ್ತು ಹಾಕಿಸ್ಬಹುದು. ಅಪ್ಪು ಮನೇಲಾದರೆ ಹಾಗಲ್ಲ."

ಮಗ ಆಡಿದ ತಿಳಿವಳಿಕೆಯ ಮಾತು ಕೇಳಿ ತಾಯಿ ತಲೆದೂಗಿದಳು. ತಾವು ಹೊಲ ಕಳೆದುಕೊಂಡ ನೆನಪು ಕಹಿಯಾಗಿದ್ದರೂ ತಮ್ಮೊಬ್ಬನೇ ಮಗ ಊರಿನ ರೈತರೆಲ್ಲರ ಗೌರವಕ್ಕೆ ಪಾತ್ರನೆಂಬ ಹೆಮ್ಮೆ ಸಿಹಿಯಾಗಿತ್ತು.

ಸಂಘಶಕ್ತಿಯ ಸಂಕೇತವಾದ ಬಾವುಟ ಊದ್ದಗಲಕ್ಕೂ ತನ್ನ ಸಂದೇಶ ಸಾರಿತು. ಅದರ ಪ್ರಭಾವ ಎಷ್ಟೆಂಬುದನ್ನು ತಿಳಿಯಲು ಹೆಚ್ಚು ದಿನ ಬೇಕಾಗಲಿಲ್ಲ. ಆ ವಾರದ ಅಂತ್ಯದೊಳಗೆ, ಮಾಸ್ತರು ನೀಲೇಶ್ವರಕ್ಕೆ ಹೋಗಿದ್ದ ಒಂದು ಭಾನುವಾರ, ಹೊಸದುರ್ಗದ ಪೋಲಿಸ್ ಫೌಜದಾರರು (ಸಬ್ ಇನ್ಸ್‌ಪೆಕ್ಟರು) ಇಬ್ಬರು

ಪೋಲೀಸರೊಡನೆ ಬಂದರು. ಆ ಆಗಮನ ಎಷ್ಟೋ ಜನ ರೈತರನ್ನು ಕಳವಳಕ್ಕೆ ಈಡುಮಾಡಿತು. ಸಂಘದ ಜನವನ್ನು ಸಂದೇಹದಿಂದಲೇ ಕಂಡಿದ್ದ ಸಾಕಷ್ಟು ಹೊಲವಿದ್ದ ಶ್ರೀಮಂತ ರೈತರು ಕೆಲವರು, ಹೀಗಾಗ್ತದೆ ಅಂತ ನಮಗೆ ಗೊತ್ತೇ ಇತ್ತು" ಎಂದರು. ಯಾವ ಪಕ್ಷವನ್ನೂ ವಹಿಸದೆ ತಟಸ್ಥರಾಗಿದ್ದ ಬೇರೆ ಕೆಲವರು ಮುಂದೇನಾಗುವುದೋ ಎಂದು ಕುತೂಹಲದಿಂದ ಕಾದು ನೋಡಿದರು.

ಬಂದ ಪೋಲೀಸರ ಸ್ನಾನ, ಊಟ, ವಿಶ್ರಾಂತಿ ಮುಗಿದು, ಮಧ್ಯಾಹ್ನ ದಾಟಿದ ಮೇಲೆ, ಅಪ್ಪುವಿಗೆ ಕರೆ ಬಂತು. ಜಮೀನ್ದಾರರ ಒಬ್ಬ ಆಳೂ ಕೆಂಪು ಟೋಪಿಯ ಒಬ್ಬ ಪೋಲೀಸನೂ ಅಂಗಳದಲ್ಲಿ ನಿಂತು, "ತಕ್ಷಣ ಬರಬೇಕಂತೆ" ಎಂದರು.

"ಎಲ್ಲಿಗೆ?" ಎಂದ ಅಪ್ಪು.

"ಜಮೀನ್ದಾರರ ಮನೆಗೆ."

"ನಾವು ಅವರ ಒಕ್ಕಲಲ್ಲ. ಏನಾದರೂ ಕೆಲಸವಿದ್ದರೆ ಇಲ್ಲಿಗೆ ಬರ್ಲಿ. ಅವರ ಬದಲು ಪಟೇಲರೇನಾದರೂ ನನ್ನನ್ನು ಕರೆದರೆ ಖಂಡಿತ ಬರ್ತೇನೆ."

ಆಳು ಸಿಡಿಮಿಡಿಗುಟ್ಟುತ್ತ ಪೋಲೀಸರೊಡನೆ ಹಿಂತಿರುಗಿದ. ಅಪ್ಪುವಿನ ತಂದೆ ಮನೆಯಲ್ಲಿರಲಿಲ್ಲ. ಮಗ ಹೀಗೆ ಉತ್ತರಕೊಟ್ಟುದು ಸರಿಯಾಯಿತೊ ಇಲ್ಲವೊ ಎಂಬ ಸಂಶಯ ತಾಯಿಗಿದ್ದರೂ, ಮಗನ ಧೈರ್ಯವನ್ನು ಕಂಡು ಮೂಕಸಂತೋಷ ಆಕೆಯನ್ನು ಆವರಿಸಿತು. ಅಜ್ಜಿ ಗಾಬರಿಯಾಗಬಹುದು ಎಂದಿದ್ದ ಅಪ್ಪು. ಆದರೆ ಆ ವೃದ್ಧೆಯೂ ಮೌನವಾಗಿ ಗಂಭೀರವಾಗಿಯೇ ಇದ್ದಳು.

ಅಷ್ಟರಲ್ಲೇ ಚಿರುಕಂಡ ಬಂದ.

ಸ್ವಲ್ಪ ಹೊತ್ತಿನಲ್ಲಿ ಜಮೀನ್ದಾರರ ಮನೆಯಲ್ಲಿದ್ದ ಪಟೇಲರಿಂದ ಕರೆಬಂತು. ಅಲ್ಲೇ ಪೋಲೀಸರೂ ಇದ್ದರೆಂಬುದು ಸ್ಪಷ್ಟವಾಗಿತ್ತು. ಆಳುವ ಶಕ್ತಿಯ ಬಾಧಿಗೆಯ ಭಟರೊಡನೆ ಮೊದಲ ಪ್ರತ್ಯಕ್ಷ ಭೇಟಿಗಾಗಿ ಜನಶಕ್ತಿಯ ಪ್ರತಿನಿಧಿಗಳಾಗಿದ್ದ ಅಪ್ಪು ಮತ್ತು ಚಿರುಕಂಡ ಅಲ್ಲಿಗೆ ಹೊರಟರು.

ದೂರದಲ್ಲಿ ಪ್ರೇಕ್ಷಕನಾಗಿ ನಿಂತಿದ್ದ ಕೋರ ಒಬ್ಬನ ಹೊರತಾಗಿ, ರೈತ ಸಂಘದ ಕಡೆಯವರು ಯಾರೂ ಅಲ್ಲಿರಲಿಲ್ಲ. ನಂಬಿಯಾರರೂ ನಂಬೂದಿರಿಯೂ ಫೌಜದಾರರೂ ಮೊಗಸಾಲೆಯಲ್ಲಿ ಕುಳಿತಿದ್ದರು. ಪಕ್ಕದಲ್ಲೆ ಬೆಂಚಿನ ಮೇಲೆ ಪಟೇಲರಿದ್ದರು. ಅವರ ಹಿಂದೆ ಜವಾನ. ಬಳಿಯಲ್ಲೇ ಖಾಕಿ ಪೋಷಾಕು ಧರಿಸಿ ನಿಂತಿದ್ದ ಪೋಲೀಸರು. ಜಮೀನ್ದಾರರ ಅನಧಿಕೃತ ಕಾಲಾಳುಗಳಾದ ಹಲವರು.

ಫೌಜದಾರರು ಮತ್ತು ನಂಬಿಯಾರರು ಸಿಗರೇಟು ಸೇದುತ್ತಲೇ ಇದ್ದರು. ನಂಬೂದಿರಿಗಿಂತ ತಾನು ಹೆಚ್ಚು ವಿದ್ಯಾವಂತನೆಂಬುದನ್ನು ತೋರಿಸುವ ಆ

ಅವಕಾಶವನ್ನು ಬಿಟ್ಟುಕೊಡಲಾರದೆ ನಂಬಿಯಾರರು, ಆಗೊಮ್ಮೆ ಈಗೊಮ್ಮೆ, ತಮಗೆ ತಿಳಿದ ಹರಕು ಮುರುಕು ಇಂಗ್ಲಿಷಿನಲ್ಲಿ ಪೋಲೀಸ್ ಅಧಿಕಾರಿಯೊಡನೆ ಮಾತನಾಡುತ್ತಿದ್ದರು.

ಅಪ್ಪು ಮತ್ತು ಚಿರುಕಂಡ ಮೊಗಸಾಲೆಯನ್ನು ತಲಪಿ ಪಟೇಲರಿಗೆ ವಂದಿಸಿದರು. ಸ್ವಭಾವತಃ ಪುಕ್ಕಲು ಮನುಷ್ಯನಾಗಿದ್ದ ಪಟೇಲರೆಂದರು:

"ಕೂತ್ಕೊಳ್ಳಿ."

ಆದರೆ ಕುಳಿತುಕೊಳ್ಳಲು ಆಗ ಯಾವ ಆಸನವೂ ಅಲ್ಲಿ ಇರಲಿಲ್ಲ. ಅದನ್ನು ಗಮನಿಸದೆಯೆ ಪಟೇಲರು ಹಾಗೆ ಹೇಳಿದ್ದರು. ಆ ರೀತಿ ಅವರು ವಿನಯ ತೋರಿ ಮಾತನಾಡಿದುದನ್ನು ಕಂಡ ನಂಬಿಯಾರರ ಮೈ ಉರಿಯಿತು. ಅವರು ಸಿಗರೇಟನ್ನು ಕಚ್ಚಿದರು. ಹೊಗೆಸೊಪ್ಪು ತುಟಿಗಳಿಗೆ ಅಂಟಿಕೊಂಡಿತು. 'ಕೆಲಸ ಆರಂಭಿಸಿ,' ಎನ್ನುವಂತೆ ಫೌಜದಾರರತ್ತ ನೋಡಿದರು. ಆದರೆ ಪ್ರಾಸ್ತಾವಿಕವಾಗಿ ಒಂದು ಮಾತು ಹೇಳಬೇಕಾಯಿತು:

"ಹೊಸದುರ್ಗದಿಂದ ಇನ್ಸ್‌ಪೆಕ್ಟರ್ ಸಾಹೇಬರು ತನಿಖೆಗೆ ಬಂದಿದ್ದಾರೆ. ಇದ್ದದ್ದನ್ನು ಇದ್ದ ಹಾಗೇ ಹೇಳಿ. ನಿಮಗೇನೂ ತೊಂದರೆಯಾಗೋದಿಲ್ಲ."

ಅದು ಅಭ್ಯಾಸಬಲದಿಂದ ಅವರು ಆಡಿದ ಮಾತು. ನಿಂತಿದ್ದ ಅಪ್ಪುವಿಗೆ ತನ್ನ ಕೈಗಳನ್ನೇನು ಮಾಡಬೇಕೋ ತೋರಲಿಲ್ಲ. ಅಪರಾಧಿಯ ಹಾಗೆ ಕೈಕಟ್ಟಿ ನಿಲ್ಲುವುದಂತೂ ಆತನಿಗೆ ಇಷ್ಟವಿರಲಿಲ್ಲ. ಒಂದು ಕೈಯನ್ನು ಆತ ಬೆನ್ನ ಹಿಂದೆ ಇರಿಸಿದ; ಇನ್ನೊಂದನ್ನು ಅಡ್ಡಾದಿಡ್ಡಿಯಾಗಿ ಚಲಿಸಿದ. ಚಿರುಕಂಡನಿಗೂ ಹಾಗೆಯೇ ಆಯಿತು. ಆದರೂ ಆತ ನಿಶ್ಚಲನಾಗಿದ್ದ, ಎಂಥೆಂಥ ಪ್ರಶ್ನೆಗಳು ಬರಬಹುದೆಂಬುದನ್ನು ಊಹಿಸುವುದರಲ್ಲೇ ಆತನ ಮನಸ್ಸು ನೆಟ್ಟಿತು.

ಮೀಸೆ ಬಿಡದೆ ನುಣ್ಣನೆ ಮುಖಕ್ಷೌರ ಮಾಡಿಕೊಂಡಿದ್ದ ಸುರೂಪಿಯಾಗಿದ್ದ ಫೌಜದಾರರು ಕೇಳಿದರು: "ನಿಮ್ಮ ಮುಖಂಡರು ಯಾರು?"

ಚಿರುಕಂಡನೆ ಮುಂದಾಗಿ ಉತ್ತರವಿತ್ತ:

"ನಮ್ಮಲ್ಲಿ ಮುಖಂಡರೂ ಇಲ್ಲ, ಹಿಂಬಾಲಕರೂ ಇಲ್ಲ. ನಾವೆಲ್ಲಾ ರೈತರು."

"ಈತ ಚಿರುಕಂಡ" ಎಂದರು ಪಟೇಲರು.

"ಓಹೋ! ನೀನೇ ಏನು ಕಾರ್ಯದರ್ಶಿ ಚಿರುಕಂಡ ಅನ್ನೋನು?"

ಉಗ್ರವಾಗಿದ್ದ ಧ್ವನಿಯಲ್ಲಿ ಅಪ್ಪುವೆಂದ:

"ನಮ್ಮಲ್ಲಿ ಬಹುವಚನದಿಂದ ಸಂಬೋಧಿಸಿ ಮಾತನಾಡೋದು ಪದ್ಧತಿ."

ಫೌಜದಾರರು ಹುಬ್ಬು ಗಂಟಿಕ್ಕಿ ಅಪ್ಪುವನ್ನು ನೋಡಿದರು. ನಂಬಿಯಾರರು

ಅಸಹನೆಯಿಂದ ಆಸನದ ಮೇಲೆಯೇ ಅತ್ತಿತ್ತ ಮಿಸುಕುತ್ತ ಮತ್ತೊಂದು ಸಿಗರೇಟು ಹಚ್ಚಿದರು. ನಂಬೂದಿರಿ ಕಲ್ಲಿನಲ್ಲಿ ಕಡೆದ ವಿಗ್ರಹದ ಹಾಗೆ ನಿರ್ವಿಕಾರವಾಗಿ ಕುಳಿತರು. ಅಪ್ಪುವಿನ ಉದ್ಧಟತನದ ಮಾತು ಕೇಳಿದ ಊಳಿಗದ ಕೆಲವರು, ಅದಕ್ಕೆ ಶಿಕ್ಷೆಯಾಗಿ ಈಗಲೆ ಆತನಿಗೆ ಹೊಡೆತ ಬೀಳಬಹುದೆಂದು ಭಾವಿಸಿದರು. ಕೋರ, ಹೆಜ್ಜೆ ಇಡುತ್ತ ಸಮೀಪಕ್ಕೆ ಬಂದ.

ಮುಗುಳುನಕ್ಕು 'ಹೂಂ'ಕರಿಸಿ ವ್ಯಂಗ್ಯಧ್ವನಿಯಲ್ಲಿ ಫೌಜದಾರರೆಂದರು:

"ತಾವೇನೋ ಹಾಗಾದರೆ ಕಾರ್ಯದರ್ಶಿಯವರು?"

"ಹೌದು ನಾನೇ?"

"ನಿಮಗೆ ತಲೆಮರೆಸ್ಕೊಂಡು ತಿರುಗಾಡೋ ಕ್ರಾಂತಿಕಾರರ ಪರಿಚಯ ಇಲ್ವೋ?"

"ನಮಗೆ ಅದೊಂದೂ ಗೊತ್ತಿಲ್ಲ."

"ಪಂಡಿತ ಅಂತ ಒಬ್ಬನ ಹೆಸರು ಕೇಳಿದ್ದೀರೋ?"

ಅಪ್ಪುವಿನ ಮುಖ ಕೆಂಪಗಾಯಿತು. ಚಿರುಕಂಡ ಶಾಂತನಾಗಿಯೇ ನುಡಿದ:

"ನಮಗೆ ಯಾವ ಪಂಡಿತರ ಪರಿಚಯವೂ ಇಲ್ಲ."

"ಹಾಗೇನು? ತಳಿಪರಂಬ ರೈತ ಸಮ್ಮೇಳನಕ್ಕೆ ಯಾರು ನಿಮ್ಮನ್ನು ಕಳಿಸ್ದೋರು?"

"ಯಾರೂ ಇಲ್ಲ. ಜಾತ್ರೆಗೆ ಹೋದವರು ನಾವಾಗಿಯೇ ಸಮ್ಮೇಳವನ್ನೂ ನೋಡಿದೆವು."

ಅವರೆಗೂ ಸುಮ್ಮನಿದ್ದ ನಂಬೂದಿರಿ ಬಾಯಿ ತೆರೆದು, "ಜಾತ್ರೆಗೆ ಹೋದರು, ಮರುಳಾದರು" ಎಂದು ಹೇಳಿ ಖೊಖೋ ಎಂದು ನಕ್ಕರು. ನಂಬೂದಿರಿಯ ನಗು ಕೇಳಿ ಫೌಜದಾರರ ವಿಚಾರ ಸರಣಿ ಕಡಿದುಹೋಯಿತು. ಆದರೂ ಸುಧಾರಿಸಿಕೊಂಡು ಅವರೆಂದರು:

"ನಿಮ್ಮ ಸಂಘದ ಉದ್ದೇಶವೇನು?"

ಅಪ್ಪು ಉದ್ವೇಗದ ಸ್ವರದಲ್ಲಿ ಕೇಳಿದ:

"ಯಾವುದೋ ವಿಚಾರಣೆ ಮಾಡೋ ಹಾಗೆ ಪ್ರಶ್ನೆ ಕೇಳ್ತಿದ್ದೀರಲ್ಲ!"

ಫೌಜದಾರರು ಸ್ವರವೇರಿಸಿದರು:

"ಹೌದು, ವಿಚಾರಣೆಯೇ! ನಿಮ್ಮ ಮೇಲೆ ದೂರು ಬಂದಿದೆ."

ಅಪ್ಪು ಕೆಣಕಿ ನುಡಿದ:

"ಹಾಗಾದರೆ ಹಿಡಕಂಡು ಹೋಗಿ; ನ್ಯಾಯಸ್ಥಾನದಲ್ಲಿ ವಿಚಾರಣೆ ನಡೀಲಿ!"

"ಯಾಕೆ, ಜೈಲಿಗೆ ಹೋಗೋದಕ್ಕೆ ಆಸೆಯಾಗ್ತಿದೆಯೊ?"

ಸಂವಾದದ ರೀತಿ ಬದಲಾಗಬೇಕೆಂದು ಚಿರುಕಂಡನೆಂದ:

"ನಮ್ಮ ಸಂಘದ ಧ್ಯೇಯ ಧೋರಣೆ ಏನೂಂತ ವಿವರಿಸಿ ನಾವೊಂದು ಕರ
ಪತ್ರ ಹೊರಡಿಸಿದ್ದೇವೆ. ನೀವು ನೋಡಿರಬಹುದು."

"ಹೂಂ."

"ಅದನ್ನೋದಿ. ಎಲ್ಲ ವಿಷಯವೂ ನಿಮಗೆ ತಿಳೀತದೆ."

"ರೈತರ ಹಿತರಕ್ಷಣೆ ಮಾಡೋದರ ಹೊರತು ಬೇರೆ ಉದ್ದೇಶವೇನೂ
ಇಲ್ಲವೊ?"

"ಹೇಳಿದೆನಲ್ಲ. ಎಲ್ಲಾ ಆ ಕರಪತ್ರದಲ್ಲಿದೆ."

ತೃಪ್ತಿಕರವಾದ ರೀತಿಯಲ್ಲಿ ಪ್ರಶ್ನೋತ್ತರ ನಡೆಯುತ್ತಿಲ್ಲವೆಂದು ನಂಬಿಯಾರರು
ಫೌಜದಾರರಿಗೆ ಹೇಳಿದರು: "ಆ ಬಾವುಟದ ವಿಷಯ ಕೇಳಿ."

ಫೌಜದಾರರು ಒಂದು ನಿಮಿಷ ಮೌನವಾಗಿದ್ದು ಅಂದರು:

"ಆ ಬಾವುಟ ನಿಮಗೆ ಯಾರು ಕೊಟ್ಟರು?"

"ನಾವೇ ಮಾಡಿದೆವು."

"ಅದನ್ನು ಹಾರಿಸೋದು ರಾಜದ್ರೋಹ ಅಂತ ನಿಮಗೆ ಗೊತ್ತೊ?"

"ಅದು ಯಾವ ದ್ರೋಹವೂ ಅಲ್ಲ. ಅದು ಅಖಿಲ ಭಾರತ ರೈತ ಸಂಘದ
ನಿಶಾನೆ. ಕಾನೂನುಬದ್ಧ."

"ಓಹೋ! ಕಾನೂನು ಬೇರೆ ಮಾತಾಡ್ತೀರೋ? ಎಷ್ಟು ಓದಿದ್ದೀರಪ್ಪ ನೀವು?"

"ನಿಮ್ಮಷ್ಟು ಓದಿಲ್ಲ!" ಎಂದ ಅಪ್ಪು.

ನಂಬಿಯಾರರು ಥಟಕ್ಕನೆ ಕುರ್ಚಿಯಲ್ಲೇ ಮೈ ನಿಡಿದು ಕುಳಿತು ಕೈಬೀಸಿ
ಕೂಗಾಡಿದರು.

"ಬಿಗಿಯಿರಿ ಅವನಿಗೆ ನಾಲ್ಕೇಟು ! ರ್‍ಯಾಸ್ಕಲ್ ! ಹ್ಯಾಗೆ ಆಡ್ತಿದ್ದಾನೆ ನೋಡಿ!"

ನಂಬಿಯಾರರ ಆಳುಗಳು ಅಪ್ಪುವಿನ ಮೇಲೆ ಧುಮುಕಲು ಮುಂದಾದರು.
ಆದರೆ ಆ ಕೆಲಸವನ್ನು ಕ್ರಮಬದ್ಧವಾಗಿ ಮಾಡಲು ಪೋಲೀಸರಿರುವರೆಂದು ಅವರು
ಸುಮ್ಮನಿರಬೇಕಾಯಿತು. ಪೋಲಿಸರೇನೋ ಸಿದ್ಧವಾಗಿದ್ದರು. ಆದರೆ ಫೌಜದಾರರ
ಸೂಚನೆ ಬರದೆ ಇದ್ದುದರಿಂದ, ಅವರು ಮುಂದುವರಿಯಲಿಲ್ಲ.

ಜಮೀನ್ದಾರರು ಕತ್ತನ್ನು ಮುಂದಕ್ಕೆ ಚಾಚಿ ಮೊಗಸಾಲೆಯ ಅಡ್ಡ ಗೋಡೆಯಾಚೆ
"ಥೂ!" ಎಂದು ಉಗುಳಿದರು.

ಫೌಜದಾರರು ಏರುದನಿಯಲ್ಲಿ ನುಡಿದರು:

"ಮಲಬಾರಿನಲ್ಲಿರೋ ಈ ರೋಗ ನಮ್ಮ ತಾಲ್ಲೂಕಿಗೂ ಹಬ್ಬಬೇಕೂಂತ
ಮಾಡಿದ್ದೀರೇನು? ಖಂಡಿತ ಬಿಡೋದಿಲ್ಲ! ನಾವಿರೋದು ಯಾತಕ್ಕೆ? ಹಿಂದೆ ದೊಡ್ಡ

ದೊಡ್ಡ ಸ್ವಾತಂತ್ರ್ಯ ಪುಢಾರಿಗಳನ್ನೇ ಜೈಲಿಗೆ ಕಳಿಸಿದ್ದೇವೆ! ನೀವು ಯಾವ ಲೆಕ್ಕ? ತಿಳೀತಾ?"

ಅಪ್ಪುವಿಗೆ ಬೆದರಿಕೆಯ ಈ ನುಡಿ ಮೆಚ್ಚುಗೆಯಾಗಲಿಲ್ಲ. ಆತ ಗಟ್ಟಿಯಾಗಿ ಹೇಳಿದ:

"ಯಾಕೆ ಹೀಗೆ ಕಿರಿಚ್ತೀರಿ? ನಾವು ನ್ಯಾಯದ ಹಾದೀಲೇ ನಡೀತಾ ಇದ್ದೇವೆ. ಯಾವ ತಪ್ಪೂ ಮಾಡಿಲ್ಲ. ಕಾನೂನು ಪ್ರಕಾರ ಏನಾದರೂ ಮಾಡೋದಿದ್ರೆ ಕ್ರಮ ಜರಗಿಸಿ. ಸುಮ್ನೆ ಮಾತಾಡ್ಬೇಡಿ!"

"ಸಾಕು ಮಾಡು!" ಎಂದು ಫೌಜುದಾರರು ಮುಷ್ಟಿಯಿಂದ ತನ್ನ ತೊಡೆಗೇ ಗುದ್ದಿದರು.

ಅಷ್ಟರಲ್ಲೆ ಸುದ್ದಿ ಹಬ್ಬಿ ರೈತರೆಲ್ಲ ನಂಬಿಯಾರರ ಮನೆಯತ್ತ ಧಾವಿಸಿ ಬರತೊಡಗಿದರು. ಸಂಘದ ಪ್ರಮುಖರು, ಸದಸ್ಯರಾದವರು, ಸದಸ್ಯರಾಗದವರು ಎಲ್ಲರೂ. ಹೆಂಗಸರೂ ಬಂದು ಸೇರಿದರು. ಮೊಗಸಾಲೆಯಲ್ಲಿ ಕುಳಿತಿದ್ದವರ ಎದೆ ಗುಂಡಿಗೆಗಳ ಬಡಿತ ತೀವ್ರವಾಯಿತು. ನಂಬಿಯಾರರೇ ಕಾಗದ ಬರೆದು ಪೋಲಿಸ್ ಅಧಿಕಾರಿಯನ್ನು ಕರೆಸಿದ್ದರು. ಆ ರೀತಿಯ ಬಲ ಪ್ರದರ್ಶನದಿಂದ ರೈತರಲ್ಲಿ ಭೀತಿ ಹುಟ್ಟಿಸಬಹುದೆಂಬುದು ಅವರ ಯೋಚನೆಯಾಗಿತ್ತು. ಈಗ ನೀರಮೇಲಿನ ಹೋಮವಾಗಿತ್ತು ಆ ಯತ್ನ. ಪೋಲೀಸರು ದಕ್ಷತೆಯಿಂದ ವರ್ತಿಸಿಯೆ ಇರಲಿಲ್ಲ. ಮದುವೆಯ ಮನೆಯೋ ಸಾವಿನ ಮನೆಯೋ ಎಂಬಂತೆ ನೆರೆಯುತ್ತಿದ್ದ ರೈತರನ್ನು ಕಂಡು ನಂಬಿಯಾರರು ಬಂಜೆ ಕ್ರೋಧದಿಂದ ತಪ್ತರಾಗಿ ಶತಪಥ ತುಳಿದರು.

ಈ ಪರಿಸ್ಥಿತಿಯನ್ನು ಬೇಗನೆ ಕೊನೆಗಾಣಿಸಿದಷ್ಟೂ ತಮಗೆ ಹಿತವೆಂದು ಫೌಜದಾರರು ಜಮೀನ್ದಾರರೆಡೆಗೆ ನೋಡಿದರು. ಅಲ್ಲಿಂದ ಯಾವ ನಿರ್ದೇಶವೂ ದೊರೆಯದಿರಲು ತಾವೇ, "ನೀವಿನ್ನು ಹೋಗಬಹುದು!" ಎಂದು ಅಪ್ಪು ಮತ್ತು ಚಿರುಕಂಡನಿಗೆ ಅಂದರು.

ನಂಬೂದಿರಿ ಎದ್ದು ಕ್ಷೀಣಸ್ವರದಲ್ಲಿ "ನಾನಿನ್ನು ಹೋಗ್ತೇನೆ, ಆಗದೆ?" ಎಂದು ನಂಬಿಯಾರರನ್ನು ಕೇಳಿದರು. ಅವರಿಗೆ ದೊರೆತುದು "ಹೂಂ" ಎಂಬ ಒಂದೇ ಸ್ವರದ ಉತ್ತರ.

ಸಂಘದ ಯುವಕ ಪ್ರಮುಖರಿಗೇ ತೊಂದರೆ ಸಂಭವಿಸಿತೆಂದು ಭಾವಿಸಿ, ರೈತರು ಓಡಿಬಂದಿದ್ದರು. ಆದರೆ ಹಾಗೇನೂ ಆಗದೆ ಇದ್ದುದನ್ನು ಕಂಡು, ಎಷ್ಟೋ ಜನರಿಗೆ ಸಮಾಧಾನವಾಯಿತು. ಅಲ್ಲಿ ನಡೆದ ಸಂಭಾಷಣೆಯನ್ನು ತಾವೇ ಕೇಳುವುದಾಗಲಿಲ್ಲ ಎಂದು ಸ್ವಲ್ಪ ನಿರಾಶೆಯೂ ಆಯಿತು.

"ಇಲ್ಲಿ ಯಾಕೆ ಗುಂಪು ಕೂಡ್ತೀರಾ? ಹೊರಡಿ!" ಎಂದು ಜಮೀನ್ದಾರರು ಗರ್ಜಿಸಿದರು.

ಫೌಜದಾರರೂ ಸನ್ನೆ ಮಾಡಿದುದನ್ನು ಕಂಡು ಪೋಲೀಸರು, "ಹೋಗಿ, ಮನೆಗ್ಹೋಗಿ!" ಎಂದು ಮೆಲ್ಲಮೆಲ್ಲನೆ ಜನರನ್ನು ಹಿಂದಕ್ಕೆ ತಳ್ಳಿದರು.

ಗುಂಪು ಅಲ್ಲಿಂದ ಹೊರಟಿತು. ಅಪ್ಪು ಮತ್ತು ಚಿರುಕಂಡರಿಗೆ ಅಂಟಿಕೊಂಡೇ ಸಂವಾದದ ವಿವರ ಕೇಳುತ್ತ, ಜನ ಮುಂದಕ್ಕೆ ಚಲಿಸಿದರು.

ಅಪ್ಪುವಿನ ತಂದೆ ಕೇಳಿದ:

"ಮಾಸ್ತರು ಊರಲ್ಲಿಲ್ವ?"

ಆ ಪ್ರಶ್ನೆಗೆ ಕೋರ ಉತ್ಸಾಹದ ಧ್ವನಿಯಲ್ಲಿ ಉತ್ತರವಿತ್ತ:

"ಇಲ್ಲ, ಊರಲಿಲ್ಲ. ಇವರಿಬ್ಬರೂ ಬರೋಕ್ಮುಂಚೆ ಮಾಸ್ತರ ವಿಷಯ ಬಂದಿತ್ತು. ಜಮೀನ್ದಾರರು ಮಾಸ್ತರನ್ನು ಬಾಯಿಗೆ ಬಂದ ಹಾಗೆ ಅಂದ್ರು. "ಇವತ್ತು ಊರಲ್ಲಿಲ್ಲ. ಇದ್ದಿದ್ರೆ ನಿಮ್ಮ ಮೂಲಕ ಬಿಸಿ ಮುಟ್ಟಿಸ್ಬಹುದಾಗಿತ್ತು. ಅಂತ ಫೌಜದಾರರಿಗೆ ಹೇಳಿದ್ರು. ಏನು ಧೈರ್ಯ!"

ಮಾಸ್ತರನ್ನು ಕುರಿತು ಅಷ್ಟು ಹಗುರವಾಗಿ ನಂಬಿಯಾರರು ಮಾತನಾಡಿದರೆಂಬ ವರದಿ ಅಸಹ್ಯವಾಗಿತ್ತು. ಚಿರುಕಂಡನೆಂದ:

"ಅವರು ಬಿಸಿ ಮುಟ್ಟಿಸೋ ರೀತಿ ಎಂಥದೂಂತ ಇವತ್ತು ನೋಡಿದೆವಲ್ಲ! ತಮ್ಮ ಸಾಮರ್ಥ್ಯ ತೋರಿಸ್ಬೇಕೂಂತ ನಂಬಿಯಾರರೇ ಪೋಲೀಸರ್ನ ಕರೆಸಿದ್ದು. ಕಡೆಗೆ ಏನಾಯ್ತು? ನಾವು ಬಗ್ಗಿದ್ದರೆ ಬೆನ್ನಿಗೊಂದು ಗುದ್ದು ಬೀಳ್ತಿತ್ತು. ಬಗ್ಗಲಿಲ್ಲ— ಸುಮ್ಮನಾದ್ರು."

ಅಷ್ಟರಲ್ಲಿ ಗುಂಪಿನಿಂದ ಒಬ್ಬನೆಂದ:

"ಇನ್ನು ಸ್ವಲ್ಪ ಹೊತ್ತಿನಲ್ಲೇ ಫೌಜದಾರರೂ ಪೋಲೀಸರೂ ರೈಲು ಸ್ಟೇಷನ್ನಿಗೆ ಹೊರಡ್ತಾರೆ. ಮೂರೇ ಜನ. ನಾವು ಅವರಿಗೆ ಬಿಸಿಮುಟ್ಟಿಸೋಣ್ವೇನು?"

"ಶ್!" ಎಂದ ಚಿರುಕಂಡ, ಯಾರು ಹಾಗೆ ಅಂದರೆಂದು ತಿರುಗಿನೋಡುತ್ತ.

"ಅಂಥ ವಿಚಾರ ಮಾಡ್ಬೇಡಿ. ಬೀದೀಲಿ ಹೋಗೋ ಮಾರೀನ ಮನೆಗೆ ಕರೆಯೋದೂಂತ ಅದಕ್ಕೇ ಹೇಳೋದು."

ಆ ಮಾತು ಒಪ್ಪಿಗೆ ಎಂಬಂತೆ ಇನ್ನೊಬ್ಬನೆಂದ:

"ಕೈತುರಿಸ್ತದೇಂತ ಕಲ್ಲುಬಂಡೆಗೆ ಗುದ್ದೋಕಾಗ್ತದೇನಪ್ಪ?"

ಅಲ್ಲಿಯೇ ಇದ್ದ ಕಣ್ಣ ಮಾತು ಸೇರಿಸಿದ:

"ಕಲ್ಲುಬಂಡೆ ಕೀಳೋದು ಬರಿ ಕೈಯಿಂದಲ್ಲ; ಅದಕ್ಕೆ ಬೇರೆ ಸಾಮಾನು ಬೇಕು!"

ಆ ಮಾತಿನಲ್ಲಿ ಸೂಚ್ಯವಾಗಿದ್ದುದು ತಮಗೆ ಅರ್ಥವಾಯಿತೆಂದು ಹಲವರು ನಕ್ಕರು.

ಮುಂದೆ ಜನ, ಅರ್ಧದಲ್ಲೇ ಬಿಟ್ಟು ಬಂದಿದ್ದ ಕೆಲಸಗಳನ್ನು ಪೂರ್ತಿಗೊಳಿಸಲೆಂದು ಚದರಿದರು.

.....ಹೊಸದುರ್ಗಕ್ಕೆ ಹೊರಟುನಿಂತ ಫೌಜದಾರರಿಗೂ ಪೋಲೀಸರಿಗೂ ಉಡುಗೊರೆಯನ್ನೇನೋ ಜಮೀನ್ದಾರರು ಕೊಟ್ಟರು. ಆದರೆ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸದಿರಲಿಲ್ಲ. ಅವರೆಂದರು:

"ನೀವು ಮೃದು, ಬಹಳ ಮೃದು."

ತಮ್ಮ ಕೆಳಗಿನ ಪೋಲೀಸರೆದುರು ಅಂತಹ ಪ್ರಮಾಣಪತ್ರವನ್ನು ಪಡೆಯಲು ಇಷ್ಟವಿಲ್ಲದೆ ಫೌಜದಾರರು ಇಂಗ್ಲೀಷಿನಲ್ಲೆಂದರು:

"ನಮ್ಮ ಕಷ್ಟ ನಿಮಗೆ ಅರ್ಥವಾಗೋದಿಲ್ಲ. ನೀವಿನ್ನೂ ಹತ್ತೊಂಭತ್ತನೇ ಶತಮಾನದ ನ್ಯಾಯ ಮಾತಾಡ್ತೀರಿ. ಈಗ ಪರಿಸ್ಥಿತಿ ಬದಲಾಗಿದೆ. ಮೊದಲಾದರೆ ಇಷ್ಟ ಬಂದಹಾಗೆ ಏನು ಬೇಕಾದರೂ ಮಾಡಬಹುದಿತ್ತು. ಈಗ ಹಾಗಲ್ಲ. ಪತ್ರಿಕೆಗಳಿವೆ. ಕಾಂಗ್ರೆಸಿನವರೂ ಗಲಾಟೆ ಎಬ್ಬಿಸ್ತಾರೆ. ಆದ್ದರಿಂದ ಪ್ರತಿಯೊಂದೂ ನ್ಯಾಯ ಪ್ರಕಾರ ನಡೀತಿದೆ ಅಂತ ತೋರಿಸ್ಕೊಂಡೇ ಮುಂದುವರೀಬೇಕು."

"ಆದರೆ ನೀವು ಮುಂದುವರಿಯೋ ಹೊತ್ತಿಗೆ ಎಲ್ಲಾ ಮುಗಿದಿರ್ರದೆ!"

"ಹಾಗಂದರೇನು?"

"ಆ ಅಪ್ಪು-ಚಿರುಕಂಡ ಎಲ್ಲಾ ನನ್ನ ಕಣ್ಣೆದುರಲ್ಲೇ ಹುಟ್ಟಿ ಬೆಳ್ದೋರು. ನೋಡಿ, ಹ್ಯಾಗೆ ಸೊಕ್ಕಿದ್ದಾರೆ ! ಅವರಿಗೆ ಎರಡು ಬಿಗೀಬೇಕಾಗಿತ್ತು."

ತಮ್ಮ ಖಾಕಿ ಚಡ್ಡಿಯೊಳಕ್ಕೆ ಕೈತೂರಿಸುತ್ತ ಫೌಜದಾರರೆಂದರು:

"ಬಿಗಿಯೋದು ದೊಡ್ಡ ಮಾತಲ್ಲ. ಆದರೆ ಎಷ್ಟೊಂದು ಜನ ಸೇರಿಬಿಟ್ಟರೂ ಅಂತ ನೋಡಿದಿರೋ ಇಲ್ವೋ?"

"ಜನ ನೋಡಿ ಗಾಬರಿಯಾದ್ರೇನೋ ನೀವು? ಅಷ್ಟೇ ಜನ ಇಲ್ಲಿಗೆ ಬಂದು ನಿಮ್ಮೆದುರಲ್ಲೇ ಮನೆಗೆ ಬೆಂಕಿ ಇಡ್ತೇವೆಂತ ಹೇಳಿದರೂ ಸುಮ್ಮನಿರ್ತೀರೇನೊ?"

"ಹಾಗಲ್ಲ ಸರ್."

"ಹಾಗಲ್ಲ ಹೀಗೆ!"

"ನೀವು ತಪ್ಪು ತಿಳಕೊಂಡಿದ್ದೀರಿ. ನಿಮಗೆ ಅಸಮಾಧಾನಪಡಿಸಿ ನಮಗೆ ಸಿಗೋ ಲಾಭವಾದರೂ ಏನು? ಇನ್ನೊಂದ್ಸಲ ನೋಡಿ. ಹೀಗಾಗೋದಿಲ್ಲ."

ಫೌಜದಾರರು ಸ್ವಲ್ಪ ಹಾದಿಗೆ ಬಂದರೆಂದು ಜಮೀನ್ದಾರರೆಂದರು:

"ನನಗೆ ಕೋಪ ಬಂತೂಂತ ನೀವು ತಪ್ಪು ತಿಳೀಬೇಡಿ. ಬೇಸರವಾಯ್ತು ಅದಕ್ಕೆ ಹಾಗೆಂದೆ."

"ಇರಲಿ, ದೊಡ್ಡದಲ್ಲ"

"ನೀವು ಇಲ್ಲಿಯ ಪರಿಸ್ಥಿತಿ ವಿಷಯ ಮೇಲಧಿಕಾರಿಗಳಿಗೆ ಜೋರಾಗಿಯೇ ವರದಿ ಮಾಡ್ಬೇಕು."

"ಮಾಡ್ತೇನೆ."

"ಮೊಳಕೇಲೇ ಚಿವುಟದಿದ್ದರೆ, ಮರವಾದ್ಮೇಲೆ ಕಷ್ಟ. ಇವರ ಒಗ್ಗಟ್ಟಿನಿಂದಾಗಿ ನಮಗಿನ್ನು ಇದರಿಂದ ಯಾವ ರೀತಿಯ ಸಹಾಯವೂ ಸಿಗೋದಿಲ್ಲ. ನಮ್ಮ ಸಾಲ ವಸೂಲಾಗೋದು ಕಷ್ಟವಾಗ್ತದೆ. ಗೇಣಿ ಸಂದಾಯವೂ ನಿಂತು ಹೋಗ್ಬಹುದು. ಗೌರವ ಮರ್ಯಾದೆ ಯಾವುದೂ ಇಲ್ಲದೆ ನಾವು ಊರು ಬಿಡ್ಬೇಕಾಗ್ತದೆ, ಅಷ್ಟೇ..... ಹಾಂ..... ಇದು ನಮಗೆ ಸಂಬಂಧಿಸಿದ್ದು ಮಾತ್ರವಲ್ಲ ಇವರೆಲ್ಲ ಸರಕಾರದ ಮಾತನ್ನೂ ಆಡ್ತಾರೆ. ಸಾಮ್ರಾಜ್ಯಶಾಹಿಯನ್ನು ನಿರ್ನಾಮ ಮಾಡ್ತೇವೆಂತ ಪ್ರತಿಜ್ಞೆ ತಗೊಂಡಿದ್ದಾರಂತೆ. ಆ ಮಾಸ್ತರು ಹುಡುಗರ್ನ ಹ್ಯಾಗೆ ಕೆಡಿಸ್ತಿದ್ದ ಅನ್ನೋದಂತೂ ಮಧ್ಯಾಹ್ನವೇ ಹೇಳಿದ್ದೇನೆ. ಇವರು ಗಾಂಧೀವಾದಿಗಳಂತೂ ಅಲ್ಲ. ನೀವು ಊಹಿಸಿದ ಹಾಗೆ ಕ್ರಾಂತಿಕಾರರೇ ಇರಬಹುದು. ನನ್ನ ಅಭಿಪ್ರಾಯ, ಈ ರೈತ ಸಂಘದ ಮೇಲೆಯೇ ನಿಷೇಧಾಜ್ಞೆ ಹೊರಿಸ್ಬೇಕು. ಏನೇಳ್ತಿರಾ?"

ನಂಬಿಯಾರರ ಮಾತುಗಳನ್ನೆಲ್ಲ ಮೌನವಾಗಿ ಕೇಳಿದ ಫೌಜದಾರರೆಂದರು:

"ನಿಷೇಧಾಜ್ಞೆ ಹೊರಡಿಸೋದು ಪ್ರಾಂತ ಸರಕಾರಕ್ಕೆ ಸಂಬಂಧಿಸಿದ ವಿಷಯ. ರೈತ ಸಂಘ ಅನ್ನೋದು ಎಲ್ಲಾ ಕಡೇಲೂ ಇದೆ ನೋಡಿ."

"ಅದು ನನಗೆ ತಿಳೀದಾ? ನಿಷೇಧಿಸೋ ಹಾಗೆ ನೀವು ಒತ್ತಾಯಿಸ್ಬೇಕೂಂತ ನಾನಂದೆ."

"ಹೂಂ."

"ಇದು ನನ್ನೊಬ್ಬನದೇ ಅಲ್ಲ; ನಂಬೂದಿರಿ ಜಮೀನ್ದಾರರ ಅಭಿಪ್ರಾಯವೂ ಇದೇ ಅಂತ ಬರೆದ್ಬಿಡಿ.... ಆತ ಮಹಾ ಪುಕ್ಕಲು. ಹ್ಯಾಗೆ ಕೂತಿದ್ದಾಂತ ನೋಡಿದಿರೋ ಇಲ್ಲವೂ? ನಾಳೆ ಈ ರೈತರೆಲ್ಲ, 'ಜಮೀನು ನಮ್ಮದೇ'—ಅಂದರೆ, 'ಒಪ್ದೆ, ನಿಮ್ಮದೇ'—ಅನ್ನೋ ಜಾತಿ. ಇಂಥವರನ್ನು ನಂಬಿಕೊಂಡು ನಾವು ಕೆಲಸ ಮಾಡ್ಬೇಕು! ಇಲ್ಲಿ ದಿನ ಕಳೆಯೋದು ಎಷ್ಟು ಕಷ್ಟ, ಗೊತ್ತೋ?"

ಹೌದು, ಹೌದೆನ್ನುವಂತೆ ಫೌಜದಾರರು ಮುಖಭಾವದ ಮೂಲಕ ಸಂಪೂರ್ಣ ಸಹಾನುಭೂತಿಯನ್ನು ವ್ಯಕ್ತಪಡಿಸಿದರು.....

ಫೌಜದಾರರು ಹೊಸದುರ್ಗಕ್ಕೆ ಒಯ್ಯಲೆಂದು ಕಯ್ಯೂರಿನ ತರಕಾರಿ ಹಣ್ಣು ಹಂಪಲುಗಳ ದೊಡ್ಡ ಬುಟ್ಟಿ ಸಿದ್ಧವಾಯಿತು. ಹೊತ್ತುಕೊಳ್ಳಲು ಪೋಲೀಸರು ಮುಂದಾದರೂ, ರೈತರೆದುರು ಪೋಲೀಸರ ಘನತೆಗೆ ಚ್ಯುತಿ ಬರಬಾರದೆಂದು, ಚೆರ್ವತ್ತೂರು ರೈಲು ನಿಲ್ದಾಣದವರೆಗೂ ಒಬ್ಬ ಆಳನ್ನು ನಂಬಿಯಾರರು ಕಳುಹಿಸಿಕೊಟ್ಟರು.

ಬೀಳ್ಕೊಡುತ್ತ ಅವರು, ಆಗಾಗ್ಗೆ ಭೇಟಿಕೊಡುತ್ತಿರಲು ಆಹ್ವಾನ ನೀಡಿದರು. ಅವರೆಂದರು:

"ಈ ಸಲ ಎಲ್ಲ ಅವಸರದಲ್ಲೇ ಆಯ್ತು. ಮುಂದಿನ ಸಾರಿ ಬಂದಾಗ ಏಳೆಂಟು ದಿವಸ ಇಲ್ಲೇ ಕ್ಯಾಂಪ್ ಮಾಡಿ. ಕಯ್ಯೂರಿನ ಆತಿಥ್ಯ ಎಂಥದ್ದೂಂತ ತೋರಿಸಿಕೊಡ್ತೇನೆ!...."

.....ಆ ರಾತ್ರಿಯೇ ರೈತಸಂಘದ ಕಾರ್ಯಸಮಿತಿ ಸಭೆ ಸೇರಿ ಹಗಲು ಹೊತ್ತು ನಡೆದ ಘಟನೆಗಳನ್ನು ಪರಿಶೀಲಿಸಿತು. ನೀಲೇಶ್ವರದಿಂದ ಕತ್ತಲಾದಾಗ ಹಿಂತಿರುಗಿದ ಮಾಸ್ತರೂ ಸಭೆಯಲ್ಲಿ ಭಾಗವಹಿಸಿದರು.

ತಾವು ಇಲ್ಲದೇ ಇದ್ದಾಗ ಪೋಲೀಸರ ಆಗಮನದಂತಹ ಮುಖ್ಯ ಘಟನೆಯೊಂದು ಜರಗಿ ಎಲ್ಲವೂ ಸರಿಯಾದ ರೀತಿಯಲ್ಲೇ ನಡೆದುದನ್ನು ಕಂಡು, ಮಾಸ್ತರಿಗೆ ಸಂತೋಷವಾಯಿತು. ತಾವು ಕಯ್ಯೂರು ಬಿಡಬೇಕಾದ ಪರಿಸ್ಥಿತಿಯನ್ನು ಕುರಿತು ನೀಲೇಶ್ವರದಲ್ಲಿ ಸಹಬಾಂಧವರೊಡನೆ ಚರ್ಚಿಸಿ ಬರಲು ಹೋಗಿದ್ದ ಅವರಿಗೆ, ನಿಶ್ಚಿಂತೆಯಿಂದ ತಾವಿನ್ನು ಈ ಊರಿನಿಂದ ಹೊರಡಬಹುದೆಂದು ತೋರಿತು.

ಸಂಘ ಮುಂದೆ ಮಾಡಬೇಕಾದ ಕೆಲಸ ಕಾರ್ಯಗಳ ಬಗೆಗೆ ದೀರ್ಘ ಚರ್ಚೆ ನಡೆಯಿತು. ಬರಲಿದ್ದುದು ಮಳೆಗಾಲ. ರೈತರಿಗೆ ಹೆಚ್ಚು ಬಿಡುವಿರುವ ಸಮಯ. ಆಗ ಹಳ್ಳಿಯ ರೈತರನ್ನು ಹಲವಾರು ಗುಂಪುಗಳಾಗಿ ವಿಂಗಡಿಸಿ, ಕಥೆ ಹಾಡುಗಾರಿಕೆಗಳ ಕಾಲಕ್ಷೇಪದ ಜತೆಗೆ ಅಭ್ಯಾಸ ಕೂಟಗಳು ನಡೆಯಬೇಕೆಂದಾಯಿತು. ಇನ್ನು ಓದು ಬಾರದ ಗಂಡಸರು ಹೆಂಗಸರಿಗೆ ಅಲ್ಲಲ್ಲಿ ತರಗತಿಗಳು. ವರ್ಷಕ್ಕೆ ಒಂದಾಣೆ ಪಡೆದು ಪ್ರಾಯಸ್ಥರಾದ ರೈತರೆಲ್ಲರನ್ನೂ ಸಂಘಕ್ಕೆ ಸೇರಿಸುವುದು.

ಮಳೆಗಾಲ ಮುಗಿಯುವ ಹೊತ್ತಿಗೆ ಸಂಘಕ್ಕೋಸ್ಕರ ಸ್ವಂತದ್ದೊಂದು ಗುಡಿಸಲನ್ನು ಕಟ್ಟುವ, ಅಲ್ಲಿ ವಾಚನಾಲಯ ತೆರೆಯುವ, ಸಲಹೆ ಬಂತು. ಅದಕ್ಕೆ, ಊರಿನ ಕೇಂದ್ರದಲ್ಲೇ ಎಲ್ಲಾದರೂ ಜಾಗ ಸಿಗುವುದೇನೋ ಎಂದು ಅವರು ವಿಚಾರಿಸಿದರು.

ಸಮಿತಿಯ ಒಬ್ಬ ಸದಸ್ಯ ನುಡಿದ:

"ಜಾಗ ಗೊತ್ತು ಮಾಡುವ ಜವಾಬ್ದಾರಿ ನನಗಿರಲಿ. ತಂದೆಗೂ ಅಣ್ಣನಿಗೂ ಹೇಳಿ ಒಪ್ಪಿಸ್ತೇನೆ. ನಮ್ಮ ಹೊಲದ ಉತ್ತರಕ್ಕೆ ಖಾಲಿ ಜಾಗ ಇದೆಯಲ್ಲ ಅಲ್ಲೇ ಕಟ್ಟಬಹುದು. ಕಯ್ಯೂರಿಗೆಲ್ಲ ಅದು ಕೇಂದ್ರವೇ."

ಆ ಸಲಹೆ ಮಾಡಿದವನು ಪೊಡವರ ಕುಂಞಂಬು.

ಅಪ್ಪುವಿನ ತಂದೆಯೆಂದ:

"ನಮ್ಮ ಜಾಗದಲ್ಲೂ ಕಟ್ಟಬಹುದಾಗಿತ್ತು. ಆದರೆ ಇದು ಹಳ್ಳಿಗೆ ಕೇಂದ್ರವಲ್ಲ.... ಆಗಲಿ. ಹಾಗೇ ಆಗಲಿ. ಪೊಡವರ ಕುಂಞಂಬು ಹೇಳಿದ್ದನ್ನು ವರದಿ ಪುಸ್ತಕದಲ್ಲಿ ಬರ್ಕೊಳ್ಳಿ."

ಸೀಮೆಎಣ್ಣೆ ದೀಪದ ಹೊಗೆ ಬೆಳಕಿನಲ್ಲಿ, ನೆಲದ ಮೇಲೆ ಮಂಡಿಯೂರಿ, ಚಿರುಕಂಡ ಅದನ್ನು ಬರೆದುಕೊಂಡ; ನೇರವಾಗಿ ಕುಳಿತು, ಕೆಳಕ್ಕೆ ನೋಡುತ್ತ ಇತರರಿಗೆ ಕೇಳಿಸುವಂತೆ ಬರೆದುದನ್ನೋದಿದ.

ಹಿಂದೆ ಗೋಡೆಗೊರಗಿ ಕುಳಿತಿದ್ದರು ಮಾಸ್ತರು. ಅವರ ಕಣ್ಣು ಮಂಜಾಯಿತು. ಯಾರಿಗೂ ಕಾಣಿಸದಂತೆ, ಭುಜದ ಮೇಲಿದ್ದ ಅಂಗವಸ್ತ್ರವನ್ನೆತ್ತಿ ಅವರು ತಮ್ಮ ಕಣ್ಣುಗಳಿಗೆ ಒತ್ತಿಕೊಂಡರು.

## ೧೩

ಒಂದು ಸಂಜೆ ಕಣ್ಣ ಅಪ್ಪುವನ್ನು ಹುಡುಕಿ ಬಂದು, "ರಾತ್ರಿಯ ಊಟಕ್ಕೆ ನಮ್ಮನೆಗೆ ಬಾ ರಾಜ" ಎಂದ.

"ಕೇಳಿದಿಯಾ ಅಮ್ಮ?" ಎಂದು ಅಪ್ಪು ತಾಯಿಯನ್ನು ಕರೆದ.

"ಏನೋ ಕಣ್ಣ ಸಮಾಚಾರ? ದೇವಕಿಗೆ ಬಯಕೆ ಊಟವೇನೋ?" ಎಂದಳು ಅಪ್ಪುವಿನ ತಾಯಿ.

ಆ ಊಹೆಯಲ್ಲಿ ನಿಜಾಂಶವಿದ್ದುದರಿಂದ ಕಣ್ಣನ ಮುಖ ರಂಗೇರಿತು. ಆತ ಮಾತನಾಡಲಿಲ್ಲ.

"ಆಹ್ಹಾ!" ಎಂದ ಅಪ್ಪು "ಅಮ್ಮ ಊಹಿಸಿದ್ದು ನಿಜವೇ." ತಾಯಿಯತ್ತ ನೋಡಿ ಆತನೆಂದ : "ಅಲ್ಲ, ನಿನಗೆ ಹ್ಯಾಗಮ್ಮ ಹೊಳೀತು ಇದು?"

"ಸಾಕು ಸಾಕು ! ಎಲ್ಲರೂ ನಿನ್ನ ಹಾಗೆ ಹಗಲು ರಾತ್ರೆ ಸಂಘ—ಬಾವುಟಗಳ ಧ್ಯಾನ ಮಾತ್ರ ಮಾಡ್ತಾರೇಂತ ತಿಳಿದ್ಯಾ?"

ಅಪ್ಪು ನಕ್ಕ; ಮರುಮಾತನ್ನಾಡಲಿಲ್ಲ. ಕಣ್ಣನತ್ತ ತಿರುಗಿ ಹೇಳಿದ:

"ಮಾಸ್ತರು, ಚಿರುಕಂಡ, ಎಲ್ಲರನ್ನೂ ಕರೆದಿದ್ದೇನು?"

"ಹೂ."

"ಸರಿ. ಎಷ್ಟು ಗಂಟೆಗೆ ಬರ್ಲಿ?"

ಕೈಗಡಿಯಾರವಿಲ್ಲದಿದ್ದರೂ ಹಾಗೆ ಕೇಳುವುದು, ಘಂಟೆಯ ಮಾತನ್ನಾಡುವುದು, ಶಿಸ್ತಿನ ಜೀವವಾದ ಅಪ್ಪುವಿಗೆ ಅಭ್ಯಾಸವಾಗಿತ್ತು.

"ಬಾ. ಬೇಗ್ನೆ ಬಾ."

"ಏಳು ಗಂಟೆಗೆ."

"ಹೂಂ."

...ಏಳು ಘಂಟೆಯ ಸುಮಾರಿಗೆ—ಅಪ್ಪುವಿನ ಮಾತಿನಲ್ಲೇ ಹೇಳುವುದಾದರೆ ಏಳು ಘಂಟೆಗೆ ಸರಿಯಾಗಿ—ಆತ ಕಣ್ಣನ ಗುಡಿಸಲನ್ನು ಸಮೀಪಿಸಿದ. ಹೆಂಗಸರ ಸ್ವರಗಳು ಕೇಳಿಬಂದವು. ಆದರೆ ಕಣ್ಣನ ಹೊರತಾಗಿ ಬೇರೆ ಗಂಡಸರು ಯಾರೂ ಅಲ್ಲಿ ಇದ್ದಂತೆ ತೋರಲಿಲ್ಲ.

ಕಣ್ಣ ಮುಗುಳ್ನಕ್ಕು ಸ್ವಾಗತಿಸಿದಾಗ, ಅಪ್ಪು ಕೇಳಿದ:

"ಇನ್ನೂ ಯಾರೂ ಬಂದಿಲ್ವ?"

ಕಣ್ಣನ ಮಾತಿನ ರೀತಿಯೂ ನಗೆಯ ಧ್ವನಿಯೂ ಯಾಕೋ ವಿಚಿತ್ರವಾಗಿದ್ದಂತೆ ಅಪ್ಪುವಿಗೆ ತೋರಿತು. ನಡುಮನೆಯಲ್ಲಿ ಹಣತೆಯ ದೀಪ ಥಾಳಾಗಿ ಉರಿಯುತ್ತಿತ್ತು. ಹಾಸಿದ್ದ ಚಾಪೆಯ ಮೇಲೆ ಅಪ್ಪು ಕುಳಿತುಕೊಳ್ಳುತ್ತಿದ್ದಂತೆ ಕಣ್ಣ ಹೇಳಿದ: "ನಮ್ಮತ್ತೆ ಊರಿನಿಂದ ಬಂದಿದ್ದಾರೆ."

ಆ ತಾಯಿ, ಹಿಂದೆ ದೇವಕಿ ವಿಧವೆಯಾದಾಗ ಮಗಳನ್ನು ಕರೆದುಕೊಳ್ಳಲಾಗದೇ ಇದ್ದ ಬಡವೆ. ಕಣ್ಣ ದೇವಕಿಯನ್ನು ಮದುವೆಯಾದಮೇಲೆ ಮಾತ್ರ ಎರಡು ಮೂರು ಸಾರೆ ಆಕೆ ಬಂದಿದ್ದಳು. ಅಂತೂ ಕಯ್ಯೂರಿಗೆ ಹೊಸಬಳಲ್ಲ. ಆಕೆಯ ಆಗಮನದಿಂದ ಆಶ್ಚರ್ಯವೇನೂ ಆಗದೆ ಅಪ್ಪುವೆಂದ:

"ಬೆಳಿಗ್ಗೆ ಬಂದರಾ?"

"ಹೂಂ."

ದೇವಕಿ ಅತ್ತ ಬಂದಳು. ಕಣ್ಣನ ಕೈಹಿಡಿದು ಬಹಳ ದಿನಗಳಾದ ಮೇಲೆ ಗರ್ಭಿಣಿಯಾದ ಆಕೆಯನ್ನು—ಆ ಅಕ್ಕನನ್ನು—ಕುತೂಹಲದಿಂದ ಅಪ್ಪು ನೋಡಿದ. ದೇವಕಿ ಮುಗುಳ್ನಕ್ಕು ಅಡುಗೆಮನೆಯತ್ತ ದಿಟ್ಟಿಸಿ ಕರೆದಳು:

"ಜಾನಕಿ, ಇಲ್ಲಿ ಬಾ!"

ಅಪ್ಪುವಿನ ಮನಸ್ಸು ಕೇಳಿತು—ಯಾರು ಈ ಜಾನಕಿ? ಅಮ್ಮನೂ ಅಲ್ಲ

ಅತ್ತೆಯೂ ಅಲ್ಲ. ಅವರನ್ನು ಹೆಸರು ಹಿಡಿದು ಕರೆಯುವುದೆಂದಿಲ್ಲ. ಹಾಗಾದರೆ ಯಾರು?

ಒಬ್ಬಳು ಹುಡುಗಿ ಬಂದು ದೇವಕಿಯ ಪಕ್ಕದಲ್ಲಿ ನಿಂತು, "ಯಾಕಕ್ಕಾ ಕರೆದೆ?" ಎಂದಳು.

ಆಕೆ ಯಾರೆಂಬುದು ಸ್ಪಷ್ಟವಾಯಿತು. ಒಮ್ಮೆಲೆ ಅಪ್ಪು ಅಧೀರನಾದ. ಕಣ್ಣನತ್ತ ನೋಡಿ ಆತನ ರಕ್ಷಣೆ ಬಯಸಿದ. ಆದರೆ ಕಣ್ಣ ಅಲ್ಲಿದ್ದರಲ್ಲವೆ? ಮೆಲ್ಲನೆ ಧೈರ್ಯ ತಂದುಕೊಂಡು ಅಪ್ಪು, ನಿಂತಿದ್ದವರತ್ತ ನೋಡಿದ. ಬರಿಯ ಅಡ್ಡ ಪಂಚೆ ರವಕೆಯಲ್ಲ. ಈಗಿನ ಪದ್ಧತಿಯಂತೆ ಸೀರೆ—ಸಾದಾ ಸೀರೆ. ಹಣತೆಯ ಬೆಳಕಿನಲ್ಲಿ ಕೆಂಪಗೆ ಕಾಣಿಸುತ್ತಿದ್ದ ತುಂಬು ಮುಖ. ತಾನು ಕುಳಿತಿದ್ದುದನ್ನು ಗಮನಿಸಿದೊಡನೆ ಲಜ್ಜೆಯಿಂದ ತಲೆಬಾಗಿ ಕದ್ದು ನೋಡಿದ ನೋಟ. ವಯಸ್ಸು ಹದಿನಾರೋ, ಹದಿನೇಳೊ...

"ಈಕೆ ನನ್ನ ತಂಗಿ. ಇವತ್ತು ಬೆಳಿಗ್ಗೆ ಅಮ್ಮನ ಜತೇಲಿ ಬಂದ್ಲು."

ಅಪ್ಪು ನಿದ್ದೆಯಿಂದ ಎಚ್ಚೆತ್ತವನಂತೆ "ಹಾಂ?" ಎಂದ. ಆ ಬಳಿಕ "ಹೂಂ" ಎಂದ.

ಹುಡುಗಿ ಒಳಕ್ಕೆ ಓಡಿದಳು. ದೇವಕಿಯೆಂದಳು:

"ಅಪ್ಪು ಬಂದಿದ್ದಾರೆ, ಅತ್ತೇ...."

'ಬಂದಿದ್ದಾನೆ' ಎಂದಿದ್ದುದು ಅಪ್ಪು ಸಂಘದ ಪ್ರಮುಖನಾದಮೇಲೆ 'ಬಂದಿದ್ದಾರೆ'ಯಾಗಿತ್ತು.

ಅಪ್ಪುವಿಗಾದುದು ತೀರಾ ಹೊಸ ಅನುಭವ. ಅದು ಸಂತೋಷದ ತಣುಪು ಎನ್ನೋಣವೆಂದರೆ, ಅಸಮಾಧಾನದ ಕಾವು ಅದರ ಹಿಂಬದಿಯಲ್ಲಿ ಹೆಡೆಯಾಡುತ್ತಿತ್ತು. ಊಟಕ್ಕೆ ತನ್ನೊಬ್ಬನನ್ನೇ ಕರೆದಿರಬೇಕೆಂಬ ಸಂದೇಹ ಈಗ ತಲೆದೋರಿ, ಆತನಿಗೆ ರೇಗಿತು.

ಊಟಕ್ಕೆಂದು ಕೆಲವೇ ಬಾಳೆ ಎಲೆಗಳನ್ನು ಕುಯ್ದು ಕಣ್ಣ ಒಳಕ್ಕೆ ಬರುತ್ತಿದ್ದಂತೆ ಅಪ್ಪುವೆಂದ:

"ಇದೇನೋ ಕಣ್ಣ? ನೀನು ಯಾರಿಗೂ ಹೇಳೇ ಇಲ್ಲಾಂತ ತೋರ್‍ತದೆ."

ಒಳಗೊಳಗೇ ನಗುತ್ತಿದ್ದರೂ, ಅಪ್ಪುವಿನ ಮುನಿಸಿನ ಧ್ವನಿಯಿಂದ ನೊಂದುಕೊಂಡವನಂತೆ ನಟಿಸಿ, ಕಣ್ಣ ಸುಮ್ಮನಿದ್ದ. ಒಂದು ಕ್ಷಣ ಬಿಟ್ಟು, ಶಾಂತವಾದ ಸ್ವರದಲ್ಲಿ ಆತನೆಂದ:

"ಅಪ್ಪು, ಅಮ್ಮ ಮಾಡಿದ ಕರಿಗಡುಬು ತಿನ್ನೋದಕ್ಕೇಂತ ಒಮ್ಮೆ ನಿನ್ನನ್ನು

ಕರಕೊಂಡುಬಂದಿದ್ದೆ, ನೆನಪಿದೆಯಾ? ಆದರೆ ಆ ಸಲ ಹಾಗೇ ಹೊರಟ್ಹೋದೆ. ಆಮೇಲೆ ಎಷ್ಟೋಸಾರೆ ನೀನು ಊಟಕ್ಕೆ ಬಂದಿದ್ದರೂ ಕರಿಗಡುಬು ಮಾಡಿರ್ಲಿಲ್ಲ. ಇವತ್ತು ಮಾಡಿದೆ. ಅದಕ್ಕೇ, ನಿನ್ನೊಬ್ಬನನ್ನೇ ಕರೆದದ್ದು."

ಕರಿಗಡುಬು ತಿನ್ನಲೆಂದು ಮೊದಲೊಮ್ಮೆ ಬಂದಿದ್ದ. ಆ ರಾತ್ರೆಯೊ, ಅದೆಂದೂ ಮರೆಯಲಾಗದ ನೆನಪು. ಕಣ್ಣನ ಮಾತುಗಳನ್ನು ಕೇಳುತ್ತ ಅಪ್ಪುವಿನ ಮನಸ್ಸು ನಿರ್ಮಲವಾಯಿತು; ಹೃದಯ ಹಗುರವಾಯಿತು. ಆತ ಲವಲವಿಕೆಯಿಂದ ಮಾತನಾಡತೊಡಗಿದ. ಹೆಂಗಸರು ಮುಖ್ಯವಾಗಿ—ದೇವಕಿ ಜಾನಕಿಯರು—ಜಾನಕಿ ದೇವಕಿಯರು—ತಮ್ಮ ಸಂಭಾಷಣೆಗೆ ಕಿವಿಗೊಡುತ್ತಿರುವೆಂಬ ಅರಿವಿನಿಂದಲೇ, ಆ ವಿಷಯ ಈ ವಿಷಯ ಪ್ರಸ್ತಾಪಿಸಿ ಅಪ್ಪು ಸ್ವಾರಸ್ಯವಾಗಿ ಮಾತನಾಡಿದ.... ಊಟವಾಯಿತು. ಅಪ್ಪು ವೀಳ್ಯದೆಲೆ ಹಾಕಿಕೊಳ್ಳಲಿಲ್ಲ. ಕಣ್ಣ ಒತ್ತಾಯಿಸಿದಾಗ ದೇವಕಿ, "ಅವರು ವೀಳ್ಯ ಹಾಕಿಕೊಳ್ಳದ ಬ್ರಹ್ಮಚಾರಿ! ಬಲವಂತ ಮಾಡ್ಬೇಡಿ" ಎಂದಳು. ಕಣ್ಣ ನಕ್ಕ. ಏನು ಹೇಳಬೇಕೆಂದು ತಿಳಿಯದೆ ಪೆಚ್ಚಾಗಿ ಅಪ್ಪುವೂ ನಕ್ಕ.

ಆತ ಹೊರಟು ನಿಂತಾಗ ಬಾಗಿಲ ಬಳಿಗೆ ಬಂದು ದೇವಕಿ ಕೇಳಿದಳು:

"ಬ್ಯಾಟರಿ ತರ್ಲಿಲ್ವ ಇವತ್ತು?"

"ಇಷ್ಟೊಂದು ತಿಂಗಳ ಬೆಳಕಿದೆ!"

"ಆದರೂ ತರಲಿಲ್ವೇನೋಂತ ಕೇಳ್ದೆ."

ಇದು ಅರ್ಥವಿಲ್ಲದ ಮಾತಾಗಿ !"

"ಆದರೂ ತರಲಿಲ್ವೇನೋಂತ ಕೇಳ್ದೆ."

ಇದು ಅರ್ಥವಿಲ್ಲದ ಮಾತಾಗಿ ಅಪ್ಪುವಿಗೆ ತೋರಿತು. ಆದರೆ ದೇವಕಿ ಒಳಕ್ಕೆ ತಿರುಗಿ ಹೇಳಿದಳು:

"ಬ್ಯಾಟರಿ ಅಂದರೆ ಇವರಿಗೆ ಪ್ರಾಣವಿದ್ದಹಾಗೆ!"

ಒಳಗಿನಿಂದ ಇಂಪಾದ ಕಿಲಕಿಲ ಮುಗ್ಧನಗು ಕೇಳಿಸಿತು. ಆ ನಗೆಯ ಗುಂಗಿನಲ್ಲೇ ಅಪ್ಪು ಹಾದಿ ನಡೆದ.

"....ಅಡುಗೆ ಚೆನ್ನಾಗಿ ಮಾಡಿದ್ದರೇನೊ?" ಎಂದು ತಾಯಿ ಮನೆಯಲ್ಲಿ ಕೇಳಿದಳು.

ಆತ "ಹೂಂ" ಎಂದ.

"ಎಲ್ಲರೂ ಬಂದಿದ್ದರಾ?"

ಮತ್ತೊಮ್ಮೆ "ಹೂಂ."

..... ಆ ರಾತ್ರೆ ನಿದ್ದೆ ಅಪ್ಪುವಿನ ಬಳಿಗೆ ಬರುವುದು ತಡವಾಯಿತು.

..... ಬೆಳಿಗ್ಗೆ ಎದ್ದ ಅಪ್ಪು ಎಲ್ಲವನ್ನೂ ಮರೆತವನಂತೆ ತಲೆಕೊಡವಿ, ಭತ್ತದ ಕಣಜ ಕಟ್ಟುವ ಕೆಲಸದಲ್ಲಿ ತಂದೆಗೆ ನೆರವಾದ. ಸಂಜೆ ಚಿರುಕಂಡನ ಭೇಟಿಯಾಯಿತು. ಆಗ, ರಾತ್ರೆ ತಾನು ಕಣ್ಣನ ಮನೆಗೆ ಊಟಕ್ಕೆ ಹೋಗಿದ್ದ ವಿಷಯ ಚಿರುಕಂಡನಿಗೆ ತಿಳಿಸಬೇಕೆಂದಿತು ಅಪ್ಪುವಿನ ಮನಸ್ಸು. ಆದರೆ ತನ್ನಿಂತಾನಾಗಿಯೇ ಆ ಯೋಚನೆ ಮರೆಯಾಯಿತು !

ಕಣ್ಣ ಯಾಕೆ ತನ್ನನ್ನು ಒಬ್ಬನನ್ನೇ ಊಟಕ್ಕೆ ಕರೆದಿದ್ದನೆಂಬುದನ್ನು ಅಪ್ಪು ತರ್ಕಿಸಿದ್ದ. ಕ್ರಾಂತಿಕಾರನಾದ ತಾನು ಅಂತಹ ಯೋಚನೆ ಮಾಡುವುದೇ ತಪ್ಪೆಂದು ಒಳದನಿ ಚೀರುತ್ತಿತ್ತು. ಕಣ್ಣನೇನಾದರೂ ಬಂದು ಆ ಪ್ರಸ್ತಾಪವೆತ್ತಿದರೆ ಚೆನ್ನಾಗಿ ಬಯ್ದುಬಿಡಬೇಕು ಎಂದುಕೊಂಡ ಅಪ್ಪು. ಆದರೆ ಕಣ್ಣ ಸಂಜೆ ಸಿಗಲಿಲ್ಲ. ಆದರಿಂದ ಅಪ್ಪುವಿಗೆ ಬೇಸರವಾಯಿತು.

ಮಾರನೆಯ ದಿನ ಉರಿಬಿಸಿಲಲ್ಲಿ ಅಪ್ಪು ನದಿಗೆ ಹೋಗಿ ತಣ್ಣನೆ ಸ್ನಾನ ಮಾಡಿದ. ಹಿಂದೊಮ್ಮೆ ಕಲ್ಲುಬಂಡೆಯ ಮೇಲೆ ಬಿಸಿಲಲ್ಲಿ ಮೈಯ ನೀರು ಆರಿಸಿಕೊಳ್ಳುತ್ತಿದ್ದಾಗ ದೇವಕಿಗೆ ಸಂಬಂಧಿಸಿ ಕಣ್ಣ ಆಡಿದ್ದ ಮಾತು ನೆನಪಾಗಿ ನಗುಬಂತು. ಆದರೆ ಮರುಕ್ಷಣವೇ ಕಸಿವಿಸಿ ಎನಿಸಿತು. 'ನದಿಯ ದಂಡೆಯುದ್ದಕ್ಕೂ ಮೇಲಕ್ಕೆ ಹೋದರೆ ಕಣ್ಣನ ಮನೆ ಸಿಗ್ತದೆ. ನಿನ್ನೆಯೆಲ್ಲ ಆತ ಕಾಣಸಿಕೊಂಡೇ ಇಲ್ಲ, ಮನೇಲಿದ್ದಾನೇನೋ ನೋಡ್ಬಹುದು' ಎಂದಿತು ಮನಸ್ಸು. ಮರುಕ್ಷಣವೇ ಆ ಬಯಕೆಯೊಳಗಿನ ಬಯಕೆ ಸ್ಪಷ್ಟವಾಗಿ, ಆತ ತನಗೆ ತಾನೇ ಛೀಮಾರಿ ಹಾಕಿದ.

ಆ ದಿನವೂ ಕಣ್ಣ ಕಾಣಸದಿದ್ದಾಗ ಅಪ್ಪುವಿನ ಮನಸ್ಸು ಅಸ್ತವ್ಯಸ್ತವಾಯಿತು.

"ಮೈ ಸರಿಯಾಗಿಲ್ವೇನೋ?" ಎಂದ ಚಿರುಕಂಡ.

"ಯಾಕೋ ಒಂಥರಾ ಇದ್ದೀಯಲ್ಲ ಅಪ್ಪು?" ಎಂದು ಮಾಸ್ತರು ಕೇಳಿದರು.

"ಏನಿಲ್ಲ, ಏನಿಲ್ಲ" ಎಂದು ಹೇಳಿ ಅಪ್ಪು ಅವರಿಂದ ತಪ್ಪಿಸಿಕೊಂಡ. ಆದರೆ ಮನಸ್ಸನ್ನು ಸುತ್ತುವರಿದ ಯೋಚನೆಗಳ ಮುತ್ತಿಗೆಯಿಂದ ಅಷ್ಟೇ ಸುಲಭವಾಗಿ ತಪ್ಪಿಸಿಕೊಳ್ಳುವುದು ಸಾಧ್ಯವಿರಲಿಲ್ಲ.

ಆದರೆ ಮರುದಿನ ಕಣ್ಣ ಸಿಕ್ಕಿದಾಗ ಅಪ್ಪು ಕೇಳಿದ:

"ಎಲ್ಲಿಗ್ಹೋಗಿದ್ದೆ ಎರಡು ದಿವಸ?"

"ಮನೇಲಿ ಇದ್ದೆನಪ್ಪ"

"ಹಾಗೇನು? ನಿಮ್ಮ ಅತ್ತೇನ ಬಿಟ್ಟುಬರೋದಕ್ಕೆ ನೀನೆಲ್ಲಾದರೂ ಊರಿಗೆ ಹೋದೆಯೇನೋಂತಿದ್ದೆ."

"ಬಿಟ್ಟು ಬರೋದೆ? ದೇವಕಿ ಬಾಣಂತಿಯಾಗೋವರೆಗೂ ಅವರೆಲ್ಲ ಇಲ್ಲೇ ಇರ್ತ್ತಾರೆ."

'ಅವರೆಲ್ಲ'—ಎಂದ ಪುಣ್ಯಾತ್ಮ! ಜಾನಕಿಯೂ ಇನ್ನಷ್ಟು ದಿವಸ ಇಲ್ಲೇ ಇರುವಳೆಂದಾಯಿತು.

ಕಣ್ಣ ಅಪ್ಪುವನ್ನೇ ನೆಟ್ಟದೃಷ್ಟಿಯಿಂದ ನೋಡುತ್ತಿದ್ದ. ತನ್ನ ಮನಸ್ಸಿನೊಳಗಿದ್ದುದನ್ನೇನಾದರೂ ಕಣ್ಣ ಓದಬಹುದೆಂದು ಅಪ್ಪು ಗಂಭೀರನಾಗಿ, "ಬಾ ಚಿರುಕಂಡನಲ್ಲಿಗೆ ಹೋಗೋಣ. ಮಳೆಗಾಲದ ಕಾರ್ಯಕ್ರಮದ ವಿಷಯ ಚರ್ಚಿಸ್ಬೇಕು" ಎಂದ.

ತನ್ನ ಜತೆಗಾತಿಯಾಗಬೇಕಾದ ಹೆಣ್ಣು ಜೀವಕ್ಕೆ ಸಂಬಂಧಿಸಿದ ಯೋಚನೆಗಳೆಲ್ಲಾ ಈವರೆಗೂ ಜಾನಕಿಯ ಆಗಮನಕ್ಕೋಸ್ಕರವೇ ಕಾದಿದ್ದುವೇನೋ ಎಂಬಂತೆ, ಈಗ ನೊಗಹರಿದು ಓಡಾಡಿದುವು. ಮಾಡಬೇಕಾದ ಕೆಲಸ ಬೆಟ್ಟದ ಹೊರೆಯಷ್ಟಿರುವಾಗ, ಸಾಧಿಸಬೇಕಾದ ಗುರಿ ಇನ್ನೂ ದೂರವಿರುವಾಗ, ಇಂತಹ ಯೋಚನೆ ಮಾಡಬಾರದು ಎಂದು ತನ್ನನ್ನು ತಾನೇ ಅಪ್ಪು ಟೀಕಿಸುತ್ತಿದ್ದ. ಯಾರೊಡನಾದರೂ ಈ ವಿಷಯ ಹೃದಯ ತೆರೆದು ಮಾತನಾಡಬೇಕು ಎನಿಸುತ್ತಿತ್ತು. ಆದರೆ, ಅವರೇನೆನ್ನುವರೋ ಎಂಬ ಅಳುಕು ಬಾಧಿಸುತ್ತಿತ್ತು. ಉದಾಹರಣೆಗೆ ಮಾಸ್ತರು. ಅವರಿಗೆ ತಿಳಿಸದೆ, ಸಲಹೆ ಕೇಳದೆ, ಯಾವ ಕೆಲಸವನ್ನೂ ಎಂದೂ ಅಪ್ಪು ಮಾಡಿದವನಲ್ಲ. ಆದರೆ, ಈ ವಿಷಯ ಅವರೊಡನೆ ಪ್ರಸ್ತಾಪಿಸುವುದು ಹೇಗೆ? ಸದ್ಯ: ಈ ಯೋಚನೆ ಬೇಡವೆಂದು ಸುಮ್ಮನಿರುವುದು ಸಾಧ್ಯವಿತ್ತು. ಆದರೆ ಆ ತಿಂಗಳ ಕೊನೆಯಲ್ಲಿ—ಇನ್ನು ಕೆಲವೇ ದಿನಗಳಲ್ಲಿ—ಮಾಸ್ತರು ಕಯ್ಯೂರು ಬಿಟ್ಟು ಹೋಗುವರೆಂಬ ಅರಿವು ಅಪ್ಪುವಿನ ಕಳವಳವನ್ನು ತೀವ್ರಗೊಳಿಸಿತು.

ಇದೆಲ್ಲದರ ಸೂಕ್ಷ್ಮ ಪ್ರತಿಬಿಂಬ ಆತನ ನಡೆನುಡಿಯಲ್ಲಿ ಕಾಣಿಸದೆ ಇರಲಿಲ್ಲ. ಚಿರುಕಂಡ, ಅಪ್ಪುವನ್ನೇನೋ ಬಾಧಿಸುತ್ತಿದೆ ಎಂದು ಮನಗಂಡ.

ಒಂದು ದಿನ ಅಗತ್ಯದೊಂದು ಕೆಲಸಕ್ಕಾಗಿ ಅಪ್ಪುವನ್ನು ಹುಡುಕಿಕೊಂಡು ಚಿರುಕಂಡ ಬಂದ. ಅಪ್ಪು ಮನೆಯಲ್ಲಿರಲಿಲ್ಲ. ಹೋಟಲಿನಲ್ಲೂ ಇರಲಿಲ್ಲ. ಕಣ್ಣನ ಮನೆಯಲ್ಲಿರಬಹುದೇನೋ ಎಂದು ಅಲ್ಲಿಗೆ ಹೋದ. ಅಲ್ಲಿಯೂ ಇರಲಿಲ್ಲ. ಆ ಮನೆಯಲ್ಲಿ "ಇಲ್ಲ" ಎಂದು ಉತ್ತರ ಕೊಟ್ಟವಳು ಒಬ್ಬ ಹುಡುಗಿ. ಮುಖಲಕ್ಷಣದಿಂದಲೇ ದೇವಕಿಯ ತಂಗಿ ಇರಬೇಕೆಂದು ಚಿರುಕಂಡ ಊಹಿಸಿದ. ನದಿಗೇನಾದರೂ ಹೋಗಿರಬಹುದೆಂದು ಅತ್ತ ನಡೆದ. ಅಲ್ಲಿ ಮರದ ನೆರಳಿನಲ್ಲಿ ಹಾಸುಗಲ್ಲಿನ ಮೇಲೆ, ತುಂಬಾ ವ್ಯಾಕುಲಕ್ಕೆ ಒಳಗಾದವನ ಹಾಗೆ ಮಲಗಿದ್ದ ಅಪ್ಪು

ಏನು? ಯಾಕೆ? ಎಂದು ಯೋಚಿಸಿದಾಗ, ವಿಷಯ ಸ್ಪಷ್ಟವಾದಂತೆ ಚಿರುಕಂಡನಿಗೆ ಒಮ್ಮೆಲೆ ಅನಿಸಿತು.

ಹತ್ತು ವರ್ಷಗಳ ಹಿಂದೆ ಚಿಕ್ಕವರಿದ್ದಾಗ ಆಟವಾಡುತ್ತಿದ್ದ ಹಾಗೆ ಮರದ ಮರೆಯಲ್ಲಿ ನಿಂತು ಚಿರುಕಂಡ, ಮಲಗಿದ ಅಪ್ಪುವಿನೆಡೆಗೆ ಪುಟ್ಟ ಕಲ್ಲೆಸೆದ. ಎರಡನೆಯದು ತಾಕಿತು. ಧಿಗ್ಗನೆ ಮಗ್ಗುಲು ಹೊರಳಿ, ಮೊಣಕೈಯೂರಿ ಕತ್ತೆತ್ತಿ ಅಪ್ಪು ಅತ್ತಿತ್ತ ನೋಡಿದ. ಚಿರುಕಂಡ ನಗುತ್ತ ಮರೆಯಿಂದ ಹೊರ ಬಂದ.

"ನಿರಾಶೆಯಾಯ್ತೇನೊ? ಯಾರೂಂತಿದ್ದೆ?"

ಅಪ್ಪುವಿನ ಮುಖ ಕೆಂಪಡರಿತು. ಆತ ಚಿರುಕಂಡನನ್ನು ದುರದುರನೆ ನೋಡಿ ಹೇಳಿದ: "ಬಾ, ಕೂತ್ಕೋ!"

ಬೇರೆ ದಿನವಾಗಿದ್ದರೆ, ಸೋಮಾರಿತನದ ವಿಷಯದಲ್ಲಿ ಚಿರುಕಂಡನ ಟೀಕೆಯ ಪೀಠಿಕೆಯಿಂದಲೇ ಸಂಭಾಷಣೆ ಮೊದಲಾಗುತ್ತಿತ್ತು. ಈ ದಿನ ಹಾಗೆ ಮಾಡದೆ ಚಿರುಕಂಡ ನೆರವಾಗಿಯೇ ವಿಷಯಕ್ಕೆ ಬಂದ.

"ಚೆರ್ವತ್ತೂರಿನಲ್ಲಿ ನಾಳೆ ರಾತ್ರೆ ಕಾರ್ಯಕರ್ತರ ಸಭೆ ಇಟ್ಟಿದ್ದಾರೆ. ನಿನಗೆ ತಿಳಿಸು ಅಂದರು ಮಾಸ್ತರು."

ಕರ್ತವ್ಯನಿಷ್ಠೆ ಇರುವೆಯ ಕಡಿತದಂತೆ ಅಪ್ಪುವನ್ನು ಎಚ್ಚರಗೊಳಿಸಿತು.

"ಹೂ. ಎಲ್ಲರಿಗೂ ಹೇಳಿದ್ಯಾ?"

"ನಾವಿಬ್ಬರೆ ಸಾಕು ಅಂದರು."

"ಮಾಸ್ತರು ಬರ್‍ತಾರಾ?"

"ಹೂಂ."

ಮಾಸ್ತರು ಕೂಡಾ ನಾಳೆ ಸಭೆಗೆ ಬರುವವರೆಂಬ ಸುದ್ದಿಯಿಂದ, ಅವರು ಬೇಗನೆ ಹೊರಟೇ ಹೋಗುವವರೆಂಬ ನೆನಪು ಜಾಗೃತವಾಗಿ, ಅಪ್ಪು ಮತ್ತೆ ಖಿನ್ನನಾದ. ಮುಖದಲ್ಲಾದ ಬದಲಾವಣೆಯನ್ನು ಗಮನಿಸಿದ ಚಿರುಕಂಡ:

"ಸ್ನಾನ ಆಯ್ತೇನು ?" ಎಂದು ಕೇಳಿದ.

"ಹೂಂ."

"ನಡಿ ಹಾಗಾದರೆ. ಬಟ್ಟೆ ಹಾಕ್ಕೋ."

....ಅವರು ನಡೆಯುತ್ತಿದ್ದಂತೆ ಚಿರುಕಂಡ ಹೇಳಿದ:

"ಬರ್‍ತಾ ಕಣ್ಣನ ಮನೆಗೆ ಹೋಗಿದ್ದೆ."

ಅಪ್ಪು ಸರಕ್ಕನೆ ಆತನತ್ತ ನೋಡಿದ. ಆ ನೋಟವನ್ನು ಗಮನಿಸಿ ಚಿರುಕಂಡ ಮುಂದುವರಿಸಿದ:

"ಬರ್ತಾ ಅಲ್ಲೇನಾದರೂ ಇರ್ತೀಯೇನೋಂತ ಹೋದದ್ದು."

"ಅಲ್ಯಾಕೆ ಇರ್ತೇನೆ ನಾನು?" ಎಂದ ಅಪ್ಪು. ಗೊಗ್ಗರವಾಗಿತ್ತು ಧ್ವನಿ.

"ಊರೆಲ್ಲ ಹುಡುಕಿ ನೀನು ಸಿಗದೆ ಅಲ್ಲಿಗೆ ಬಂದೆ" ಎಂದ ಚಿರುಕಂಡ. ನಾಲ್ಕು ಹೆಜ್ಜೆ ನಡೆಯುವ ತನಕ ಸುಮ್ಮನಿದ್ದು ಮತ್ತೆ ಹೇಳಿದ:

"ದೇವಕಿಯ ತಂಗಿ ಬಂದಿದ್ದಾಳೇಂತ ತೋರ್ತದೆ."

"ಹೌದು" ಎಂದ ಅಪ್ಪು. ಸ್ವಲ್ಪ ಹೊತ್ತು ಮಾತು ಅಲ್ಲಿಗೆ ನಿಂತಿತು.

ಚಿರುಕಂಡನೇ ತಿರುಗಿ ಮೊದಲು ಮಾಡಿದ:

"ಇನ್ನು ಮಳೆಗಾಲ. ಮದುವೆ ವಾಲಗ ದಿಬ್ಬಣಗಳಿಗೆ ಶುರು."

"ನನಗೆ ಯಾಕೆ ಹೇಳ್ತೀಯಾ ಅದನ್ನು?" ಎಂದ ಅಪ್ಪು ಸಿಟ್ಟಾಗಿ.

ಅಷ್ಟೇ ಸ್ವರವೇರಿಸಿ ಚಿರುಕಂಡ ನುಡಿದ:

"ಯಾಕೆ, ನೀನು ಮದುವೆ ಮಾಡ್ಕೊಬೇಕೂಂತಿದ್ದೀಯೇನು?"

"ಚಿರುಕಂಡ!"

ಪರಸ್ಪರರನ್ನು ತಿವಿದು ನೋಡಿದ ನೋಟಗಳೆರಡು, ಮತ್ತೆ ಅವರಿಬ್ಬರ ನಡುವೆ ಇಳಿಬಿಟ್ಟ ಮೌನದ ಪರದೆ....

ಸಂಜೆಯವರೆಗೂ ಅವರು ಜತೆಯಾಗಿಯೇ ಇದ್ದರು. ಹಲವಾರು ಮನೆಗಳಿಗೆ ಹೋಗಿ ಸದಸ್ಯರನ್ನು ಸೇರಿಸಿದರು. ಮಾತುಕತೆ, ಎಷ್ಟು ಬೇಕೋ ಅಷ್ಟೆ. ಹಾಂ— ಹೂಂ... ಹೌದು—ಅಲ್ಲ.

ರಾತ್ರೆ ಇಬ್ಬರೂ ಮನೆಗಳಕಡೆ ತಿರುಗಿದರು. ಚಿರುಕಂಡನಿನ್ನು ತನ್ನ ಹಾದಿ ಹಿಡಿಯಬೇಕು, ಆತ, "ಬರ್ತೇನೆ" ಎಂತಲೂ ಅಂದ. ಆದರೆ ಅಪ್ಪುವಿನ ಮಾತು ಅವನನ್ನು ತಡೆಯಿತು.

"ನಿಲ್ಲು ಚಿರುಕಂಡ. ನಿನ್ನ ಜತೆ ಸ್ವಲ್ಪ ಮಾತಾಡ್ಬೇಕು."

ದುಗುಡದ ಹೊರೆ ಇಳಿದು ಮನಸ್ಸು ಹಗುರವಾಗಿ ಚಿರುಕಂಡ ಪಕ್ಕದ ಗುಡ್ಡದತ್ತ ನೋಡಿದ. ಇಳಿಜಾರಿನಲ್ಲಿ ಗೋಡಂಬಿಯ ಮರಗಳು..... ಆತನಿಗೆ ನೆನಪಾಯಿತು. ಆರು ವರ್ಷಗಳ ಹಿಂದೆ ಒಂದು ದಿನ ಅಲ್ಲಿಯೇ ಒಂದು ಗೋಡಂಬಿ ಮರದ ಕೆಳಗೆ ಅವರು ಕುಳಿತು ಆತ್ಮೀಯವಾಗಿ ಮಾತನಾಡಿದ್ದರು... ಅತ್ತ ತಿರುಗಿದ ಚಿರುಕಂಡನನ್ನು ಅಪ್ಪು ಹಿಂಬಾಲಿಸಿದ. ಯಾವುದೋ ಆ ಮರ? ಅಲ್ಲಿಯೇ, ಅದೇ ಇರಬೇಕು... ಅಪ್ಪುವಿಗೂ ನೆನಪಾಗಿ ಕಣ್ಣುಗಳು ಕಾಂತಿಯುತವಾದುವು. ಆದರೆ ಆತ ಸುಮ್ಮನಿದ್ದ.... ಆ ದಿನ ಅದು ಹಗಲು ಹೊತ್ತು, ಬಿಸಿಲಿತ್ತು. ಇದು ಹುಣ್ಣಿಮೆ ಸಮೀಪಿಸುತ್ತಿದ್ದ ರಾತ್ರೆ. ವಿಷಯವೂ ಹಾಗೆಯೇ—ಹಿಂದಿನಕ್ಕಿಂತ ಭಿನ್ನ...

ಆ ನೀರವತೆಯಲ್ಲಿ ಈ ಮಾತು ಕುಲುಕಿ ಕುಲುಕಿ ಕಡಿದು ಕಡಿದು ಬಂತು. ತಣ್ಣನೆಯ ಗಾಳಿ ನವುರಾಗಿ ಬೀಸಿ, ಸಂಕಟಪಡುತ್ತಿದ್ದ ಅಪ್ಪುವಿನ ಹೃದಯದ ನೋವನ್ನು ಕಡಮೆಮಾಡಿತು.

ಚಿರುಕಂಡ ಸುಮ್ಮನೆ ಕುಳಿತು ಕೇಳುತ್ತಲೇ ಇದ್ದ. ಹೇಳುವುದು ಮುಗಿದಮೇಲೆ ತೀರ್ಪಿನ ಹಾದಿ ನೋಡುವ ಆರೋಪಿಯಂತೆ, ಕಾತರಗೊಂಡಿದ್ದ ಮನಸ್ಸನ್ನು ಬಿಗಿಹಿಡಿದು ಅಪ್ಪುವೂ ಮೌನವಾಗಿ ಕುಳಿತ.

ಬಹಳ ಹೊತ್ತು ಇಬ್ಬರೂ ಹಾಗೆಯೇ ಇದ್ದರು. ಕೊನೆಗೆ ಅಪ್ಪುವೇ ಕೇಳ ಬೇಕಾಯಿತು:

"ಏನು ಹೇಳ್ತೀಯಾ ಚಿರುಕಂಡ?"

ನಿಟ್ಟುಸಿರು ಬಿಟ್ಟು ಸಣ್ಣನೆ ನಕ್ಕು ಚಿರುಕಂಡ ಹೇಳಿದ:

"ನಾನೇನಪ್ಪ ಹೇಳ್ಲಿ? ನಾನು ನಿನಗಿಂತ ಒಂದು ವರ್ಷ ಚಿಕ್ಕೋನು."

"ಆಗೋ! ವಯಸ್ಸಿನ ಮಾತು! ಪ್ರತಿಯೊಂದು ವಿಷಯದಲ್ಲೂ ನೀನು ನನಗೆ ಅಣ್ಣ ಇರೋ ಹಾಗೆ ಅನ್ನೋದನ್ನ ಮರೆತಿಯಾ?"

"ಇದೆಲ್ಲ ತಪ್ಪೂಂತ ನಾನು ಹ್ಯಾಗೆ ಹೇಳ್ಲಿ? ಆದರೆ, ಮಧ್ಯಾಹ್ನ ನಿನ್ನ ಸಿಡುಕು ನೋಡ್ದಾಗ, ನೀನು ಚಳವಳಿ ಬಿಟ್ಬಿಡ್ತಿಯೇನೋಂತ ದಿಗಿಲಾಯ್ತು."

"ಚಳವಳಿ ಬಿಡೋದಲ್ಲ, ಪ್ರಾಣ ಬಿಡೋದು. ಅಂಥ ಮಾತಾಡಿ ಯಾಕೆ ನೋಯಿಸ್ತೀಯಾ?"

"ಇರಲಿ ಬಿಡು.... ನಾಳೆ ಚರ್ವತ್ತೂರಿಗೆ ಹೋಗ್ತಾ ಮಾಸ್ತರ ಹತ್ತಿರ ಪ್ರಸ್ತಾಪ ಮಾಡೋಣ."

ಕೊನೆಯ ತೀರ್ಮಾನ ಸದ್ಯ: ಮುಂದಕ್ಕೆ ಬಿತ್ತೆಂದು ಅಪ್ಪುವಿಗೆ ಸಮಾಧಾನವಾಯಿತು. ಆದರೆ ನಾಳೆ ಮಾಸ್ತರೊಡನೆ ಈ ವಿಷಯ ಮಾತನಾಡುವ ಪ್ರಮೇಯವನ್ನು ಚಿತ್ರಿಸಿದಾಗ ಹೃದಯ ಕುಗ್ಗಿತು. ಅವನೆಂದ:

"ನಾನಾಗಿಯೇ ಹೇಳೋದಕ್ಕೆ ಸಂಕೋಚ ಕಣೋ. ಅವರು ಏನು ತಿಳ್ಕೊಳ್ತಾರೋ ಏನೋ."

ಒಮ್ಮೆಲೆ ಅಪ್ಪುವಿಗೆ ಹಿಂದೆ ಕಣ್ಣನೂ ಹೀಗೆಯೇ ಹೇಳಿದ್ದುದು ಆತನ ಪರವಾಗಿ ತಾನು ಮಾಸ್ತರೊಡನೆ ಮಾತನಾಡಿದುದು ನೆನಪಾಗಿ, ಸೋಜಿಗ ಎನಿಸಿತು.

"ಇದರಲ್ಲೆಲ್ಲ ಸಂಕೋಚ ಯಾತರದು?" ಎಂದು ಚಿರುಕಂಡ ಕುಳಿತಲ್ಲಿಂದ ಎದ್ದ. ಅಪ್ಪುವೂ ಏಳುತ್ತ, ಮತ್ತೊಮ್ಮೆ ಸುತ್ತಲೂ ನೋಡಿ ಹೇಳಿದ:

"ಇದೇ ಜಾಗದಲ್ಲಿ ಹಿಂದೆ—"

'ಹೌದು, ಗೊತ್ತಿದೆ—'ಎನ್ನುವಂತೆ ಚಿರುಕಂಡ ತಲೆದೂಗಿದ.

.................................

"ಕ್ರಾಂತಿಕಾರಿಗಳೂ ಮದುವೆಯಾಗ್ಬಹುದಾ ಸರ್?"

ಚೆರ್ವತ್ತೂರಿಗೆ ಹಾದಿ ನಡೆಯುತ್ತಿದ್ದಂತೆ ಚಿರುಕಂಡ ಕೇಳಿದ ಪ್ರಶ್ನೆ ಮಾಸ್ತರನ್ನ ಚಕಿತಗೊಳಿಸಿತು. ತಮಗೆ ಸಂಬಂಧಿಸಿಯೇ ಆತ ಹಾಗೆ ಕೇಳಿರಬಹುದೆಂದು ಅವರಿಗೆ ತಮಾಷೆ ಎನಿಸಿತು. ಪ್ರಸನ್ನಮುಖಿಯಾಗಿ ಅವರೆಂದರು:

"ಬೆಳೆಯೋದು ಸಾಯೋದೊಂದೇ ಬದುಕಿನ ಗುರಿ ಆಗಿರೋ ಜನಕ್ಕೆ ಮದುವೆ ಅಂದರೆ ಬರೆ ಚಿಲ್ಲರೆ ವಿಷಯ. ಆದರೆ ಕ್ರಾಂತಿಕಾರಿಗಳಿಗೆ ಹಾಗಲ್ಲ. ಸಾಮಾನ್ಯವಾಗಿ ಅವರಿಗೆ ಮದುವೆ ಅನ್ನೋದು ಕೊರಳಿಗೆ ಕೊರಡು ಕಟ್ಟಿದ ಹಾಗೆ. ಅವರ ಪಾಲಿಗೆ ಸಂಸಾರ ಸುಖ ಸಾಧ್ಯವೇ ಇಲ್ಲ. ಸಂಸಾರ ಸುಖ ಅಂದರೆ ಅರ್ಥವಾಯ್ತೇನ್ರೋ? ಗಂಡ ಹೆಂಡತಿ ಜತೆಯಾಗಿರೋದು, ಮಕ್ಕಳ್ನ ಸಾಕೋದು, ಬೆಳೆಸೋದು..."

ಹೃದಯ ಬಿಗಿ ಹಿಡಿದುಕೊಂಡು ಅಪ್ಪು ಈ ಮಾತುಗಳನ್ನು ಕೇಳಿದ. ತಡೆಯಲಾಗದ ಚಳಿಗಾಳಿ ಬೀಸಿತೇನೋ ಎನ್ನುವಂತೆ ಆತನ ಮೈನಡುಗಿತು.

ಆದರೆ, ವಿಷಯದ ಎಲ್ಲ ಮುಖಗಳನ್ನೂ ವಿವರಿಸಿ ಹೇಳುವ ಮಾಸ್ತರ ಪ್ರತಿಪಾದನಾವೈಖರಿಯನ್ನು ಚೆನ್ನಾಗಿ ತಿಳಿದಿದ್ದ ಚಿರುಕಂಡ ಕುತೂಹಲದಿಂದ ಕಿವಿಕೊಡುತ್ತ ನಡೆದ.

ಮಾಸ್ತರು ಮುಂದುವರಿಸಿದರು:

"ಆದರೆ ಕ್ರಾಂತಿಕಾರಿಯೂ ಮನುಷ್ಯನೇ, ಆರ್ಥಿಕ ಪೋಷಣೆ ಉಪಚಾರ ಸಿಗದೇ ಹೋದರೂ ಆತನಿಗೆ ಪ್ರೀತಿ ಬೇಕು. ಜನ ತೋರಿಸೋ ಪ್ರೀತಿಯ ಜತೇಲಿ ತನಗೋಸ್ಕರವಾದ ಒಂದು ವಿಶಿಷ್ಟ ಪ್ರೀತಿಯನ್ನೂ ಆತ ಬಯಸ್ತಾನೆ. ಅದು ಅವನ ಹಾಗೆಯೇ ಕ್ರಾಂತಿಕಾರಿಯಾದ ಹೆಣ್ಣಿನಿಂದ ಸಿಗ್ತದೆ. ಕ್ರಾಂತಿಕಾರಿಯಲ್ಲದೇ ಹೋದರೂ ಆಕೆ ಅವನನ್ನು ಚೆನ್ನಾಗಿ ತಿಳಿದುಕೊಂಡು ಅನುಕೂಲೆಯಾಗಿರ್ಬೇಕು.... ಆದರೂ, ಕ್ರಾಂತಿಕಾರಿಯ ದಾಂಪತ್ಯ ಜೀವನಕ್ಕೆ ಒಂದು ಮಿತಿಯಿದೆ ಅನ್ನೋದು ನಿಜ."

ಚಿರುಕಂಡ ಮುಂದೆ ನಡೆಯುತ್ತಿದ್ದ, ಅಪ್ಪು ಹಿಂದೆ. ನಡುವೆ ಮಾಸ್ತರು ಇದ್ದರು. ಕೇಳುವವರ ಮುಖಭಾವವನ್ನು ನೋಡುತ್ತ ತಮ್ಮ ಮಾತಿನ ಪರಿಣಾಮವೇನೆಂಬುದನ್ನು ತಿಳಿಯುವ ಅಭ್ಯಾಸವಿದ್ದ ಮಾಸ್ತರು ಈಗ ಅದನ್ನು ತಿಳಿಯಲಾರದೆ ನಿರುತ್ಸಾಹ ತಳೆದರು. ಹುಡುಗರು ಹಾಗೆ ಮೌನವಾಗಿರುವುದು ಸರಿಯಲ್ಲವೆನಿಸಿತು. ಅವರೆಂದರು:

"ಈ ವಿಷಯ ಯಾಕೆ ಕೇಳಿದಿರಿ? ಏನು ಸಮಾಚಾರ?"

ತಾವು ಅವಿವಾಹಿತರಾಗಿಯೇ ಇದ್ದುದಕ್ಕೆ ಅವರು ಕಾರಣ ಕೇಳುವರೆಂದು ಮಾಸ್ತರು ಎಣಿಸಿದ್ದರು. ಆ ಎಣಿಕೆ ತಪ್ಪಾಗಿತ್ತು.

"ನಮ್ಮ ಅಪ್ಪು—"

ಹಳೆಯ ನೆನಪುಗಳ ಲೋಕಕ್ಕೆ ಹಾರಿಹೋಗಲು ಸಿದ್ಧರಾಗುತ್ತಿದ್ದ ಮಾಸ್ತರು ಚಿರುಕಂಡನ ಮಾತು ಕೇಳಿ, ಕಣ್ಣರಳಿಸಿ ನಿಂತರು.

"ಹೀಗೇನು? ಹುಂ."

ಚಿರುಕಂಡ ನಿಧಾನವಾಗಿ ಮಾತನಾಡಿದ; ಅಪ್ಪುವೂ ನಡುನಡುವೆ ಒಂದು ಮಾತು ಸೇರಿಸಿದ. ಹೂಂಗುಡುತ್ತ, ಎಲ್ಲವನ್ನೂ ಕೇಳುತ್ತ, ಮೆಲುಕು ಹಾಕುತ್ತ ಮಾಸ್ತರು ನಡೆದರು.

ತಮ್ಮ ಅಭಿಪ್ರಾಯ ಕೇಳಲು ಅಪ್ಪು ಮತ್ತು ಚಿರುಕಂಡ ಕಾತರರಾಗಿದ್ದುದನ್ನು ತಿಳಿದಿದ್ದ ಮಾಸ್ತರು ತಡಮಾಡದೆ ಅಂದರು:

"ಸಂತೋಷ ಅಪ್ಪು. ಸಂಘಕ್ಕೆ ಸ್ತ್ರೀಕಾರ್ಯಕರ್ತೆಯೂ ಒಬ್ಬಾಕೆ ಸಿಕ್ಕಿದ ಹಾಗಾಯ್ತು. ಓದು ಬರಹ ಬರ್‍ತದೋ ಇಲ್ವೋ? ಬರದಿದ್ರೆ ನೀನೇ ಕಲಿಸುವಿಯಂತೆ."

ಹಿರಿಯಣ್ಣನ ಹಾಗೆ—ತಂದೆಯ ಹಾಗೆ—ಮಾಸ್ತರು ಹರಸಿದರೆಂದು, ಅಪ್ಪುವಿನ ಕಣ್ಣುಗಳಲ್ಲಿ ಆನಂದಾಶ್ರು ತುಂಬಿತು. ಚಿರುಕಂಡನೂ ಸಮಾಧಾನದ ಉಸಿರುಬಿಟ್ಟ.

ಮಾಸ್ತರು ಹೇಳಿದರು:

"ಇದು ದೊಡ್ಡ ಜವಾಬ್ದಾರಿ, ಅಪ್ಪು. ಆದರೆ ಚಳವಳಿಯಿಂದ ನೀನು ದೂರವಾಗೋದಿಲ್ಲಾಂತ ನನಗೆ ನಂಬಿಕೆ ಇದೆ. ಒಂದು ರೀತೀಲಿ ಇದು ಒಳ್ಳೆಯದೇ. ಮದುವೆಯಾಗದ ಒಂಟಿ ಜೀವಕ್ಕೆ ನಮ್ಮಲ್ಲಿ ಗೌರವ ಕಮ್ಮಿ. ಏನೇ ಇರಲಿ. ಅವಳನ್ನೂ ಕ್ರಾಂತಿಕಾರಿಯಾಗಿ ಮಾಡೋದು ನಿನ್ನ ಜವಾಬ್ದಾರಿ."

"ಹೂಂ" ಎಂದ ಅಪ್ಪು, ತನ್ನ ಆ ಕರ್ತವ್ಯವನ್ನು ತಾನು ಬಲ್ಲೆ ಎಂಬಂತೆ.

"ಹುಡುಗಿಯ ಹೆಸರೇನು?"

"ಜಾನಕಿ."

ಆ ಅಂಶ ಮಹತ್ವದ್ದೆಂಬಂತೆ ಮಾಸ್ತರು, "ಒಳ್ಳೇ ಹೆಸರು" ಎಂದರು.

ಸ್ವಲ್ಪ ಹೊತ್ತಾದ ಮೇಲೆ ಚಿರುಕಂಡ ತಾನು ಕೇಳಬೇಕೆಂದಿದ್ದುದಕ್ಕೆ ಪೂರ್ವಭಾವಿಯಾಗಿ ಪ್ರಶ್ನಿಸಿದ:

"ಪಂಡಿತರಿಗೆ ಮದುವೆಯಾಗಿದೆಯಾ ಸರ್?" ಇನ್ನಾದರೂ ತನ್ನ ಸರದಿ

ಖಂಡಿತವೆಂದು ತಿಳಿದು ಮಾಸ್ತರೆಂದರು:

"ಹೂಂ. ಆಕೆ ಉಪಾಧ್ಯಾಯಿನಿಯಾಗಿ ಯಾವುದೋ ಊರಲ್ಲಿದ್ದಾರೆ. ಬಹಳ ಒಳ್ಳೆಯವರು."

"ನೀವು ಯಾಕ್ಸರ್ ?"

ಪ್ರಶ್ನೆಯನ್ನು ಪೂರ್ಣಗೊಳಿಸಲು ಬಿಡದೆ ಮಾಸ್ತರು ಗಟ್ಟಿಯಾಗಿ ನಕ್ಕರು ಕೊನೆಗೆ ತಲೆಯಾಡಿಸಿ ಹೇಳಿದರು:

"ಯಾಕೋ ಆಗಲಿಲ್ಲ."

"ಆಗೋದಿಲ್ವೆ ಸರ್?"

ಮಾಸ್ತರು ನಿಧಾನವಾಗಿ ಪದಗಳನ್ನು ಬಿಡಿಬಿಡಿಯಾಗಿ ಉಚ್ಚರಿಸುತ್ತ ಅಂದರು:

"ನನಗೆ ಗೊತ್ತಿಲ್ಲ. ಅಪ್ಪುವಿನಷ್ಟು ವಯಸ್ಸಾಗಿದ್ದಾಗ ನನಗೆ ಒಬ್ಬಳು ಹುಡುಗಿಯ ಗುರುತಾಯ್ತು. ಒಬ್ಬರನ್ನೊಬ್ಬರು ಮೆಚ್ಚಿಕೊಂಡ್ವಿ. ಅದೇ ಪ್ರೀತಿ ಅಂತ ನಾನು ಭಾವಿಸ್ದೆ. ಮುಂದೆ ಮದುವೆಯಾಗೋದು ತಪ್ಪಿಹೋಯ್ತು."

"ಏನಾಯ್ತು ಸರ್?"

"ಪ್ರೀತಿ ಅಂದರೆ ಗಂಡು ಹೆಣ್ಣು ಒಬ್ಬರನ್ನೊಬ್ಬರು ಅಪೇಕ್ಷಿಸಿದರೆ ಮಾತ್ರ ಸಾಲದೂಂತ ನನಗೆ ಮನವರಿಕೆಯಾಯ್ತು. ನನ್ನ ಜೀವನದ ಗುರಿ ಧ್ಯೇಯ ಒಂದೂ ಆಕೆಗೆ ಅರ್ಥವಾಗಲಿಲ್ಲ. ಅಂಥಾದ್ದೆಲ್ಲ ಅವಳಿಗೆ ಇಷ್ಟವಿರಲಿಲ್ಲ. ಅದಕ್ಕೇ ಸಂಬಂಧ ಮುರಿದುಹೋಯ್ತು... ಆಮೇಲೆ ಮದುವೆ ಯೋಚನೇನೇ ಬಿಟ್ಟುಬಿಟ್ಟೆ."

"ಸರಿಯಾದೋರ್‍ನ ಮಾಡ್ಕೊಳ್ಬಾರ್‍ದಾ?"

"ನೋಡೋಣ.... ಮುಂದಿನ ಮಾತು ಮುಂದೆ! ಮೊದಲು ನಿಮ್ಮ ಮದುವೆ ಆಗಲಿ. ಕಯ್ಯೂರಿನ ರೈತನಾಯಕರು, ಪೋಲಿಗಳಲ್ಲ ಅಂತ ಜನ ಹೊಗಳಲಿ."

ಹಾಗೆ ಹೇಳಿದ ಮಾಸ್ತರೂ ಅದನ್ನು ಕೇಳಿದ ಅಪ್ಪುವೂ ಚಿರುಕಂಡನೂ ಒಟ್ಟಾಗಿ ನಕ್ಕರು.

"ತಾಯಿ ತಂದೆಗೆ ಈ ವಿಷಯ ಯಾವತ್ತು ತಿಳಿಸ್ತೀಯಾ?" ಎಂದರು ಮಾಸ್ತರು.

"ಆ ಜವಾಬ್ದಾರಿ ನಿಮ್ಮದು ಸರ್" ಎಂದ ಅಪ್ಪು.

"ಸರಿಹೋಯ್ತು! ಸರಿಹೋಯ್ತು! ನಿಮ್ಮ ಅಮ್ಮನಿಗೆ ಸೊಸೆ ಒಪ್ಪಿಗೆಯಾಗಿದಿದ್ದರೆ ನನ್ನನ್ನು ಬಯ್ತಾರೆ, ಅಷ್ಟೆ."

"ಅಮ್ಮಂದಿರಿಗೇನು ಸರ್? ಮಕ್ಕಳು ಮದುವೆಗೆ ಒಪ್ಪಿದರೆ ಸಾಕೂಂತ ಇರ್‍ತದೆ" ಎಂದ ಚಿರುಕಂಡ.

"ಸ್ವಾನುಭವದಿಂದ ಈ ಮಾತು ಅನ್ತಿದ್ದಿಯೇನಯ್ಯ?" ಎಂದು ಹೇಳಿ ಮಾಸ್ತರು

ಮತ್ತೊಮ್ಮೆ ನಗೆಯ ತೆರೆ ಎಬ್ಬಿಸಿದರು.

ಚೆರ್ವತ್ತೂರು ಸಮೀಪಿಸಿತ್ತು....

.................................................

ಮಾಸ್ತರ ರಾಯಭಾರಕ್ಕೆ ಸುಲಭವಾಗಿಯೇ ಯಶಸ್ಸು ದೊರೆಯಿತು. ಕಣ್ಣ ಊಟದ ಬಲೆ ಬೀಸಿ ಅಪ್ಪುವನ್ನು ಕೆಡವಿಕೊಂಡ ಕಥೆ ಹಲವರ ಬಾಯಿ ಮಾತಾಗಿ, ಎಲ್ಲರೂ ಕಣ್ಣನನ್ನು ಹೊಗಳಿದರು.

"ನಾನಲ್ಲಪ್ಪೋ, ಊಟಕ್ಕೆ ಕರೀಂತ ಹೇಳ್ದೋಳು ನನ್ನ ಹೆಂಡತಿ" ಎಂದ ಕಣ್ಣ.

"ಇಂಥ ವಿಷಯ ಅವಳಿಗೆಲ್ಲ ಚೆನ್ನಾಗಿ ಗೊತ್ತಪ್ಪ" ಎಂದರು ಯಾರೋ.

ವರ್ಷದ ಕೊನೆಯಲ್ಲಿ ಮದುವೆ ಎಂಬ ಸೂಚನೆ ಬಂತು.

"ಸಂಘದ ಕಟ್ಟಡದಲ್ಲೇ ಮದುವೆಯಾದರೆ ಚೆನ್ನಾಗಿರ್‍ತದೆ" ಎಂದು, ವಿವಾಹಿತ ಪೊಡವರ ಕುಂಞಂಬುವೆಂದ.

ಅಪ್ಪುವಿನ ತಂದೆ ಅದಕ್ಕೊಪ್ಪದೆ ಹೇಳಿದ : "ಛೆ! ಛೆ! ಅದೆಲ್ಲ ಸರಿಯಲ್ಲ. ಹೆಣ್ಣಿಗೆ ಸ್ವಂತದ ಮನೆ ಇಲ್ಲವಾದ್ದರಿಂದ ನಮ್ಮನೇಲೇ ಮದುವೆ ನಡೀಲಿ."

ಆದರೆ, ಮಾಸ್ತರು ಇಲ್ಲದೆ ಮದುವೆ ಜರುಗುವುದೆಂದರೇನು? 'ನಾನು ಎಲ್ಲಿದ್ದರೂ ಬಂದೇ ಬರ್‍ತೇನೆ' ಎಂದು ಅವರು ಆಶ್ವಾಸನೆಯನ್ನೇನೋ ಕೊಟ್ಟರು. ಅಪ್ಪು ಒಪ್ಪಲಿಲ್ಲ. ಮಾಸ್ತರು ಕಯ್ಯೂರು ಬಿಡುವುದಕ್ಕೆ ಮುಂಚೆಯೇ ಬೇಸಗೆಯಲ್ಲೇ ಮದುವೆ ಎಂದು ಗೊತ್ತಾಯಿತು...

....ಕಯ್ಯೂರು ಶಾಲೆಯ ಪರೀಕ್ಷೆಗಳು ನಡೆದುವು. ಆ ವರ್ಷ ಕಯ್ಯೂರಿನ 'ಪದವೀಧರ'ರಲ್ಲಿ ಮೊದಲ ಸ್ಥಾನ ಪಡೆದವನು ಕುಂಞಂಬುವಿನ ತಮ್ಮ ರಾಮನ್ ನಾಯರ್. ಎರಡನೆಯವನು ಅಪ್ಪುವಿನ ತಮ್ಮ. ನಂಬೂದಿರಿಯ ದೊಡ್ಡ ಮಗನಿಗೆ ಹೆಚ್ಚು ಅಂಕಗಳು ದೊರೆತಿದ್ದುವು. ಆದರೆ ನಂಬಿಯಾರರ ಮಗ ಕರುಣಾಕರ ಅಂತೂ ಇಂತೂ ತೇರ್ಗಡೆಯಾಗಿದ್ದ.

....ಅಪ್ಪು ಮಾಸ್ತರೊಡನೆ, "ಮದುವೆ ಹೊಸ ರೀತಿಯಲ್ಲಾಗ್ಬೇಕು; ರಿಜಿಸ್ಟ್ರಿಯಾಗಿ ಆಗ್ಬೇಕು" ಎಂದು ತನ್ನ ಆಶಯವನ್ನು ವ್ಯಕ್ತಪಡಿಸಿದ. ಕ್ರಾಂತಿಕಾರನಾದ ಅಪ್ಪು ಹಾಗೆ ಯೋಚಿಸುವುದು ಸಹಜವಾಗಿತ್ತು. ಆದರೆ ಅಂತಹ ಅರಿವು ಸ್ಪಷ್ಟವಾಗಿ ಮೂಡದೆ ಇದ್ದ ವಾತಾವರಣದಲ್ಲಿ, ಆ ರೀತಿ ಮಾಡುವುದು ಸುಲಭವಾಗಿರಲಿಲ್ಲ. ಮಾಸ್ತರು ಶಾಂತವಾಗಿ ಬಹಳ ಹೊತ್ತು ಅಪ್ಪುವಿನೊಡನೆ ವಾದಿಸಿದರು. ಹಿರಿಯರಿಗೂ ಊರವರಿಗೂ ಸಮ್ಮತವಾಗುವಂತೆ—ಆದರೆ ಆದಷ್ಟು ಕಡಮೆ ಖರ್ಚಿನಲ್ಲಿ—ಮದುವೆ ನಡೆಯುವುದೇ ವಿಹಿತವೆಂದು, ಪ್ರಯಾಸಪಟ್ಟು ಅಪ್ಪುವನ್ನು ಒಪ್ಪಿಸಿದರು.

ಹಳ್ಳಿಯಲ್ಲಿ ಯಾರಿಗೆ ಮದುವೆ ಗೊತ್ತಾದರೂ ಮೊದಲು ಭೂಮಾಲಿಕರಿಬ್ಬರ ಸಮ್ಮತಿ ಪಡೆಯುವುದು ಪದ್ಧತಿ. ಕರೆಯಲು ಹೋದಾಗ 'ನಜರು' ಒಪ್ಪಿಸಬೇಕು; ಮದುವೆಯಾದ ಮೇಲೆ ದಂಪತಿಗಳು ಜಮೀನ್ದಾರರಲ್ಲಿಗೆ ಹೋಗಿ ಆಶೀರ್ವಾದ ಪಡೆಯಬೇಕು. ಅದಕ್ಕೆ ಪ್ರತಿಯಾಗಿ ಏನಾದರೂ ಉಡುಗೊರೆ ಬರುತ್ತಿತ್ತು. ಎಲ್ಲದಕ್ಕಿಂತಲೂ ಮುಖ್ಯವಾದದ್ದು, ವೆಚ್ಚಕ್ಕೆ ಹಣ. ಅದನ್ನು ಉದಾರಿಗಳಾದ ಜಮೀನ್ದಾರರಿಂದ ಸಾಲ ಪಡೆಯದೆ ಹಳ್ಳಿಯಲ್ಲಿ ಆಗಿರುವ ಮದುವೆಯಾದರೂ ಯಾವುದು?

ಆದರೆ ಈ ಸಲ ಆ ಸಂಪ್ರದಾಯ ಮುರಿದುಹೋಯಿತು. ಅಪ್ಪುವಿನ ತಂದೆಯೂ ಕಣ್ಣನೂ ಮೊದಲು ಭೂಮಾಲಿಕರಲ್ಲಿಗೆ ಹೋಗಿ ಸಮ್ಮತಿ ಪಡೆಯಲಿಲ್ಲ. 'ನಜರು' ಒಪ್ಪಿಸ್ಪಲಿಲ್ಲ. ಹಳ್ಳಿಯ ಎಲ್ಲರನ್ನೂ ಕರೆಯುವಂತೆ ಅವರನ್ನೂ ಕರೆದರು. ಇವರು ಹೋದಾಗ ಪೂಜೆಯಲ್ಲಿದ್ದ ನಂಬೂದಿರಿ ಹೊರಕ್ಕೆ ಬರಲಿಲ್ಲ. ದೇವಕಿಯ ತಂಗಿಗೆ ಮದುವೆ ಎಂಬ ವಿಷಯವಂತೂ, ಅವರ ಹಳೆಯದೊಂದು ಗಾಯ ಸೋರುವಂತೆ ಮಾಡಿತು.

ಮದುವೆಯು ಅದ್ಧೂರಿಯಿಂದಲೇ ಜರಗಿತು. ಯಾರು ಏನೇ ಹೇಳಿದರೂ ಅಪ್ಪುವಿನ ತಂದೆ ಕೈ ಸಡಿಲಬಿಡದಿರಲಿಲ್ಲ.

ಮದುವೆಯ ಚಪ್ಪರದಲ್ಲಿ, ಸಂಘದ ಕಟ್ಟಡಕ್ಕೋಸ್ಕರ ವರನ ಪರವಾಗಿ ಹತ್ತು ರೂಪಾಯಿ ಕಾಣಿಕೆ ಕೊಟ್ಟಿರುವುದಾಗಿ ಅಪ್ಪುವಿನ ತಂದೆ ಘೋಷಿಸಿದ. ಹತ್ತು ರೂಪಾಯಿ ದೊಡ್ಡ ಮೊತ್ತವೇ ಆಗಿದ್ದರೂ ಕಣ್ಣ ಹಿಂಜರಿಯದೆ, ವಧುವಿನ ಪರವಾಗಿಯೂ ಅಷ್ಟೇ ಹಣ ವಾಗ್ದಾನಮಾಡಿದ.

"ಕೆಂಪುಬಾವುಟಕ್ಕೆ ಖುಷಿಯಾಗಿದೆ; ಜೋರಾಗಿ ಹಾರಾಡ್ತಿದೆ" ಎಂದರು ಯಾರೋ.

ಮದುವೆಯ ಸಮಾರಂಭದಲ್ಲಿ ಮಾಸ್ತರು, ಚಿರುಕಂಡ ಮತ್ತು ತ್ರಿಕರಪುರದಿಂದ ಬಂದಿದ್ದ ಚಂದು, ವರನ ಬಳಿಯಲ್ಲಿ ಕುಳಿತರು.

"ಪಂಡಿತರು ಬರೋದಕ್ಕಾಗಲ್ಲ?" ಎಂದಿದ್ದ ಅಪ್ಪು; "ಪ್ರಭು, ಧಾಂಡಿಗ, ರಾಮುಣ್ಣಿ, ಕೇಳಪ್ಪನ್ ಇವರು ಯಾರೂ ಬರೋಕಾಗಲ್ವಾ?"

"ಮಗುವಿನ ಹಾಗೆ ಮಾತಾಡ್ಬೇಡ. ಜಮೀನ್ದಾರರ ಕಡೆಯೋರು ಗುರುತು ಹಿಡಿದರೆ ಪೋಲೀಸರಿಗೆ ವರದಿ ಕಳಿಸೋದಕ್ಕೆ ಅನುಕೂಲವಾಗ್ತದೆ" ಎಂದು ಚಿರುಕಂಡ ರೇಗಿದ್ದ.

"ಅವರೆಲ್ಲರಿಗೂ ನಾನೇ ಪ್ರತಿನಿಧಿ ಅಂತ ತಿಳ್ಕೊ ಅಪ್ಪು" ಎಂದು ಮಾಸ್ತರು ಹೇಳಿದ್ದರು.

ಆದರೂ ನೆರೆದಿದ್ದ ಜನರನ್ನೆಲ್ಲ ನೋಡುತ್ತಿದ್ದ ಅಪ್ಪುವಿಗೆ, ಬರಲಾಗದೆ ಇದ್ದ ತನ್ನವರ ನೆನಪಾಗದಿರಲಿಲ್ಲ....

ಮದುವೆ ನಡೆದ ಆ ಅವಧಿಯಲ್ಲಿ, ಕಯ್ಯೂರಿನ ರೈತರ—ಅವರ ಸಂಘದ—ಚಟುವಟಿಕೆ ಅದೊಂದೇ ಏನೋ ಎನ್ನುವಹಾಗಾಯಿತು. ಆ ಭಾವನೆ ಸರಿಯಲ್ಲವೆಂದು ತೋರಿಸಿಕೊಟ್ಟವನು ಅಪ್ಪುವೇ. ಮದುವಣಿಗ ಮತ್ತೆ ಮೊದಲಿನಂತೆಯೇ ಸಂಘದ ಕೆಲಸಕಾರ್ಯಗಳಲ್ಲಿ ನಿರತನಾದ.

..........

ಸಂತೋಷದ ಅಧ್ಯಾಯದ ಬಳಿಕ ದುಃಖದ ಪುಟಗಳಿದ್ದುವು. ಅದು ಮಾಸ್ತರರ ಬೀಳ್ಕೊಡುಗೆ. ಬಡ ಕೋರನಿಂದ ಮೊದಲಾಗಿ ಮಧ್ಯಮ ರೈತರವರೆಗೆ ಪ್ರತಿಯೊಬ್ಬರೂ ಅವರನ್ನು ಊಟಕ್ಕೆ ಕರೆಯುವವರೇ. ನಂಬಿಯಾರರ ಮರಾಗ್ರಹಕ್ಕೆ ಒಳಗಾಗಿ ಮಾಸ್ತರು ಹೊರಡುತ್ತಿರುವರೆಂಬ ಸಂಗತಿಯಿಂದೇನೂ ರೈತರು ಬೆದರಲಿಲ್ಲ.

"ನಾನಿನ್ನು ಕಯ್ಯೂರಿಗೆ ಯಾವತ್ತೂ ಬರೋದೇ ಇಲ್ಲ ಅನ್ನುವ ಹಾಗೆ ಔತಣ ಮಾಡ್ತಿದ್ದೀರಲ್ಲ" ಎಂದು ಮಾಸ್ತರು ನಗುನಗುತ್ತ ಪ್ರತಿಭಟಿಸಿದರು.

"ಇನ್ನೊಂದು ಸಲ ರೈತ ಸಮ್ಮೇಳನ ಇಲ್ಲಿಯೇ ಮಾಡ್ತೇವೆ ಮಾಸ್ತರೆ, ಆಗ ನಿಮ್ಮನ್ನು ಕರೀತೇವೆ" ಎಂದು ಹಲವು ಜನ ಹೇಳಿದರು.

ಸಂಘದ ಕಾರಣದಿಂದಲೆ ತಾನೊಬ್ಬ ಮನುಷ್ಯ ಎನಿಸಿಕೊಂಡಿದ್ದ ಕೃಷ್ಣನ್ ನಾಯರ್ ಏನು ಮಾಡಿದರೆ ತನ್ನ ಕೃತಜ್ಞತೆ ಸೂಚಿಸಿದಂತಾಗುವುದೋ ಎಂದು ಚಡಪಡಿಸಿದ.

ಗುರು ಕಾಣಿಕೆಗಳು ಬಂದವು ! ಒಬ್ಬಂಟಿಗರಾಗಿ ಕೈಬೀಸಿ ಹೊರಡಬೇಕಾಗಿದ್ದ ಮಾಸ್ತರು ಹಣಕಾಸು ಬಟ್ಟೆ ಬರೆಗಳನ್ನು ಸಂಘದ ವಶಕ್ಕೊಪ್ಪಿಸಿದರು. ಹಣ್ಣು ಹಂಪಲುಗಳ ಬುಟ್ಟಿಗಳನ್ನು ಕೈಮುಟ್ಟಿ ಸ್ವೀಕರಿಸಿ ಹಿಂದಕ್ಕೆ ಕಳುಹಿಸಿದರು.

"ಇಲ್ಲಿಂದ ಯಾವೂರಿಗೆ ಹೋಗ್ತೀರಿ ಸರ್ ?" ಎಂದು ಚಿರುಕಂಡ ಮಾಸ್ತರ ಜತೆಯಲ್ಲಿ ಅಪ್ಪು ಮತ್ತು ತಾನು ಇಬ್ಬರೆ ಉಳಿದಾಗ ಕೇಳಿದ.

"ತಲಚೇರಿಗೆ ಅಂತ ಎಲ್ಲರಿಗೂ ತಿಳಿಸಿಬಿಡಿ. ಆದರೆ, ಮುಂದೆ ಅಲ್ಲಿಂದ ಕಲ್ಲಿಕೋಟೆಗೆ ಹೋಗ್ತೇನೆ. ಅಲ್ಲಿ ನಮ್ಮ ಮುಖಂಡರನ್ನು ಕಾಣ್ಬೇಕು. ಆದರೆ ಈ

ವಿಷಯ ಯಾರಿಗೂ ಹೇಳ್ಬೇಡಿ. ಪುನಃ ಈಚೆ ಕಡೆಗೇ ಬಂದರೂ ಬರಬಹುದು. ಶಾಲೆಗಳಲ್ಲಿನ್ನು ಮಾಸ್ತರ ಕೆಲಸ ನನಗೆ ಸಿಗ್ತದೋ ಇಲ್ವೋ ಗೊತ್ತಿಲ್ಲ—" ಎಂದು ಅವರು ಹೇಳಿದರು.

ಹೊರಡುವ ಹಿಂದಿನ ಸಂಜೆ ಮಾಸ್ತರು, ಶಾಲೆಯ ವಿಶ್ವಸ್ಥ ಸಮಿತಿಯ ಮುಖ್ಯಸ್ಥರಾದ ನಂಬಿಯಾರರಲ್ಲಿಗೆ ಹೋಗಿ ಲೆಕ್ಕಾಚಾರ ತೀರಿಸಿ ಬಂದರು.

ಬೆಳಗ್ಗೆ ಹೊರಡುತ್ತಿದ್ದಂತೆ, ಶಾಲೆಯ ಹಿತ್ತಲಲ್ಲಿ ಎರಡೂ ಕಡೆ ಎತ್ತರಕ್ಕೆ ಬೆಳೆದಿದ್ದ ಎರಡು ಮಾವಿನ ಸಸಿಗಳತ್ತ ಮಾಸ್ತರ ಗಮನ ಹರಿಯಿತು. ಎದುರು ನೆರೆದಿದ್ದವರನ್ನು ನೋಡಿ ಮಾಸ್ತರೆಂದರು :

"ಗಿಡಗಳು ಬೆಳೀತಾ ಇವೆ. ಆದರೂ ಫಲ ಕೊಡೋ ಸ್ಥಿತಿಗೆ ಇನ್ನೂ ಬಂದಿಲ್ಲ!"

ಹಾಗೆ ಹೇಳಿ ಅವರು ಅಪ್ಪು ಮತ್ತು ಚಿರುಕಂಡರತ್ತ ನೋಡಿ ನಕ್ಕರು. ವರ್ಷಗಳ ಹಿಂದೆ ಆ ಮಾವಿನ ಗಿಡಗಳಿಗೆ ಸಂಬಂಧಿಸಿ ಮಾಸ್ತರು ಆಡಿದ್ದುದು ಅಪ್ಪು ಚಿರುಕಂಡರಿಗೆ ನೆನಪಾಗಿ, ಅವರ ಮುಖಗಳು ಅರಳಿದುವು.

ಅರ್ಧ ಹಾದಿಯವರೆಗೂ ನೂರಾರು ಜನ ಮಾಸ್ತರನ್ನು ಹಿಂಬಾಲಿಸಿ ಬಂದರು. "ಬರಬೇಡಿ" "ವಾಪಸು ಹೋಗಿ" ಎಂದು ಹೇಳಿ ಹೇಳಿ ಮಾಸ್ತರಿಗೆ ಸಾಕಾಗಿ ಹೋಯಿತು. ಪೊಲೀಸರ ವರದಿಗೆ ಇದೂ ಒಂದು ವಿಷಯವಾಗಬಾರದೆಂದು ಅವರು, "ಇದು ತಪ್ಪು ಚಿರುಕಂಡ. ಇದು ಅಪಾಯಕಾರಿ. ಬರಬೇಡಿಂತ ನೀವೇ ಹೇಳೀಪ್ಪ ಅವರಿಗೆ" ಎಂದರು.

ಅಪ್ಪುವಿನ ತಂದೆಯೂ ಚಿರುಕಂಡನ ತಂದೆಯೂ ಗುಂಪನ್ನು ತಡೆದಮೇಲೆ ಮಾಸ್ತರು ಮುಂದುವರಿಯುವುದು ಸಾಧ್ಯವಾಯಿತು. ಅಪ್ಪು ಚಿರುಕಂಡರ ಜತೆಯಲ್ಲಿ ಸ್ವಲ್ಪ ದೂರ ಸಾಗಿದ ಬಳಿಕ ಮಾಸ್ತರು ತಿರುಗಿ ನೋಡಿದರು. ಗುಂಪು ನಿಂತೇ ಇತ್ತು. ಬಲಗೈಯನ್ನು ಮೇಲಕ್ಕೆತ್ತಿ ಮಾಸ್ತರು ಗದ್ಗದ ಕಂಠದಿಂದ "ನಮಸ್ಕಾರ" ಎಂದು ತೊದಲಿದರು. ಬೆರಳುಗಳು ಮುಷ್ಟಿ ಕಟ್ಟಿದುವು.

ಅಪ್ಪು ವೇಗವಾಗಿ ನಡೆಯುತ್ತ, "ಬೇಗ ಕಾಲು ಹಾಕ್ಬೇಕು. ಗಾಡಿಗೆ ಟೈಮಾಯ್ತು" ಎಂದ.

....ಅವರು ಚರ್ವತ್ತೂರು ನಿಲ್ದಾಣ ಸೇರಿದಾಗ ಗಾಡಿ ಬರಲು ಇನ್ನೂ ಹದಿನೈದು ನಿಮಿಷಗಳಿದ್ದುವು.

"ಟೈಮಿಗೆ ಸರಿಯಾಗಿ ಬಂದಿದ್ದೇವೆ!" ಎಂದರು ಮಾಸ್ತರು, ಅಪ್ಪುವನ್ನು ನೋಡಿ ನಕ್ಕರು.

"ಸರ್, ಇವತ್ತು ಒಂದು ದಿನದ ಮಟ್ಟಿಗೆ ಇಂಟರ್ ಕ್ಲಾಸ್ ಟಿಕೆಟ್ ತರ್ಲಾ?" ಎಂದು ಚಿರುಕಂಡ ಕೇಳಿದ, ತಮ್ಮ ಪ್ರೀತಿಯನ್ನು ತೋರಿಸಲು ಅದೂ ಒಂದು ಹಾದಿ ಎಂದು.

"ಬೇಡ! ದುಡ್ಡು ಪೋಲು ಮಾಡ್ಬೇಡಿ! ಖಾಯಿಲೆಯಾದಾಗ ನಾನೇ ಇಂಟರ್‌ನಲ್ಲಿ ಹೋಗ್ತೇನೆ" ಎಂದು ಮಾಸ್ತರು ವಿರೋಧಿಸಿದರು.

ತಮ್ಮ ಕೈಗಡಿಯಾರವನ್ನು ಬಿಚ್ಚಿ ಅವರು ಅದಕ್ಕೆ 'ಕೀ' ಕೊಟ್ಟರು. ಅಪ್ಪು ಚಿರುಕಂಡರತ್ತ ನೋಡುತ್ತ ಅವರೆಂದರು:

"ಸಂಘದ ಕಟ್ಟಡ ಆದ್ಮೇಲೆ ನೀವೊಂದು ಗೋಡೆ ಗಡಿಯಾರ ತರ್ಬೇಕು."

"ಹೂಂ. ತರ್ತೇವೆ."

"ಈಗ ಈ ಕೈಗಡಿಯಾರ ನಿಮಗೆ ಉಡುಗೊರೆ ಕೊಡ್ಬೇಕೂಂತ ಮಾಡಿದ್ದೇನೆ. ಗಾಡಿಗೆ ಹೊತ್ತಾಯ್ತು. ಹೇಳಿ, ಹ್ಯಾಗೆ ಹಂಚ್ಕೊಳ್ತೀರಾ?"

ಇದು ತಮಾಷೆಯ ಮಾತು ಎಂದುಕೊಂಡ ಅಪ್ಪು. "ನೀವೇ ಇಟ್ಕೊಳ್ಳಿ ಸರ್", ಎಂದ ಚಿರುಕಂಡ. ಮಾಸ್ತರ ಮುಖ ಗಂಭೀರವಾಯಿತು.

"ತಗೋ ಚಿರುಕಂಡ, ನಿನ್ನ ಕೈಗೆ ಕೊಡ್ತೇನೆ."

ಅವರು ಕೊಟ್ಟೇ ತೀರುವುದು ಖಂಡಿತವೆಂದು ತಿಳಿದು ಚಿರುಕಂಡನೆಂದ:

"ಅಪ್ಪು ಕೈಗೆ ಕಟ್ಟಿ."

ಮಾಸ್ತರು ಹಾಗೆಯೇ ಮಾಡಿದರು. ಮುದ್ದಿಸಿದ ಮಗುವಿನ ಹಾಗೆ ಅಪ್ಪು ಚಿರುಕಂಡನನ್ನು ನೋಡಿದ.

ಕೈಮರ ಬೀಳುತ್ತಿದ್ದಂತೆ, ನಿಲ್ದಾಣದ ಮೂಲೆಯಲ್ಲಿ ನಿಂತಿದ್ದ ಆ ಮೂವರ ಕಡೆ ಯಾರೋ ಓಡಿಬರುತ್ತಿದ್ದುದು ಕಂಡಿತು. ಆತನನ್ನು ಮೊದಲು ಗುರುತಿಸಿದ ಮಾಸ್ತರೆಂದರು:

"ಕೋರ!"

ಅವನ ಮೂಲಕ ಏನನ್ನೋ ಹೇಳಿ ಕಳುಹಿಸಿರಬೇಕೆಂದು, ಆತ ಹತ್ತಿರ ಬಂದೊಡನೆ ಅಪ್ಪು ಕೇಳಿದ : "ಏನು ಕೋರ?"

"ಏನಿಲ್ಲ!" ಎಂದು, ತನ್ನ ವಕ್ರವಕ್ರವಾಗಿದ್ದ ಹಲ್ಲುಗಳನ್ನು ತೋರಿಸಿ ಏದುಸಿರುಬಿಡುತ್ತ ಕೋರ ಹೇಳಿದ:

"ಗುಂಪಿನಿಂದ ತಪ್ಪಿಸ್ಕೊಂಡು ಬಂದ್ಯಾ?" ಎಂದು ಮಾಸ್ತರು ಒಲವು ತುಂಬಿದ ನೋಟದಿಂದ ಆತನನ್ನು ನೋಡುತ್ತ ಕೇಳಿದರು.

ಕೋರ ಲಜ್ಜೆಯಿಂದ ದೂರ ನಿಂತನೇ ಹೊರತು ಉತ್ತರ ಕೊಡಲಿಲ್ಲ.

ರೈಲುಗಾಡಿ ಬಂತು. ಅಲ್ಲೇ ಎದುರುಗಿದ್ದ ಡಬ್ಬಿಯನ್ನೇರಿ ಬಾಗಿಲ ಬಳಿಯೇ ನಿಂತು ಮಾಸ್ತರು ಮುಖ ಹೊರ ಹಾಕಿ, ಅಪ್ಪು-ಚಿರುಕಂಡರನ್ನು ಸಮೀಪಕ್ಕೆ ಕರೆದು ಹೇಳಿದರು:

"ಇನ್ನು ನಾನು ನಿಮ್ಮ ಮಾಸ್ತರಲ್ಲ. ಇವತ್ತಿನಿಂದ ಸರ್ ಅಂತ ಕೂಗ್ಬೇಡಿ ಸಂಗಾತಿ ಅಂತ ಕರೀರಿ."

"ಹೂಂ, ಹೂಂ.... " ಎಂದು ಇಬ್ಬರೂ ತಲೆಯಾಡಿಸಿದರು

ಶಿಳ್ಳು ಕೇಳಿಸಿ ಗಾಡಿ ಚಲಿಸಿತು. ಮಾಸ್ತರು ಮೂವರನ್ನೂ ನೋಡುತ್ತ ಕೈಬೀಸಿದರು.

ಅಪ್ಪು ಮತ್ತು ಚಿರುಕಂಡ ಇಬ್ಬರೂ ಗಟ್ಟಿಯಾಗಿ ಏಕಕಾಲದಲ್ಲಿ ಅಂದರು:

"ನಮಸ್ಕಾರ ಸರ್!"

## ೧೪

ಮಾಸ್ತರು ತೋರಿಸಿಕೊಟ್ಟದ್ದುದು ನಿರಂತರ ದುಡಿಮೆಯ ಹೆದ್ದಾರಿ. ಕಯ್ಯೂರಿನ ರೈತರೆಲ್ಲ ಒಬ್ಬಿಬ್ಬರು ಶ್ರೀಮಂತ ರೈತರನ್ನು ಬಿಟ್ಟು—ಆ ಹಾದಿಯನ್ನು ತುಳಿದರು. ಹಿಂದೆ ಏನು ಆದರೂ ವಿಧಿಯನ್ನು ಹಳಿಯುತ್ತಿದ್ದವರು, ಈಗ ತಮ್ಮ ಭವಿಷ್ಯತ್ತಿನ ನಿರ್ಮಾತೃಗಳು ತಾವೇ ಎಂಬುದನ್ನು ಮನಗಂಡಿದ್ದರು. ವಿಶ್ವದ ಎಷ್ಟೋ ಕಡೆ ಕಾಲಕಾಲಕ್ಕೂ ಜನ ಬಂಡಾಯವೆದ್ದು ನಿರಂಕುಶ ಪ್ರಭುತ್ವವನ್ನು ನಿರ್ಮೂಲ ಮಾಡಿದ ರೋಮಾಂಚಕಾರಿ ಕಥೆ ಅವರ ಬಾಹುಗಳಲ್ಲಿ ಶಕ್ತಿ ತುಂಬಿತು. ಪರಕೀಯರ ಆಡಳಿತಕ್ಕೂ ತಮ್ಮ ಇರುವಿಕೆಗೂ ಸಂಬಂಧವಿದೆ ಎಂಬ ತಿಳಿವಳಿಕೆ, ಸ್ವಾತಂತ್ರ್ಯೋದಯವನ್ನು ಜನ ಇದಿರು ನೋಡುವಂತೆ ಮಾಡಿತು.

ಕಣ್ಣ ತನಗೆ ಹುಟ್ಟಿದ ಹೆಣ್ಣುಮಗುವಿಗೆ ಚೇತನಾ ಎಂದು ಹೆಸರಿಟ್ಟ. ಹೊಸ ವಿಚಾರ ಮನಗಳಲ್ಲೂ ಮನೆಗಳಲ್ಲೂ ಬೇರುಬಿಟ್ಟಿತೆಂಬುದಕ್ಕೆ ಆ ನಾಮಕರಣ ನಿದರ್ಶನವಾಗಿತ್ತು.

ಆ ಊರಿನ ಎರಡು ಸಾವಿರ ಜನರಲ್ಲಿ ಎಳೆಯ ಮಕ್ಕಳ ಹೊರತಾಗಿ, ಜಮೀನ್ದಾರರು ಮತ್ತು ಅವರ ಸೇವಕರನ್ನು ಬಿಟ್ಟು ಉಳಿದವರೆಲ್ಲ ಸಂಘದ ಸದಸ್ಯರಾದರು. ಕುಂಞಂಬುವಿನ ಮನೆಯವರು ಕೊಟ್ಟ ಜಾಗದಲ್ಲಿ ಸಂಘದ ಕಟ್ಟಡ ಸಿದ್ಧವಾಯಿತು. ರೈತರು ಸರದಿಯಂತೆ ಬಂದು ಅದಕ್ಕೋಸ್ಕರ ದುಡಿದರು. ಹೊಲಗಳಲ್ಲಿ ಮಳೆಗಾಲದ ಮೊದಲ ಕೆಲಸವಾದ ಮೇಲೆ ರೈತರು ಅಭ್ಯಾಸಕೂಟಗಳಲ್ಲಿ ನಿರತರಾದರು.

ಜೂನ್ ಬಂತು. ಕಯ್ಯೂರಿಗೆ ಅದು ಸಂಭ್ರಮದ ತಿಂಗಳು. ನಂಬಿಯಾರರು ಮತ್ತು ನಂಬೂದಿರಿಯ ಮಕ್ಕಳಿಬ್ಬರು ಹೈಸ್ಕೂಲು ವಿದ್ಯಾಭ್ಯಾಸಕ್ಕಾಗಿ ನೀಲೇಶ್ವರಕ್ಕೆ ಹೋದರು. ಮಾರನೇ ದಿನ ಬೇರೆಯೂ ಇಬ್ಬರೂ ಹುಡುಗರು ಅದೇ

ಉದ್ದೇಶಕ್ಕೋಸ್ಕರ ಊರು ಬಿಟ್ಟರು: ಒಬ್ಬ ಅಪ್ಪುವಿನ ತಮ್ಮ, ಇನ್ನೊಬ್ಬ ಕುಂಞಂಬುವಿನ ತಮ್ಮ. ರೈತರು ತಮ್ಮ ಮಕ್ಕಳನ್ನು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಹೊರಗೆ ಕಳುಹಿಸಿದುದು ಅದೇ ಮೊದಲು. ಅದು ಸಾಮಾನ್ಯ ವಿಷಯವಾಗಿರಲಿಲ್ಲ.

ಮಕ್ಕಳೇ ಇಲ್ಲದ ಕೋರನೆಂದ:

'ರೈತ ಮಕ್ಕಳೆಲ್ಲ ಮಹಾ ದಡ್ಡರೂಂತ ಹೇಳ್ತಿದ್ರು. ಈಗ ನೋಡೋಣ. ಯಾರ ಹುಡುಗರು ಚೆನ್ನಾಗಿ ಕಲೀತಾರೆ, ಯಾರ ಹುಡುಗರು ಮೇಲಕ್ಕೆ ಬರ್‍ತಾರೇಂತ, ಈಗ ನೋಡೋಣ."

ಅಂಥ ಸಂದರ್ಭಗಳಲ್ಲೆಲ್ಲ, ಆ ಮಾತು ಬಂದಾಗಲೆಲ್ಲ, ಕೋರನಿಗೂ ಇತರರಿಗೂ ಮಾಸ್ತರ ನೆನಪಾಗುತ್ತಿತ್ತು.

ಮಾಸ್ತರು ಹೋದಮೇಲೆ ಅವರಿಂದ ಮೊದಲ ಕಾಗದವನ್ನು ಯಾರೋ ತಂದು ಕೊಟ್ಟಾಗ, ರೈತರು ತಂಡತಂಡವಾಗಿ ಬಂದು, "ಏನು ಬರೆದಿದ್ದಾರೆ?" ಎಂದು ಕೇಳಿ ಹೋದರು. ಎಲ್ಲರೂ ಓದಿಯಾದ ಮೇಲೂ ಓದಿಸಿ ಕೇಳಿಯಾದ ಮೇಲೂ ಅಪ್ಪು ಅದನ್ನು ಮನೆಗೊಯ್ದು ಒಬ್ಬನೇ ಓದಿದ; ಹೆಂಡತಿ ಜಾನಕಿಗೆ ಅದನ್ನು ತೋರಿಸಿದ.

ಅಪ್ಪುವಿನ ತಂದೆಯೆಂದ:

ಮಾಸ್ತರು ಚಿನ್ನದಂಥ ಮನುಷ್ಯ. ಅವರನ್ನ ಇಲ್ಲೇ ಇರಿಸಿಕೊಳ್ಳೋ ಅದೃಷ್ಟ ನಮಗಿಲ್ದೇಹೋಯ್ತು. ಇದ್ದಾಗಲೂ ಅವರನ್ನು ನಾವು ಸರಿಯಾಗಿ ನೋಡಿಕೊಳ್ಳಲ್ಲ."

ಹೊಸ ಮಾಸ್ತರು ಯಾರು ಬರುವರೋ ಎಂದು ಹಲವರು ಕುತೂಹಲದಿಂದ ಕಾದು ನೋಡಿದರು. ಹಾದಿ ನೋಡಿದರು. ಆದರೆ ಯಾರ ಸುಳಿವೂ ಇರಲಿಲ್ಲ. ಉಪಾಧ್ಯಾಯರು ಸಿಗದ ನೆಪ ಹೇಳಿ ಜಮೀನ್ದಾರರು ಶಾಲೆಯನ್ನೇ ಮುಚ್ಚಿಬಿಡಬಹುದೆಂದು ರೈತರಿಗೆ ಸಂದೇಹ ಬಂತು. ಆವರ ಅಪೇಕ್ಷೆಯಂತೆ, ಸಂಘದ ಕಾರ್ಯದರ್ಶಿ ಚಿರುಕಂಡನೂ ವಯಸ್ಸಾದ ಇಬ್ಬರು ರೈತರೂ ಜಮೀನ್ದಾರರಿಬ್ಬನ್ನು ಕಾಣಲು ಹೋದರು.

ನಂಬಿಯಾರರು ಬಂದವರನ್ನು ಕಡೆಗಣ್ಣಿನಿಂದ ನೋಡಿ, "ನೀವು ಯಾರು ಕೇಳೋದಕ್ಕೆ?" ಎಂದು ಅಬ್ಬರಿಸಿದರು.

"ನಾವು ಸಂಘದವರು."

"ಸಂಘಕ್ಕೂ ನಮಗೂ ಯಾವ ಸಂಬಂಧವೂ ಇಲ್ಲ."

ಶಾಲೆ ನಡೆಸೋ ಮುಖ್ಯಸ್ಥರು ನೀವಾದ್ದರಿಂದ ನಮ್ಮ ಮಕ್ಕಳ ವಿದ್ಯಾಭ್ಯಾಸಕ್ಕೆ ಸಂಬಂಧಿಸಿ ಮಾತಾಡೋದಕ್ಕೆ ನಾವು ನಿಮ್ಮಲ್ಲಿಗೆ ಬಂದಿದ್ದೇವೆ."

ಹಾಗೆ ಹೇಳಿದ ಚಿರುಕಂಡನನ್ನು ನಂಬಿಯಾರರು ಮೇಲಿನಿಂದ ಕೆಳಗಿನವರೆಗೂ ನೋಡಿ ಕುತ್ಸಿತನಗೆ ನಕ್ಕು, ಅಂದರು:

"ಆಗಲೇ ಮಕ್ಕಳೂ ಆದರೇನಪ್ಪ ನಿನಗೆ?"

ಆ ಪ್ರಶ್ನೆ ಕೇಳಿಯೂ ಕೇಳಿಸದಂತೆ ಚಿರುಕಂಡನೆಂದ:

"ಇಲ್ಲಿ ಇನ್ನೂ ಗ್ರಾಮಪಂಚಾಯಿತಿ ಇಲ್ಲ. ನೀವು ಅದಕ್ಕೆ ಆಸ್ಪದವನ್ನೇ ಕೊಟ್ಟಿಲ್ಲ. ಇದ್ದಿದ್ದರೆ ಪಂಚಾಯಿತಿಯವರೇ ಶಾಲೆ ನಡೆಸ್ತಿದ್ರು."

"ಓಹೋ! ನಡಸದೇನು ಮಾಡ್ತಿದ್ರು? ಈಗಲೂ ಪಂಚಾಯಿತಿ ಸ್ಥಾಪಿಸೋದಕ್ಕೆ ನಿಮ್ಮನ್ನು ಯಾರು ತಡೀತಾರೆ? ಬರೀರಿ ಸರ್ಕಾರಕ್ಕೆ. ಬರ್‍ಲಿ ಕಲೆಕ್ಟರು ಚುನಾವಣೆ ನಡೆಸ್ಲಿ!"

"ಮಾಡಬೇಕಾಗಿ ಬಂದಾಗ ಅದನ್ನು ಮಾಡಿಯೇ ಮಾಡ್ತೇವೆ, ಆದರೆ ಈಗ ಶಾಲೆ ಮುಚ್ಚಿರೋದು ಸರಿಯಲ್ಲ."

"ನಿಮ್ಮ ಸಂಘಕ್ಕೆ ಒಬ್ಬ ಗುಮಾಸ್ತ ಇಲ್ಲದೆ ಬಹಳ ತೊಂದರೆಯಾಗಿದೆ, ಅಲ್ಲ? ಯಾವನಾದರೂ ಪೇಪರು ಓದೋ ಮಾಸ್ತರು ಬಂದರೆ ಸರಿಯಾಗ್ತದೆ!"

ಕೆಣಕುವ ಎಂತಹ ನುಡಿಗಳಿದ್ದರೂ ರೇಗದೆಯೇ ಮಾತನಾಡುವ ಚಿರುಕಂಡನ ಸಾಮರ್ಥ್ಯ ವಿಸ್ಮಯಕರವಾಗಿತ್ತು.

"ನಮ್ಮ ಸಂಘದಲ್ಲಿ ಕೆಲಸ ಮಾಡೋರಿಗೇನೂ ಈಗ ಅಭಾವ ಇಲ್ಲ. ಹುಡುಗರಿಗೆ ಪಾಠ ಹೇಳಿಕೊಡೋದಕ್ಕೆ ಮಾಸ್ತರರಿದ್ದರೆ ಸಾಕು."

ಚಿರುಕಂಡನ ನಿರ್ಭೀತ ಶಾಂತ ಮುಖಮುದ್ರೆಯನ್ನು ಕಂಡು ಸಹಿಸುವುದಾಗಲಿಲ್ಲ ನಂಬಿಯಾರರಿಂದ. ಅವರು ಕೂಗಾಡಿದರು:

"ಹೋಗಿ! ಹೊರಟ್ಹೋಗಿ! ನಾನು ಶಾಲೆ ತೆರೆಯೋದಿಲ್ಲ. ನನ್ನಿಷ್ಟ!"

ಕೊನೆಯದಾಗಿ ಚಿರುಕಂಡನೆಂದ.

"ಇನ್ನು ಸ್ವಲ್ಪ ದಿನ ಕಾದು ನೋಡ್ತೇವೆ. ಆಗಲೂ ಶಾಲೆ ಶುರುವಾಗದಿದ್ರೆ ಮುಂದಿನ ಕ್ರಮ ಕೈಗೊಳ್ತೇವೆ."

ಕಟ್ಟ ಕಡೆಯದಾಗಿ ಮಾತು ತನ್ನದೇ ಆಗಬೇಕೆಂದು ನಂಬಿಯಾರರೆಂದರು:

"ಓಹೋ! ಸಂತೋಷವಾಗಿ ಹಾಗೆ ಮಾಡಿ!"

ಅಲ್ಲಿಂದ ಸಂಘದ ಪ್ರತಿನಿಧಿಗಳು ನಂಬೂದಿರಿಯಲ್ಲಿಗೆ ಹೋದರು.

"ಸಂಘದವರು! ಬನ್ನಿ—ಬನ್ನಿ—ಏನ್ಸಮಾಚಾರ?" ಎಂದು ಆತ ದೇಶಾವರದ ನಗೆ ಬೀರಿದರು.

ವಿಷಯವೇನೆಂದು ಚಿರುಕಂಡ ವಿವರಿಸಿದಾಗ, ಆ ಜಮೀನ್ದಾರರೆಂದರು:

"ಏನಪ್ಪ ಮಾಡೋದು? ನಂಬಿಯಾರರಿಗೋ ಬೇರೆ ಮಕ್ಕಳಿಲ್ಲ. ನನಗೆ ಇದ್ದಾರೆ. ಶಾಲೆ ಮುಚ್ಚಿದರೂ ಈಗ ಅವರಿಗೆ ಚಿಂತೆಯಿಲ್ಲ. ಚಿಂತೆ ನನಗೆ ಮಾತ್ರ! ನಮ್ಮಿಂದಾಗಿ ನಿಮಗೂ ತೊಂದರೆ. ನಮ್ಮ ಸಣ್ಣ ಹುಡುಗರನ್ನೂ ನೀಲೇಶ್ವರಕ್ಕೇ ಕಳಿಸಿ, ಅಲ್ಲಿಯೇ ಮನೆಮಾಡೋಣಾಂತ ಒಂದು ಯೋಚನೆಯೂ ನನಗಿದೆ.... ಏನಪ್ಪ ಮಾಡೋದು?"

"ನಿಮ್ಮಷ್ಟ ಶಾಲೆ ಮುಚ್ಚಿದರೆ ಎಷ್ಟೋ ಹುಡುಗರಿಗೆ ತೊಂದರೆಯಾಗ್ತದೆ. ಶಾಲೆಗೇಂತ ವರ್ಷವೂ ಎಲ್ಲ ರೈತರೂ ವಂತಿಗೆ ಕೊಡ್ತಾ ಬಂದಿದ್ದಾರೆ. ಈವರೆಗೂ ಯಾರೂ ಅದರ ಲೆಕ್ಕ ಕೇಳಿಲ್ಲ. ಈಗ ಮುಚ್ಚೋದಕ್ಕೆ ಕಾರಣವಾದರೂ ಏನು? ಕಾರಣ ಕೇಳೋ ಹಕ್ಕಾದರೂ ರೈತರಿಗಿದೆಯಷ್ಟೆ?"

ನೀಳವಾದ ಕರಿಯ ದೇಹ, ತೆಳ್ಳಗಿನ ಕುಡಿಮೀಸೆ. ಕಿರಿದಾಗಿ ಕತ್ತರಿಸಿದ್ದ ಕ್ರಾಪು, ಶುಭ್ರವಾದ ಬಿಳಿಯ ಅಡ್ಡಪಂಚೆ, ನೀಳವಾದ ಬಿಳಿಯ ಶರಟು—ಹಾಗಿದ್ದ ಚಿರುಕಂಡನನ್ನು ನಂಬೂದಿರಿ ನೋಡಿಯೇ ನೋಡಿದರು. ಈತ ಕಯ್ಯೂರಿನವನೇ ತಾನೆ? ಎಂದು ಅವರಿಗೆ ಆಶ್ಚರ್ಯವಾಯಿತು. ತಮಗೆ ತಿಳಿಯದೆಯೇ ಜನ ಹೇಗೆ ಬದಲಾಗಿದ್ದಾರೆ ಎಂದು ಅಚ್ಚರಿಯೂ ಅನಿಸಿತು. ಚಿರುಕಂಡ ಏನು ಹೇಳುತ್ತಿದ್ದನೆಂಬುದನ್ನು ಆಗಲೆ ಮರೆತಿದ್ದ ಅವರು, ಕನಸಿನಿಂದ ಎಚ್ಚೆತ್ತವರಂತೆ ಅಂದರು:

"ಹೂ. ಏನಂದಿರಿ? ಮುಚ್ಚೋದಕ್ಕೆ ಏನು ಕಾರಣ ಅಂತ್ಲ? ನನಗೆ ಗೊತ್ತಿಲ್ಲಪ್ಪ. ನಂಬಿಯಾರನ್ನೇ ಕೇಳ್ಬೇಕು. ಶಾಲೆ ತೆರೀಲೇಬೇಕೂಂತ ಹಿಂದೆ ಗಲಾಟೆ ಮಾಡಿದವರೂ ಅವರೇ, ಈಗ ಮುಚ್ಚಿರೋದೂ ಅವರೇ."

"ಆದರೂ ನೀವಿಬ್ಬರೂ ಇದಕ್ಕೆ ಕಾರಣ ಅಂತ ಜನ ಆಡಿಕೊಳ್ತಾರೆ."

ವೈರಿಬಣದಲ್ಲಿ ಬಿರುಕು ಹುಟ್ಟಿಸುವ ಕೌಶಲವಿತ್ತು ಚಿರುಕಂಡನ ಆ ಮಾತಿನಲ್ಲಿ.

"ಛೇ! ಛೆ! ಅದು ಸರಿಯಲ್ಲ. ನಂಬಿಯಾರಿಗೆ ನಾನು ಹೇಳ್ತೀನಪ್ಪ; ಬೇಗ ಯಾರನ್ನಾದರೂ ಕರೆಸೀಂತ ಹೇಳ್ತೇನೆ."

ಸಂಘದ ನಿಯೋಗ ಹಿಂತಿರುಗಿತು.

ನಂಬೂದಿರಿ ನಂಬಿಯಾರರೊಡನೆ ಅದೇನು ಮಾತನಾಡಿದರೋ ಬಿಟ್ಟರೋ ಶಾಲೆ ಮತ್ತೆ ಶುರುವಾಗಲೇ ಇಲ್ಲ.

ಸಂಘದ ಕಾರ್ಯಸಮಿತಿ ಮತ್ತೆ ಸಭೆ ಸೇರಿ ಚರ್ಚಿಸಿ ಶಾಲೆಯ ವಿಶ್ವಸ್ಥ ಸಮಿತಿಯ ಮುಖ್ಯಸ್ಥರಿಗೆ ಪತ್ರ ಬರೆಯಲು ತೀರ್ಮಾನಿಸಿತು.

ಪತ್ರದ ಸಾರಾಂಶವಿಷ್ಟು: "ಶಾಲೆಯ ಲೆಕ್ಕಪತ್ರಗಳನ್ನೆಲ್ಲ ಒಡನೆಯೇ

ಮಹಾಜನರ ಮುಂದಿಡಬೇಕೆಂದು ಸಂಘ ಆಗ್ರಹಪಡಿಸುತ್ತದೆ. ಸಮಿತಿಯ ಮುಖ್ಯಸ್ಥರು ಮತ್ತೆ ಶಾಲೆಯನ್ನು ತೆರೆಯುವುದಿಲ್ಲವೆಂದಾದರೆ, ಶಾಲೆ ನಡೆಸುವ ಜವಾಬ್ದಾರಿಯನ್ನು ತನ್ನ ವಶಕ್ಕೆ ತೆಗೆದುಕೊಳ್ಳಲು ಸಂಘ ಅಪೇಕ್ಷಿಸುತ್ತದೆ. ಇದಕ್ಕೆ ಅಡ್ಡಿಯೊದಗಿದರೆ, ಸ್ವಂತದ ಶಾಲೆಯನ್ನೇ ತೆರೆಯುವ ಉದ್ದೇಶವೂ ಸಂಘಕ್ಕಿದೆ. ಆ ಪರಿಸ್ಥಿತಿಯಲ್ಲಿ ಒಬ್ಬರು ಇಲ್ಲವೆ ಇಬ್ಬರು ನುರಿತ ಉಪಾಧ್ಯಾಯರನ್ನು ಸಂಘವೇ ಹೊರಗಿನಿಂದ ತರಿಸುವುದೆಂಬುದು ಸ್ಪಷ್ಟ..."

ನಂಬಿಯಾರರು ಕಾಗದವನ್ನೋದಿ ಕನಲಿದರು. ಅದನ್ನು ಚೂರುಚೂರಾಗಿ ಹರಿದೆಸೆದರು. ಅಲ್ಲಿಗೆ ಅದನ್ನೊಯ್ದಿದ್ದ ಕೋರನನ್ನು, "ಹೋಗು ಮುರ್ಖ!" ಎಂದು ಬಯ್ದರು.

ಉತ್ತರ ಕೊಡುವುದಕ್ಕೋಸ್ಕರ ಬಲು ಒಳ್ಳೊಳ್ಳೆಯ ಪದಗಳು ಕೋರನ ನಾಲಿಗೆಯ ತುದಿಯ ಮೇಲೆ ನರ್ತಿಸಿದುವು. ನಂಬಿಯಾರರು ಏನೇ ಮಾಡಿದರೂ ಸುಮ್ಮನಿರಬೇಕೆಂದು ಚಿರುಕಂಡ ಕಟ್ಟಾಜ್ಞೆ ಇತ್ತಿದ್ದುದರಿಂದ ಕೋರ ಹಾಗೆಯೇ ಹಿಂತಿರುಗಬೇಕಾಯಿತು.

ಆದರೂ ಸಂಘದ ಕಾಗದದಿಂದ ಪರಿಣಾಮ ಆಗಿಯೇಬಿಟ್ಟಿತು.

ಆದಾದ ಒಂದು ವಾರದಲ್ಲೇ ವಯಸ್ಸಾದವರೊಬ್ಬರು ಉಪಾಧ್ಯಾಯರಾಗಿ ಅಲ್ಲಿಗೆ ಬಂದರು. ಕೂದಲು ಪೂರ್ತಿ ನರೆತಿತ್ತು. ಕೆಲ ಹಲ್ಲುಗಳು ಉದುರಿದ್ದುವು. ಮೂಗಿನ ಮೇಲೆ ಕನ್ನಡವಿತ್ತು.

ಕಣ್ಣ ಅವರನ್ನು ನೋಡಲು ಹೋಗಿ ಕೇಳಿದ:

"ಒಬ್ಬರೇ ಬಂದಿದ್ದೀರಲ್ಲ. ಮಕ್ಕಳು ಮೊಮ್ಮಕ್ಕಳು ಯಾವಾಗ ಬರ್ರಾರೆ?"

ಮೊದಲು, ಆ ರೈತ ತನ್ನನ್ನು ಲೇವಡಿ ಮಾಡುತ್ತಿರಬೇಕೆಂದು ಉಪಾಧ್ಯಾಯರಿಗೆ ಸಂದೇಹ ಬಂತು. ಅವರು ದುರದುರನೆ ಆತನನ್ನು ನೋಡಿದರು. ಆದರೆ ನಿಷ್ಕಾಪಟ್ಯದ ಕನ್ನಡಿಯಾಗಿತ್ತು ಕಣ್ಣನ ಮುಖಭಾವ. ಆತ ಒಳ್ಳೆಯವನೇ ಇರಬೇಕೆಂದು ಉಪಾಧ್ಯಾಯರು ತೀರ್ಮಾನಿಸಿ, ಹೇಳಿದರು:

"ಇಲ್ಲವಪ್ಪ ಇಲ್ಲ. ನಿವೃತ್ತಿಯಾದೋನು ಕೆಲಸ ಇಲ್ದೆ ಮನೇಲಿದ್ದೆ. ಊಟ ಖರ್ಚು ಹೋಗಿ ಒಂದೈದು ರೂಪಾಯಿ ತಿಂಗಳಿಗೆ ಸಂಪಾದನೆಯಾದರೂ ಆಗಲೀಂತ ಬಂದೆ. ಹೆಚ್ಚೆಂದರೆ ಒಂದು ವರ್ಷ ಇರ್‍ತೇನೆ. ನನ್ನ ಸಂಸಾರವೆಲ್ಲ ನೀಲೇಶ್ವರದಲ್ಲೇ ಇದೆ...."—ಹಾಗೆ ಹೇಳಿ ಅವರು ಕಣ್ಣನೊಡನೆ, ಸ್ವರ ತಗ್ಗಿಸಿ ಒಂದು ರಹಸ್ಯದ ವಿಷಯ ಪ್ರಸ್ತಾಪಿಸಿದರು:

"ಇಲ್ಲಿ ಸಂಘದವರದ್ದು ಭಾರೀ ಗಲಾಟೆಯಂತೆ, ಹೌದಾ?"

ಕಣ್ಣ, ನಗದೆ, ಗಂಭೀರವಾಗಿಯೇ ಆ ಪ್ರಶ್ನೆಯನ್ನು ಆಲಿಸಿದವನಂತೆ ನಟಿಸಿದ.

"ಹೂಂ, ಹೂಂ, ಹಾಗೇಂತ್ಲೆ ಹೇಳ್ಬೇಕು."

"ಹಿಂದಿನ ಮಾಸ್ತರು ಶಾಲೆ ಕೆಲಸದ ಮೇಲೆ ನಿಗಾ ಇಡದೆ ಸಂಘದವರ ಜತೆ ಇರ್‍ತಿದ್ರಂತೆ."

"ಅದೇನೋಪ್ಪ. ಅಂತೂ ಅವರು ಹೆಚ್ಚಾಗಿ ಸಂಘದೋರ ಜತೇಲಿ ಇರ್‍ತಿದ್ರು."

"ನಾನು ಹಿಲಗೆಲ್ಲ ಕೇಳ್ದೇಂತ ಯಾರಿಗೂ ಹೇಳ್ಬೇಡಪ್ಪ ಸದ್ಯ:, ನನಗೆ ಯಾಕೆ ಬೇಕು ಇದೆಲ್ಲ? ಜಮೀನ್ದಾರರು ಹಾಗೆ ಹೇಳಿದ್ರೂಂತ ವಿಚಾರಿಸ್ದೆ, ಅಷ್ಟೆ."

"ಅಯ್ಯೋ, ಅದೆಲ್ಲ ಏನು ದೊಡ್ಡ ತಪ್ಪು?"

"ಹಾಗಲ್ಲವಪ್ಪ! ನಾನು ಪರಊರಿನೋನು. ವಯಸ್ಸಾಗಿದೆ. ಯಾರ ವೈರವೂ ನನಗೆ ಬೇಡ. ಜಮೀನ್ದಾರರ ಜತೇಲೂ ನಾನು ಸ್ನೇಹದಿಂದಿರ್ಬೇಕು. ರೈತರ ಜತೇಲೂ ಸ್ನೇಹದಿಂದಿರ್ಬೇಕು ಅಲ್ವೇನಪ್ಪ?"

"ಹೌದು, ಹೌದು."

"ನಿನ್ನ ಮಕ್ಕಳು ಈ ಶಾಲೆಗೆ ಬರ್‍ತಾರೋ?"

"ನನ್ನದಿನ್ನೂ ಚಿಕ್ಕಮಗು."

"ಐದು ವರ್ಷ ಆಗಿಲ್ವೊ?"

"ಇಲ್ಲ. ಇನ್ನು ಐದೇ ತಿಂಗಳು."

"ಬರೇ ಚಿಕ್ಕದು ಹಾಗಾದರೆ"—ಎಂದು ಆ ಉಪಾಧ್ಯಾಯರು ಅಭಿಪ್ರಾಯ ಇತ್ತರು. 'ನನ್ನ ಮಗಳಿಗೆ ಪಾಠ ಹೇಳೋದಕ್ಕೆ ನೀವು ಇಲ್ಲಿರೋದಿಲ್ಲ' ಎಂದ ಕಣ್ಣ, ಮನಸ್ಸಿನಲ್ಲಿಯೆ.

ಇಲ್ಲಿ, ಅಕ್ಕಿ ತರಕಾರಿ ಹಾಲು ಮೊಸರು ಅನುಕೂಲವೆ ಎಂದು ವಿಚಾರಿಸಲು ಹೊರಟು ಉಪಾಧ್ಯಾಯರು, ಮೂಗಿಗೆ ಒಂದು ಚಿಟಿಕೆ ನಶ್ಯವೇರಿಸಿದರು. ಆ ವಿಷಯ ಮತ್ತೂ ಸ್ವಲ್ಪ ಹೊತ್ತು ಅವರೊಡನೆ ಹರಟೆ ಹೊಡೆಯಲು ಕಣ್ಣನೂ ನಿರಾಕರಿಸಲಿಲ್ಲ.

ಆದರೆ ಸಂಘದ ಕಟ್ಟಡಕ್ಕೆ ಮರಳಿ ಬಂದೊಡನೆ ಮಾತ್ರ, ನಡೆದುದೆಲ್ಲವನ್ನೂ ಅಭಿನಯಪೂರ್ವಕವಾಗಿ ಕಣ್ಣ ಬಣ್ಣಿಸುತ್ತ, ನೋಡುತ್ತಿದ್ದ ಕೇಳುತ್ತಿದ್ದವರೊಡನೆ ತಾನೂ ಬಿದ್ದುಬಿದ್ದು ನಕ್ಕ. ಇನ್ನು ಪ್ರತಿಯೊಬ್ಬರೂ ಆ ಬಡ ಉಪಾಧ್ಯಾಯರನ್ನು ಗೇಲಿಮಾಡಲು ತೊಡಗಬಹುದೆಂದು ಚಿರುಕಂಡನೆಂದ:

"ಇಲ್ಲಿ ನೋಡಿ. ಯಾರೂ ಅವರ ತಂಟೆಗೆ ಹೋಗಬಾರ್‍ದು. ಬಡಪಾಯಿ ಇದ್ದಷ್ಟು ಕಾಲ ಪಾಠ ಹೇಳ್ಲಿ. ಯಾರೂ ಆ ಮುದುಕನಿಗೆ ಹಿಂಸೆ ಕೊಡ್ಬೇಡಿ."

....ಶಾಲೆಯ ಪಾಠದ ಬಳಿಕ ಹುಡುಗರ ಆಟದ ಏರ್ಪಾಟನ್ನು ಸಂಘ ಮಾಡಿತು. ಹನ್ನೊಂದು ವರ್ಷ ವಯಸ್ಸಿನ ಕುಟ್ಟಿಕೃಷ್ಣನ ನೇತೃತ್ವದಲ್ಲಿ ಬಾಲ ಸಂಘವೇರ್ಪಟ್ಟಿತು. ಕುಟ್ಟಿಕೃಷ್ಣ ಸಮರ್ಥನಾದ ಬಾಲನಾಯಕನೇ ಆಗಿದ್ದ ಆತನ ಸಂಘಟನಾ ಸಾಮರ್ಥ್ಯಕ್ಕೆ ದೊಡ್ಡವರೂ ಬೆರಗಾದರು.

.... ಆದರೆ, ಹಾಗೆ ಬೆರಗಾಗುತ್ತ ಕುಳಿತಿರಲು ಇನ್ನು ಅವಕಾಶವಿಲ್ಲವೆಂಬಂತೆ ಘಟನೆಗಳು ನಡೆದವು. ಮುಖ್ಯವಾದುದು: ದ್ವಿತೀಯ ಘೋರ ಮಹಾಯುದ್ಧದ ಆರಂಭ. ಯುದ್ಧ ಶುರುವಾದುದೆಲ್ಲೋ ಲೋಕದೊಂದು ಮೂಲೆಯಲ್ಲಿ. ಬಲು ದೂರದ ಕಾಡಿಗೆ ಬೆಂಕಿ ಬಿದ್ದಹಾಗೆ. ಆದರೆ, ಅದರ ಬೇಗೆ ಕಯ್ಯೂರಿಗೂ ತಟ್ಟದೆ ಹೋಗಲಿಲ್ಲ. ಬೆಂಕಿಪೊಟ್ಟಣದಿಂದ ಹಿಡಿದು ಹಾರೆ ಪಿಕಾಸಿಯವರೆಗೆ ಸಾಮಗ್ರಿಗಳ ಬೆಲೆ ಮೆಲ್ಲಮೆಲ್ಲನೆ ಏರಿತು.

ಗುಪ್ತವಾಗಿ ಬರುತ್ತಿದ್ದ ಕರಪತ್ರಗಳೂ, 'ಸಾಹಿತ್ಯ'ವೂ ದೇಶದ ಬಂಧ ವಿಮೋಚನೆಯನ್ನು ಸಾಧ್ಯಗೊಳಿಸಲು ಕ್ರಾಂತಿಕಾರಕ ಶಕ್ತಿಗಳಿಗೆ ದೊರೆತ ಅಪೂರ್ವ ಸಂದರ್ಭದ ಬಗ್ಗೆ ಮಾತಾಡಿದುವು; ಜನ ಹೋರಾಡಲು ಸನ್ನದ್ಧರಾಗುತ್ತಿದ್ದ ವದಂತಿ ಮುಟ್ಟಿಸಿದುವು: ವೀರಘೋಷಗಳು, ಬಾಹುಸ್ಫುರಣಗೊಳಿಸುವ ವಿವರ, ಹೋರಾಟಕ್ಕೆ ಕಹಳೆ....

ಜಾನಕಿಯ ತೋಳತೆಕ್ಕೆಯ ನೆನಪನ್ನು ಬದಿಗೊತ್ತಿ ಒಮ್ಮೆ ಅಪ್ಪು ಹೇಳಿದ:

"ನಾವು ಸಿದ್ಧರಾಗ್ಬೇಕು ಚಿರುಕಂಡ."

"ಏನು ಸಿದ್ಧವಾಗೋದು ಅಂದರೆ? ಎಲ್ಲಿಗಾದರೂ ಪ್ರವಾಸ ಹೋಗ್ಬೇಕಾಗಿದ್ಯೇನು?"

"ಯಾಕೆ ಹೋಗಬಾರ್ದು? ಹೋರಾಟವಾಗುವಲ್ಲಿ—"

ಆ ಮಾತಿಗೆ ಚಿರುಕಂಡ ಸಿಟ್ಟಾದ "ಅದನ್ನೋದು, ಇದನ್ನೋದು, ಯೋಚನೆ ಮಾಡು"—ಎಂದ.

ಚಿರುಕಂಡ ಪ್ರತಿ ಸಾರೆಯೂ ವಿವರವಾಗಿ ಹೇಳುವುದಿತ್ತು:

"ಸಾಮ್ರಾಜ್ಯಶಾಹಿ ಆಡಳಿತ ಅನ್ನೋದು ಇಡೀ ದೇಶವನ್ನೇ ಆವರಿಸಿದ ವಿಸ್ತಾರವಾದ ಬಲೆಯಿದ್ದಹಾಗೆ. ನಮ್ಮ ಊರಿನ ಮೇಲಿರುವ ಭಾಗವನ್ನು ನಾವು ಕತ್ತರಿಸ್ಬೇಕು. ಹಾಗೆಯೆ ಒಂದೊಂದು ಊರಿನವರು ಅವರವರ ಅಂಶಕ್ಕೆ ಕತ್ತರಿ ಹಾಕ್ಬೇಕು. ಆದರೆ ಇದೆಲ್ಲ ಒಂದೇ ಕಾಲದಲ್ಲಿ ಆಗೋದು ಅಗತ್ಯ . ಇಲ್ಲದೆ ಹೋದರೆ ಹರಿದ ಭಾಗವನ್ನು ದುರಸ್ತಿ ಮಾಡೋದಕ್ಕೆ ಸಾಮ್ರಾಜ್ಯಶಾಹಿಗೆ ಸಮಯ ಸಿಗ್ತದೆ. ಸ್ಪಷ್ಟವಾಯ್ತೆ?"

ವಿಷಯ ಸ್ಪಷ್ಟವಾಗಿತ್ತು. ಆದರೆ ಬಿಸಿರಕ್ತದ ಜವ್ವನಿಗರು, "ಕಾಯೋದು ಇನ್ನೆಷ್ಟು ದಿನ?" ಎಂದು ಕೇಳುತ್ತಲೇ ಇದ್ದರು.

ಅಂತಹ ಸಂದರ್ಭದಲ್ಲೊಮ್ಮೆ ಕಣ್ಣ, "ನಮ್ಮ ಹಳ್ಳೀಲೇನೋ ಸಾಮ್ರಾಜ್ಯ ಶಾಹಿ ಕಾಣ್ಸಾನೇ ಇಲ್ಲ. ಇರೋ ಭೂಪರು ಇಬ್ಬರು. ಅವರನ್ನು ಹಾದಿಗೆ ತಂದು, ಅವರೂ ನಾವು—ಎಲ್ಲ ಜತೆಯಾಗಿಯೇ ಕೊಲ ಹಂಚಿಕೊಂಡು ಸ್ವಾತಂತ್ರ್ಯದ ಬಾವುಟಾನ ಸುಲಭವಾಗಿ ಏರಿಸಬಹುದು. ಆದರೆ ಅಕ್ಕ ಪಕ್ಕದ ಹಳ್ಳಿಯೋರೆಲ್ಲ ಸಿದ್ಧವಾಗಿಲ್ಲ. ಅದಕ್ಕಾಗಿ ನಾವೂ ಕಾಯ್ಬೇಕಾಗಿದೆ!" ಎಂದ.

ಅವನ ಮಾತನ್ನು ಕೇಳಿದವರು ನಕ್ಕರು.

........................

ದಿನ ಕಳೆಯಿತು. ಸಾಮ್ರಾಜ್ಯಶಾಹಿ ತಾನು ಸಮೀಪದಲ್ಲೆ ಇರುವೆನೆಂದು ತೋರಿಸಿಕೊಂಡಿತು.

ಪೋಲಿಸ್ ಅಧಿಕಾರಿಯೊಡನೆ ತಾಲ್ಲೂಕು ಅಧಿಕಾರಿ ಒಮ್ಮೆ ಅಲ್ಲಿಗೆ ಬಂದು, ನಂಬಿಯಾರ್ ಜಮೀನ್ದಾರರಲ್ಲಿ ಬೀಡುಬಿಟ್ಟರು. ಬಂದಿದ್ದವರು ಹೊಸಬರಾಗಿದ್ದರೂ ಸಂಕೋಚವಿಲ್ಲದೆ... ಸಂಘುಕ್ಕಿದಿರಾಗಿ ಆ ಭೇಟಿಯನ್ನು ಉಪಯೋಗಿಸಿಕೊಳ್ಳಲು ನಂಬಿಯಾರರು ಯತ್ನಿಸದಿರಲಿಲ್ಲ. ಅವರೆಂದರು:

ನಾಲ್ಕೈದು ಜನ ರೈತ ಮುಖಂಡರ ಹೊರತು ಸರ್ಕಾರವನ್ನು ವಿರೋಧಿಸೋರು ಇಲ್ಲಿ ಯಾರೂ ಇಲ್ಲ. ಅವರ್ನೆಷ್ಟು ಜೈಲಿಗೆ ಸೇರಿಸಿದ್ರೆ—"

ತಾಲ್ಲೂಕು ಅಧಿಕಾರಿ ಬಂದ ಉದ್ದೇಶ ಅದಾಗಿರಲಿಲ್ಲ.

"ಅದನ್ನೆಲ್ಲ ಮಾಡೋಣ ಮಿಸ್ಟರ್ ನಂಬಿಯಾರ್. ಈಗ ನಾವು ಸೈನ್ಯಕ್ಕೆ ಜನ ಭರ್ತಿ ಮಾಡ್ಬೇಕಾಗಿದೆ. ನಿಮ್ಮ ಹಳ್ಳಿಯಿಂದ ಎಷ್ಟು ಜನರನ್ನು ಕೊಡ್ತೀರ."

ಆ ವಿಷಯದಲ್ಲಿ ತಾವು ಕೈಲಾಗದವರೆಂದು ತಿಳಿದಿದ್ದ ನಂಬಿಯಾರರು:

"ನನ್ನನ್ನು ಸೇರಿಸ್ಕೊಳ್ಳಿ" ಎಂದು ನಕ್ಕರು.

ಅಧಿಕಾರಿಯೂ ನಕ್ಕು ನುಡಿದರು:

"ನೀವೆಲ್ಲ ಯುದ್ಧಕ್ಕೆ ಹೋದರೆ ನಮ್ಮನ್ನು ಯಾರು ನೋಡ್ಕೊಳ್ಳೋರು? ಇದು ತಮಾಷೆ ಮಾತಲ್ಲ. ನಿಮ್ಮ ಗ್ರಾಮದಿಂದ ಇಪ್ಪತ್ತು ಜನರಾದರೂ ಬೇಕು."

ಊರೆಲ್ಲ ಡಂಗುರ ಸಾರಿದ್ದಾಯಿತು. ಸಂಜೆಯವರೆಗೂ ಯಾರೂ ಬರಲಿಲ್ಲ. ರಾತ್ರೆ ಅಲ್ಲಿಯೇ ಬೀಡುಬಿಟ್ಟ ಅಧಿಕಾರಿಗಳನ್ನುದ್ದೇಶಿಸಿ ನಂಬಿಯಾರ್ ಹೇಳಿದರು:

"ನಮ್ಮ ಜನ ಕೆಟ್ಟು ಹೋಗಿದ್ದಾರೆ. ನಾಳೆ ಬೆಳಿಗ್ಗೆ ನನ್ನ ಇಬ್ಬರು, ನಂಬೂದಿರಿಯ ಇಬ್ಬರು ಆಳುಗಳನ್ನು ಕರಕೊಂಡು ಹೋಗಿ."

"ಅದಿದ್ದೇ ಇದೆ ಅನ್ನಿ. ಆದರೂ ಬೆಳಿಗ್ಗೆ ಮತ್ತೊಮ್ಮೆ ಡಂಗುರ ಹೊಡಿಸ್ತೇವು. ಜನರಿಗೆ ಅರ್ಥವಾಗೇ ಇಲ್ಲಾಂತ ಕಾಣ್ತದೆ."

ಅರ್ಥವಾಗಿತ್ತು. ಅಷ್ಟೇ ಅಲ್ಲ, ಸಂಘದ ಕಛೇರಿಯಲ್ಲಿ ಆ ಸಂಬಂಧವಾಗಿ ದೊಡ್ಡ ಗೊಂದಲವೇ ಆಯಿತು. ಉದ್ಯೋಗದ ಪ್ರಶ್ನೆ. ಹಳ್ಳಿಯಲ್ಲಿ ಕೆಲವರು ಸೈನ್ಯ ಸೇರುವ ಮಾತನ್ನಾಡಿಯೇ ಆಡಿದರು. ಅವರಿಗೂ ಉಳಿದವರಿಗೂ ಜಗಳವಾಯಿತು. ತೀರ್ಪಿಗೋಸ್ಕರ ಜಗಳ ಸಂಘದ ಮುಖಂಡರಲ್ಲಿಗೆ ಬಂತು. ಸೈನ್ಯ ಸೇರುವೆವೆಂದಿದ್ದ ಅಷ್ಟು ಜನಕ್ಕೂ ಸಾಕಷ್ಟು ಹೊಲವಿರಲಿಲ್ಲ. ಉದ್ಯೋಗವಿರಲಿಲ್ಲ; ಸಾಕಲು ದೊಡ್ಡ ಸಂಸಾರಗಳಿದ್ದುವು. ಅಪ್ಪುವಿನೊಡನೆ ಚಿರುಕಂಡ ಈ ಸಮಸ್ಯೆಯನ್ನು ಕುರಿತು ದೀರ್ಘಸಮಾಲೋಚನೆ ನಡೆಸಿದ. ಅದರ ಫಲವಾಗಿ ಅವರು, ಸರಿಯೆಂದೇ ತಾವು ಭಾವಿಸಿದ ತೀರ್ಮಾನಕ್ಕೆ ಬಂದರು.

ಚಿರುಕಂಡ ಅವರನ್ನೆಲ್ಲ ಕೇಳಿದ:

"ನೀವು ಯಾವತ್ತಾದರೂ ಸಂಘಕ್ಕಾಗಲೀ ದೇಶಕ್ಕಾಗಲೀ ದ್ರೋಹ ಮಾಡ್ತೀರಾ?"

"ಇಲ್ಲ" ಎಂದೂ "ಖಂಡಿತ ಇಲ್ಲ" ಎಂದೂ "ಎಂದಿಗೂ ಇಲ್ಲ" ಎಂದೂ ಒಬ್ಬೊಬ್ಬರು ಒಂದೊಂದು ರೀತಿಯಾಗಿ ಅಂದರು.

"ಕೈಯಲ್ಲಿ ಬಂದೂಕು ಹಿಡಿದಾಗಲೂ ಈ ವಾಗ್ದಾನ ನೆನಪಿಡ್ತೀರಾ?"

"ಖಂಡಿತವಾಗಿಯೂ ಇಡ್ತೇವೆ."

"ಸರಿ ಹಾಗಾದರೆ. ನೇಗಿಲು ಹಿಡಿಯೋ ಕೈ ಬಂದೂಕು ಎತ್ತೋದಕ್ಕೂ ಕಲಿತ ಹಾಗಾಗ್ತದೆ. ವಾಪಸು ಬಂದಾಗ ನೀವು ನಮಗೆ ಮುಖ ತೋರಿಸ್ಬೇಕಾಗ್ತದೆ ಅನ್ನೋದು ನೆನಪಿರ್ಲಿ."

ತೀವ್ರ ಭಿನ್ನಾಭಿಪ್ರಾಯದಿಂದ ವಾತಾವರಣ ಕಲುಷಿತವಾಗುವಂಥ ಸನ್ನಿವೇಶ ಸುಲಭವಾಗಿ ಸಮಾಧಾನದಲ್ಲೇ ಪರ್ಯವಸಾನ ಹೊಂದಿತು.

ಮಾರನೆಯ ಬೆಳಗ್ಗೆ ಮತ್ತೊಂದು ಡಂಗೂರದೊಡನೆ ಆರು ಜನ ಸೈನ್ಯದಲ್ಲಿ ಭರ್ತಿಯಾಗಲೆಂದು ಅಧಿಕಾರಿಗಳ ಮುಂದೆ ನಿಂತರು. ಇಬ್ಬರು ಜಮೀನ್ದಾರರ ಚಾಕರರಲ್ಲಿ ನಾಲ್ವರು ಅವರ ಜತೆ ಸೇರಿದರು.

"ಕಯ್ಯೂರು ಪರವಾಗಿಲ್ಲ, ಮಿಸ್ಟರ್ ನಂಬಿಯಾರ್" ಎಂದರು ಅಧಿಕಾರಿ.

............................

ಕಯ್ಯೂರು ನಿಜವಾಗಿಯೂ 'ಪರವಾಗಿರಲಿಲ್ಲ.' ಅಪೂರ್ವವಾದ ರಾಜಕೀಯ ಜಾಗೃತಿಯಿಂದ ಗ್ರಾಮ ಹೊಸ ರೂಪು ತಳೆಯಿತು. ಸಂಘದವರು ರೈತ

ದಿನಾಚರಣೆಯನ್ನು ಆ ವರ್ಷ ವಿಜೃಂಭಣೆಯಿಂದ ಆಚರಿಸಿದರು. ಆ ದಿನ ಗುಡಿಸಲುಗಳು ಬರಿದಾದುವು. ಹೆಂಗಸರು ಮಕ್ಕಳು, ಮದುಕರಾದಿಯಾಗಿ ಎಲ್ಲರೂ ಮೆರವಣಿಗೆ ಸೇರಿದರು. ಎದುರಿಗೆ ಗಾಳಿಯಲ್ಲಿ ಸ್ವಚ್ಛಂದವಾಗಿ ಹಾರಾಡುತ್ತಿದ್ದ ಎತ್ತರದ ಬಾವುಟ ಹಿಡಿದು, ಹಳ್ಳಿಯ ಮೂಲೆ ಮೂಲೆಯಲ್ಲೂ ಅವರು ಸುತ್ತಾಡಿದರು. ಬಹಿರಂಗ ಸಭೆಯಲ್ಲಿ, ಹೊರಗಿನಿಂದ ಬಂದ ನಾಯಕರೊಬ್ಬರು ಭಾಷಣವಿತ್ತರು.

ಹುಡುಗರಿಲ್ಲದ ಬರಿಯ ಶಾಲೆಯ ಹಿತ್ತಿಲಲ್ಲಿ, ಎತ್ತರವಾಗಿ ಬೆಳೆದ ಮಾವಿನ ಗಿಡಗಳ ಬಳಿ ನಿಂತು, ಆ ಹಾದಿಯಾಗಿ ಬರುತ್ತಿದ್ದ ಮೆರವಣಿಗೆಯನ್ನು ಉಪಾಧ್ಯಾಯರು ನೋಡಿದರು. ಬಾವುಟ ಹಿಡಿದು ಹಾಡುತ್ತಿದ್ದವನನ್ನು ತಾನೆಲ್ಲಿಯೋ ಕಂಡಿದ್ದಂತೆ ಉಪಾಧ್ಯಾಯರಿಗನ್ನಿಸಿತು. ಆತನೆ ! "ನಿಮ್ಮ ಮಕ್ಕಳು ಮೊಮ್ಮಕ್ಕಳು ಯಾವಾಗ ಬರ್‍ತಾರೆ?"ಎಂದು ಕೇಳಿದ್ದ ಖದೀಮ ! "ಆಹಾ !" ಎಂದು ಉಪಾಧ್ಯಾಯರು ಉದ್ಗಾರವೆತ್ತಿದರು. ಮುಖ ಕಪ್ಪಿಟ್ಟು ಕಂಕುಳ ಕೆಳಗೆ ಬೆವರೊಡೆದರೂ, ಹಾಡುತ್ತಿದ್ದ ಕಣ್ಣನನ್ನು ಅವರು ಕುತೂಹಲದಿಂದ ನೋಡಿದರು.

ಘೋಷಗಳು ಬಾರಿಬಾರಿಗೂ ಬೆಟ್ಟ ತಪ್ಪಲುಗಳಲ್ಲಿ ಪ್ರತಿಧ್ವನಿಸಿದುವು:

"ಭೂಮಿ ಯಾರದು?"—

"ರೈತರದು."

"ಉಳುವವನೇ—"

"ಹೊಲದೊಡೆಯ !"

"ಹಳೆಯ ಸಾಲ—"

"ಮನ್ನಾ ಮಾಡಿ!"

"ಜಮೀನ್ದಾರಿ ಪದ್ಧತಿ—"

"ಅಳಿಸಿ ಹೋಗಲಿ !"

"ಸಾಮ್ರಾಜ್ಯಶಾಹಿ—"

"ನಾಶವಾಗಲಿ !"

ಜಮೀನ್ದಾರರಿಬ್ಬರೂ ತಮ್ಮ ಮನೆಯಿಂದ ಹೊರಬರಲಿಲ್ಲ. ಆದರೂ ಘೋಷಣೆಗಳು ಅವರಿಗೆ ಸ್ಪಷ್ಟವಾಗಿ ಕೇಳಿಸಿದುವು

.................................

ಆ ಸಂದರ್ಭದಲ್ಲಿ ಕಯ್ಯೂರಿಗೊಬ್ಬ ಯುವಕ ಬಂದ. "ಯಾವಾಗ ಬಂದೆಯೋ ಅಬೂಬಕರ್?" ಎಂದು ಗುರುತುಹಿಡಿದು ಎಲ್ಲರೂ ಅವನನ್ನು ಕೇಳುವವರೇ.

ಆತ ಮೀನು ಹಿಡಿದು ಮಾರುತ್ತಿದ್ದ ಬಡ ಮುಸಲ್ಮಾನ ಹೆಂಗಸು ಬೂಬಮ್ಮನ ಹಿರಿಯ ಮಗ. ಆತನ ತಂದೆ ಸಾಮಾನು ತುಂಬಿದ ಕಡಲ ದೋಣಿಗಳಲ್ಲಿ—ಮಚ್ಚೆಗಳಲ್ಲಿ—ಸಂಚಾರ ಮಾಡುತ್ತಿದ್ದ ನಾವಿಕ. ಅವನು ಕಯ್ಯೂರಿಗೆ ಬರುತ್ತಿದ್ದುದು ಎಂದಾದರೊಮ್ಮೆ. ವ್ಯಾಪಾರದ ಸಾಮಾನು ಹೊತ್ತು ಕಲ್ಲಿಕೋಟೆಯಿಂದ ಮಚ್ಚೆ ಉತ್ತರಕ್ಕೆ ಹೊರಟದ್ದಾಗ ಆತ ಒಮ್ಮೆ ಬಂದು ಹೆಂಡತಿಯನ್ನೂ ಹತ್ತು ವರ್ಷದ ಮಗ ಅಬೂಬಕರನನ್ನೂ ಇನ್ನೂ ಕೈಗೂಸಾಗಿದ್ದ ಎರಡನೆಯ ಗಂಡುಮಗುವನ್ನೂ ನೋಡಿ ಹೋಗಿದ್ದ. ಹಾಗೆ ಹೋದವನು ಮರಳಿ ಬರಲೇ ಇಲ್ಲ. ಮೀನು ಹಿಡಿಯುವ ಕಸುಬನ್ನೇ ಬದುಕಿಗೆ ಆಧಾರವಾಗಿಟ್ಟು ಬೂಬಮ್ಮ ಕಾದು ಕುಳಿತಳು. ಗಂಡ ಸಮುದ್ರದ ಪಾಲಾದನೆಂಬ ಮಾತನ್ನು ಆಕೆ ಎಂದೂ ಒಪ್ಪಲಿಲ್ಲ..... ಅಬೂಬಕರ್ ಸ್ವಲ್ಪ ದೊಡ್ಡವನಾದೊಡನೆ ದುಡಿದು ಸಂಪಾದಿಸುವುದಕ್ಕೋಸ್ಕರ ತಲಚೇರಿಗೆ ಹೋದ. ಅಲ್ಲಿ ಬೀಡಿ ಕಟ್ಟುವುದನ್ನು ಕಲಿತ. ತಾಯಿಗೆ ಒಂದಿಷ್ಟು ಹಣ ಕಳುಹಿಸಿದ. ಮೊದಮೊದಲು ವರ್ಷಕ್ಕೊಮ್ಮೆ ಕಯ್ಯೂರಿಗೆ ಬರುತ್ತಿದ್ದನಾದರೂ ಈ ನಡುವೆ ಬರದೆ ನಾಲ್ಕು ವರ್ಷಗಳಾಗಿದ್ದುವು.

ಈಗ ಮಗ ಬಂದನೆಂದು ತಾಯಿಗಾದ ಸಂತೋಷ ಅಷ್ಟಿಷ್ಟಲ್ಲ. ಕಂಡವರಿಗೆಲ್ಲ "ನನ್ನ ಮಗ ಬಂದಿದ್ದಾನೆ" ಎಂದು ಆಕೆ ಹೇಳುತ್ತ ಬಂದಳು. ಹಳ್ಳಿಯವರು ಅಬೂಬಕರನನ್ನು ಹಿಂದೆ ಸರಿಯಾಗಿ ನೋಡಿದ್ದುದು ಚಿಕ್ಕ ಹುಡುಗನಾಗಿದ್ದಾಗ. ಆದರೆ ಈಗ ಆತ ಇಪ್ಪತ್ತರ ಯುವಕ. ಕಟ್ಟುಮಸ್ತಾತದ ಆಳು. ಪದ್ಧತಿಯಂತೆ ತಲೆ ಬೋಳಿಸದೆ, ಸಣ್ಣನೆ ಕ್ರಾಪು ಬೇರೆ ಬಿಟ್ಟಿದ್ದ. ಚಡ್ಡಿ; ಅದರೊಳಗೆ ತುರುಕಿದ ಶರಟು. ಅಂತೂ, ನೋಡಿದವರು ಮತ್ತೊಮ್ಮೆ ನೋಡುವಹಾಗಿದ್ದ ಆಸಾಮಿ.

ಆತನನ್ನು, "ಯಾವಾಗ ಬಂದೆ?" ಎಂದು ಪ್ರಶ್ನಿಸಿದವರು, "ಎಷ್ಟು ದಿವಸ ಇರ್ತೀಯಾ?"ಇಲ್ಲವೆ"ಯಾವಾಗ ಹೊರಡೋದು?" ಎಂದು ಕೇಳಿದರು. ಅವರಿಗೆಲ್ಲ ಅಬೂಬಕರ್, "ಇದೇ ಈಗ ಬಂದಿದ್ದೇನೆ. ಇಷ್ಟರಲ್ಲೇ ಹೊರಡ್ಬೇಕೆ?" ಎಂದೋ "ಊರು ನೋಡಿದರೆ ಇಲ್ಲೇ ಇದ್ಬಿಡೋಣ ಅನಿಸ್ತದೆ!" ಎಂತಲೋ "ಹೊರಟ್ಹೋಗು ಅಂದರೆ ಹೋಗ್ತೇನೆ !" ಎನ್ನುತ್ತಲೋ ನಗುತ್ತ ಉತ್ತರವಿತ್ತ.

ಬಂದ ರಾತ್ರಿಯೇ ಅಬೂಬಕರ್ ಚಿರುಕಂಡನ ಮನೆಗೆ ಹೋದ. "ಬನ್ನಿ" ಎಂಬ ಸಹಜ ಸ್ವಾಗತ ಬೇಗನೆ ಆತ್ಮೀಯ ಹಸ್ತಲಾಘವವಾಗಿ ಮಾರ್ಪಟ್ಟಿತು. ಅದಕ್ಕೆ ಕಾರಣ ಅಬೂಬಕರ್ ತಂದಿದ್ದ ಪರಿಚಯ ಪತ್ರ. ಮಾಸ್ತರು ಅದನ್ನು ಬರೆದಿದ್ದು! ಚಿರುಕಂಡ ಮುಖ ಅರಳಿಸಿಕೊಂಡು ಮತ್ತೆಮತ್ತೆ ಅದನ್ನೇ ಓದಿದ.

"ಊಟಕ್ಕೇ ಇಲ್ಲೇ ಏಳಿ" ಎಂದು ಒತ್ತಾಯಿಸಿದ ಚಿರುಕಂಡ.

"ಇಲ್ಲವಪ್ಪ ಭಾರೀ ಅಡುಗೆ ಮಾಡಿಟ್ಟು ಅಮ್ಮ ಕಾದಿದ್ದಾಳೆ. ನಿಮಗೆ ನಾಳೆ ಸಿಗ್ತೇನೆ" ಎಂದು ಹೇಳಿ ಅಬೂಬಕರ್ ಎದ್ದೇಬಿಟ್ಟ.

ಆತನ ಜತೆಯಲ್ಲಿ ಚಿರುಕಂಡ ಹೊರಗೆ ಹತ್ತು ಹೆಜ್ಜೆ ಹೋದ. ಮಾಸ್ತರ ವಿಷಯ ಕೇಳಬೇಕೆಂದು ಆತನ ಮನಸ್ಸು ತವಕಿಸಿತು. ಅಷ್ಟರಲ್ಲಿ ಅಬೂಬಕರನೇ ಅಂದ:

"ಸದ್ಯಃ ತಲಚೇರಿಲಿದ್ದೇನೆ; ಇನ್ನೂ ಮಾಸ್ತರಿಕೆ ಕೆಲಸ ಹುಡುಕ್ತಾನೇ ಇದ್ದೇನೆ— ಅಂತ ಮಾಸ್ತರು ನಿಮಗೆ ತಿಳಿಸ್ಬೇಕು ಅಂದಿದ್ದಾರೆ."

"ಅವರು ಆರೋಗ್ಯವಾಗಿದ್ದಾರಾ?"

ಮಾಸ್ತರ ವಿಷಯದಲ್ಲಿ ಅತ್ಯಂತ ಆತ್ಮೀಯತೆಯನ್ನು ಸೂಚಿಸಿದ ಆ ಧ್ವನಿ ಕೇಳಿ ಅಬೂಬಕರ್ ಚಕಿತನಾದ.

"ಹೂಂ. ಆರೋಗ್ಯವಾಗಿದ್ದಾರೆ. ನಾನು ಇಲ್ಲಿ ಹುಡುಗನಾಗಿದ್ದಾಗ ಅವರ ಪರಿಚಯ ಇರ್ಲಿಲ್ಲ. ನನಗೆ ಅವರು ಮಾಸ್ತರಾದದ್ದು ತಲಚೇರಿಯಲ್ಲೇ!"

ಆದರೆ ಬೇರೇನನ್ನೋ ಯೋಚಿಸುತ್ತಿದ್ದ ಚಿರುಕಂಡ ಹೇಳಿದ:

"ಒಳ್ಳೇದಾಯ್ತು ಸಂಗಾತಿ! ನಾಳೆ ಬೆಳಿಗ್ಗೆ ಸಂಘದ ಕಚೇರಿಗೆ ಬನ್ನಿ. ಎಲ್ಲರ ಪರಿಚಯ ಮಾಡಿಕೊಡ್ತೇನೆ. ಜತೇಲಿ ಕೆಲಸ ಮಾಡೋಣ. ನಾವು ಮಾಡಬೇಕಾದ್ದು ಬೆಟ್ಟದಷ್ಟಿದೆ. ಕಾಗದದಲ್ಲಿ ಮಾಸ್ತರು ಸೂಚಿಸಿರೋದಂತೂ ಬಹಳ ವಿಶಿಷ್ಟವಾದದ್ದು. ವಿವರವಾಗಿ ನಾಳೆ ಮಾತಾಡೋಣ."

.........................

ಆ ನಾಳೆ, ಸಂಘ ಹೊಸ ಹೆಜ್ಜೆಗಳನ್ನಿಟ್ಟ ದಿನವಾಯಿತು. ತಲಚೇರಿಯಲ್ಲಿ ಬೀಡಿ ಕೆಲಸಗಾರನಾಗಿದ್ದ ಅಬೂಬಕರ್ ಕಯ್ಯೂರಲ್ಲೇ ನೆಲೆಸಲು ಬಂದಿದ್ದ. ಆತ ಶಹರದಲ್ಲಿ ಕಾರ್ಮಿಕರ ಒಂದು ಸ್ವಯಂಸೇವಕ ದಳಕ್ಕೆ ಉಪನಾಯಕನಾಗಿದ್ದ ಅನುಭವಿ. ಕಯ್ಯೂರಿನ ಎಲ್ಲರ ದೃಷ್ಟಿಯಲ್ಲೂ ಅದು ಅವನಿಗೆ ದೊರತಿದ್ದ ವಿಶಿಷ್ಟ ಶಿಕ್ಷಣ. ಆ ಶಿಕ್ಷಣದ ಪ್ರಯೋಜನವನ್ನು ಸಂಘ ಪಡೆಯಿತು.

ಕ್ರಮಬದ್ಧವಾದ ರೀತಿಯಲ್ಲಿ ಕಾರ್ಯೋನ್ಮುಖನಾಗಿ ಅಬೂಬಕರ್, ಕಯ್ಯೂರಿನ ರೈತ ಯುವಕರ ಸ್ವಯಂಸೇವಕ ದಳವನ್ನು ರಚಿಸಿದ.

....ಸಂಘದ ಮುಂದೆ ಬೇರೆ ಹಲವು ಸಮಸ್ಯೆಗಳಿದ್ದುವು. ಕಯ್ಯೂರಿಗೆ ಗ್ರಾಮಪಂಚಾಯತಿ ಬೇಕೆಂದು ಅವರು ಜಿಲ್ಲಾಧಿಕಾರಿಗೆ ಅರ್ಜಿ ಬರೆದರು: ಉತ್ತರ ಬರಲಿಲ್ಲ. ಹೊಲವಿಲ್ಲದ ರೈತರಿಗಾಗಿ ಹಳ್ಳಿಯ ಒಂದು ಮೂಲೆಯಲ್ಲಿದ್ದ ಬಂಜರು ಭೂಮಿಯನ್ನು ಕೃಷಿ ಮಾಡಲು ಅವಕಾಶ ಕೊಡಬೇಕೆಂದು ಸರಕಾರವನ್ನು ಕೇಳಿದರು.

ಅದಕ್ಕೂ ಉತ್ತರ ಬರಲಿಲ್ಲ.

ಶಾಲೆಗೆ ಯುವಕರಾದ ಹೊಸ ಉಪಾಧ್ಯಾಯರೊಬ್ಬರು ಬಂದರು. ಸ್ವಲ್ಪ ಮಟ್ಟಿಗೆ ರೈತ ಚಳವಳಿಗೆ ಅನುಕೂಲರೇ. ಹಾಗಾಗಿ, ಗ್ರಾಮ ಪಂಚಾಯತಿ ಈಗಿಂದೀಗ ಆಗಬೇಕೆಂದೇನೂ ರೈತರು ಹಟ ತೊಡಲಿಲ್ಲ. ಆದರೆ ಬಂಜರು ಭೂಮಿ ಇನ್ನು ಹಾಗೇ ಇದೆಯೆಂದು ಅವರಿಗೆ ಬೇಸರವಾಯಿತು. "ಸಾಗುವಳಿ ಮಾಡೋಣ. ಕಂದಾಯ ಆಮೇಲೆ ಗೊತ್ತುಪಡಿಸಲಿ" ಎಂದು ನಿರ್ಧರಿಸಿ, ಸಂಘದ ನೇತೃತ್ವದಲ್ಲಿ ರೈತರು ಪೊದೆಪೊದರು ಕಡಿದು ನೆಲ ಹದಗೊಳಿಸಿದರು.

.... ಆ ವರ್ಷ ಓಣಂ ಹಬ್ಬದ ಹೊತ್ತಿಗೆ ಚಿರುಕಂಡನ ಮದುವೆಯೂ ಆಯಿತು ಅಪ್ಪು ವಿವಾಹವಾದ ಮೇಲೆ ಚಿರುಕಂಡನ ತಾಯಿ ಒಂದೇ ಸಮನೆ ಮಗನನ್ನು ಪೀಡಿಸುತ್ತಲೇ ಇದ್ದಳು. ತಾಯಿ ತಂದೆಯರ ಒಬ್ಬನೇ ಮಗ. ಅವರು ಸುಮ್ಮನಿರುವುದುಂಟೆ? ಆತನಿಗಾಗಿ ಹುಡುಕಿದುದೂ ಹೊರಗಿನ ಹೆಣ್ಣಲ್ಲ. ತ್ರಿಕರಪುರದ ಚಂದುವಿನ ತಂಗಿ. ಹಿರಿಯರ ಸಂತೃಪ್ತಿಗಾಗಿ ಇದೊಂದು ತಾನು ಮಾಡುತ್ತಿರುವ ತ್ಯಾಗವೆಂದು ಭಾವಿಸಿಯೇ ಚಿರುಕಂಡ ಹುಡುಗಿಯನ್ನು ನೋಡಲು ಹೋದ. ತನ್ನ ಕೈಬರಹದಲ್ಲಿದ್ದ ಎಲ್ಲ ಕರಪತ್ರಗಳನ್ನೂ ಲೇಖನಗಳನ್ನೂ ಆಕೆ ಓದಿರುವಳೆಂದು ತಿಳಿದಮೇಲೆ, ಮರುಮಾತನ್ನಾಡದೆ ಬಂದ. ತ್ಯಾಗದ ಯೋಚನೆ ಆ ಬಳಿಕ ಸುಳಿಯಲಿಲ್ಲ. ಬದಲು, ಬಾಲಸಂಘದ ಹಾಗೆಯೇ ಸ್ತ್ರೀಯರ ಶಾಖೆಯನ್ನೂ ಬೇಗನೆ ರೂಪಿಸಬೇಕೆಂಬ ವಿಚಾರ ಮೂಡಿತು!

ಸಂಘದ ಪ್ರಮುಖರ ವೃತ್ತದೊಳಗಿನ ಗೊಂದಲ ಸಾಲದೆಂದು, ಅಪ್ಪು ತಂದೆಯಾದ. ಜಾನಕಿ ಮುದ್ದುಮುದ್ದಾದ ಗಂಡುಮಗುವನ್ನು ಹೆತ್ತಳು.

..... ಇಷ್ಟಾದರೂ ಈ ವೈಯಕ್ತಿಕ ವಿಷಯಗಳಿಂದ ಸಾಂಘಿಕ ಚಟುವಟಿಕೆಗಳಿಗೆ ಹಾನಿಯೇನೂ ಒದಗಲಿಲ್ಲ.

ರಾಷ್ಟ್ರೀಯ ಹೋರಾಟ ಮತ್ತೆ ಮೊದಲಾಯಿತು. ಯುದ್ಧ ವಿರೋಧಿಗಳೆಂದು ಅಲ್ಲೊಬ್ಬರು ಇಲ್ಲೊಬ್ಬರು ಸೆರೆಮನೆ ಸೇರಿದರು. ಕ್ರಾಂತಿಕಾರರಿಗಾಗಿ ಬೇಟೆ ನಡೆಯಿತು. ಕರಾಳ ಶಾಸನಗಳು ರೂಪುಗೊಂಡುವು.

ಕಯ್ಯೂರಿನ ರೈತರು ಯಾವ ಅಳುಕೂ ಇಲ್ಲದೆ ಮುನ್ನಡೆದರು....

ದಿನವೂ ದುಡಿತದ ಬಳಿಕ ಸಂಜೆ ಕವಾಯಿತು. ಅವರವರ ವೆಚ್ಚದಿಂದಲೇ ಸಮವಸ್ತ್ರ. ಲೆಫ್ಟ್-ರೈಟ್, ಲೆಫ್ಟ್-ರೈಟ್, ಲೆಫ್ಟ್—

ನಾಯಕ ಅಬೂಬಕರ್ ಅವರಿಗೆಲ್ಲ ಹೇಳುತ್ತಿದ್ದ:

"ಸಂಗಾತಿಗಳೇ! ಇದನ್ನು ಮರೀಬೇಡಿ. ನಾವು ಹಿಂಸೆಗೆ ವಿರೋಧಿಗಳು. ಎಲ್ಲಾ

ವಿಧದ ಹಿಂಸೆಗೆ ವಿರೋಧಿಗಳು. ಈ ಶಿಕ್ಷಣ ದುರ್ಬಲರ ಮೇಲೆ ಕೈ ಮಾಡೋದಕ್ಕಲ್ಲ. ಇದು ಆತ್ಮರಕ್ಷಣೆಗೆ—ನ್ಯಾಯ ಸಾಧನೆಗೆ!"

..... ಜಮೀನ್ದಾರ ನಂಬಿಯಾರರು ಸರಕಾರಕ್ಕೆ ದೂರಿನ ಮೇಲೆ ದೂರು ಬರೆದೇ ಬರೆದರು:

"ಇಲ್ಲಿ ಕ್ರಾಂತಿಕಾರಿಗಳು ಜಮೆಯಾಗಿದ್ದಾರೆ. ಸರಕಾರದ ಭೂಮಿ ವಶಪಡಿಸಿಕೊಂಡಿದ್ದಾರೆ. ಸೈನ್ಯ ಕಟ್ಟಿದ್ದಾರೆ. ಪ್ರತಿಸರಕಾರ ಸ್ಥಾಪಿಸಿದ್ದಾರೆ. ಗೃಹಸ್ಥರು, ಹೆಂಗಸರು-ಮಕ್ಕಳು, ಇಲ್ಲಿ ಬದುಕೋದೇ ಕಷ್ಟವಾಗಿದೆ. ಇದರಿಂದ ಬ್ರಿಟಿಷ್ ಸಾಮ್ರಾಜ್ಯಕ್ಕೆ ಗಂಡಾಂತರ ಖಂಡಿತ. ಇಷ್ಟು ಬರೆದು ನನ್ನ ಕರ್ತವ್ಯ ನಾನು ಮಾಡುತ್ತಿದ್ದೇನೆ. ನೆನಪಿಡಿ!"

೧೫

ನಂಬಿಯಾರರೀಗ ಹಲ್ಲು ಮುರಿದ ಸಿಂಹ. ಮನೆಯೇ ಅವರಿಗೆ ಪಂಜರ. ನಂಬೂದಿರಿ, ಹುಡುಗರ ವಿದ್ಯಾಭ್ಯಾಸಕ್ಕೆ ಅನುಕೂಲವಾಗುತ್ತದೆಂದು, ನೀಲೇಶ್ವರದಲ್ಲೇ ಮನೆ ಮಾಡಲು ನಿರ್ಧರಿಸಿದರು. ನಂಬಿಯಾರರು ಅದನ್ನು ಕೇಳಿ, "ಹುಡುಗರ ವಿದ್ಯಾಭ್ಯಾಸ ಬರೇ ನೆಪ. ಹೆದರ್ಕೊಂಡು ಓಡಿಹೋಗ್ತಿದ್ದಾನೆ ಥೂ !" ಎಂದರು. ಆದರೆ, "ನಾವೂ ಯಾಕೆ ನೀಲೇಶ್ವರಕ್ಕೆ ಹೋಗಬಾರದು?" ಎಂದು ತಮ್ಮ ಎರಡನೆಯ ಹೆಂಡತಿ ಹೇಳಿದಾಗ, 'ಯಾಕಾಗಬಾರದು?' ಎಂದು ನಂಬಿಯಾರರೂ ಯೋಚಿಸಿದರು. ಮರುಕ್ಷಣವೇ ಆ ಯೋಚನೆಯನ್ನು ಬಿಟ್ಟು, "ನಾನು ಹೇಡಿಯಲ್ಲ! ಒಂದೋ ಈ ಮೃಗಗಳನ್ನು ಹಾದಿಗೆ ತರ್ರೇನೆ, ಇಲ್ಲವೆ ಇಲ್ಲೇ ಸಾಯ್ತೇನೆ!" ಎಂದು ಗುಡುಗಿದರು.

ಅವರು ಬೇಟೆಯಾಡದೆಯೂ ಬಹಳ ದಿನಗಳಾಗಿದ್ದುವು. ನೂರಾರು ಜನ ರೈತರ ನೆರವಿನಿಂದ ತಾವು ಹುಲಿ ಶಿಕಾರಿ ಮಾಡುತ್ತಿದ್ದ ಗತವೈಭವದ ನೆನಪಾಗಿ ನಂಬಿಯಾರರಿಗೆ ಬಲು ಸಂಕಟವಾಯಿತು. ತಮ್ಮ ಜೋಡುನಳಿಗೆಯ ಬಂದೂಕವನ್ನೆತ್ತಿ, ಪ್ರೀತಿಯಿಂದ ಮುಟ್ಟಿ, ಅದನ್ನು ಸಜ್ಜುಗೊಳಿಸುವುದರಲ್ಲೇ ಬಹಳ ಹೊತ್ತು ಕಳೆದರು. ಹೆಣ್ಣಿನ ಶಿಕಾರಿಯೂ ಈಗಿರಲಿಲ್ಲ. ಮನೆ ಹೆಂಗಸರಲ್ಲದೆ ತಾವಿಟ್ಟುಕೊಂಡಿದ್ದ ಇಬ್ಬರಲ್ಲೇ ಅವರೀಗ ತೃಪ್ತಿ ಹೊಂದಬೇಕಾಗಿತ್ತು. ಆ ಕೃಷ್ಣನ್ ನಾಯರ್... ಪೈರು ಕಸಿದುಕೊಂಡಮೇಲೆ ಆತ ಮತ್ತೊಮ್ಮೆ ಸಾಲ ಕೇಳಲು ಬರಲಾರನೆಂದು ಕನಸಿನಲ್ಲಾದರೂ ಎಣಿಸುವುದು ಸಾಧ್ಯವಿತ್ತೆ? ಆ ಚಿರುಕಂಡ... ಎಂಟು ವರ್ಷಗಳ ಹಿಂದೆ ಅವನಪ್ಪನಿಂದ ಅವರು ಹೊಲ ವಶಪಡಿಸಿಕಂಡಿದ್ದರು.

ಚೆನ್ನಾಗಿ ಬೆಳೆ ಬರುವ ಜಾಗ. ಕ್ರಮೇಣ ಆತನನ್ನು ಹೊರಹಾಕಿ, ಹೆಚ್ಚು ಗೇಣಿಗೆ ಬೇರೆ ಯಾರಿಗಾದರೂ ಕೊಡಬಹುದೆಂದು ಆಗ ಅವರು ಯೋಚಿಸಿದ್ದರು. ಆದರೆ ಮುಂದೆ ಹಾಗೆ ಮಾಡುವುದು ದುಸ್ಸಾಧ್ಯವಾಗಿತ್ತು. ಅದೇ ರೀತಿ, ಕಾರ್ಯಗತವಾಗದೇ ಹೋದ ಯೋಜನೆಗಳು ಇನ್ನೆಷ್ಟೋ. ಸಾಲ ವಸೂಲಿಯಂತೂ ನಿಂತೇಹೋಗಿತ್ತು. ಬಡ್ಡಿಯ ರೂಪದಲ್ಲಿ ಸಾಕಷ್ಟು ಹಣ ಬಂದಿತ್ತು ನಿಜ. ಆದರೆ ಅಸಲಿಗೇ ಒದಗಿತ್ತು ಮೋಸ.

"ಹೂಂ!" ಎಂದು ತಮ್ಮಷ್ಟಕ್ಕೆ ಹೂಂಕರಿಸಿದರು ನಂಬಿಯಾರರು. ಬಂದೂಕವನ್ನೆತ್ತಿ ಸುಮ್ಮನೆ ಅತ್ತಿತ್ತ ಗುರಿ ಇಟ್ಟರು. ಸೈನ್ಯ ಭರ್ತಿಗೆ ಅಧಿಕಾರಿಗಳು ಬಂದಿದ್ದಾಗ, ನಿಷ್ಪ್ರಯೋಜಕರಾದ ಇಬ್ಬರನ್ನೇ ಅವರು ಕೊಟ್ಟಿದ್ದರು. ಆದರೂ ಜನಬಲ ಆ ಸಂಖ್ಯೆಯ ಮಟ್ಟಿಗೆ ಕಡಮೆಯಾಗಿತ್ತು. ಹಿಂದೆ ತಮ್ಮ ಬಳಿ ಇದ್ದ ಬೇಟೆಯ ನಾಯಿ ಸತ್ತುಹೋದಮೇಲೆ ಮುಂದೆ ನಿಧಾನವಾಗಿ ಒಂದು ಜೋಡಿ ಜಾತಿ ನಾಯಿಗಳನ್ನೇ ತರಬೇಕೆಂದು ಅವರು ಇಚ್ಛಿಸಿದ್ದರು. ಆದರೆ ಇಂತಹ ಪರಿಸ್ಥಿತಿಯಲ್ಲಿ ಆ ವಿಷಯ ಅವರಿಗೆ ಇಷ್ಟವಾಗಲಿಲ್ಲ.... ಬಂದೂಕನ್ನು ಮತ್ತೆ ಮತ್ತೆ ನೋಡುತ್ತ, ಬೇಟೆಗಾದರೂ ಹೋಗೋಣವೇ ಎನ್ನಿಸಿತು. ಅದಕ್ಕೆ ಆಳುಗಳನ್ನು ಕರೆದು ನಿರ್ದೇಶ ಕೊಡಬೇಕೆನ್ನುವಷ್ಟರಲ್ಲಿ ಬೇಸರ ಆವರಿಸಿ, ಬೇಟೆಯ ಯೋಚನೆಯನ್ನು ಅವರು ಬಿಟ್ಟುಕೊಟ್ಟರು.

ಬಂದೂಕವನ್ನೆತ್ತಿ ಒಳಗಿರಿಸುತ್ತ ಅವರು ಮನಸ್ಸಿನಲ್ಲೇ ಅಂದರು:

"ಬೇಟೆಗಲ್ಲದೆ ಹೋದರೆ ಇನ್ನಾವುದಕ್ಕಾದರೂ ಬಂದೂಕಿನ ಉಪಯೋಗ ಇದ್ದೇ ಇರ್ತದೆ!"

..........................

ರೈತ ಸಂಘದ ಸ್ವಯಂಸೇವಕರು ಮಾತ್ರ ಹಿಡಿಯಲು ಬೀಸಲು ಕಲಿತ ಅಸ್ತ್ರವೊಂದೇ—ಲಾಠಿ. ವ್ಯಕ್ತಿಯ ಹಿತಕ್ಕಿಂತಲೂ ಸಮುದಾಯದ ಹಿತ ದೊಡ್ಡದು. ತನಗಿಂತಲೂ ಹಿರಿದು ತನ್ನ ರಾಷ್ಟ್ರ. ಅವಮಾನಕರವಾದ ದಾಸ್ಯಜೀವನಕ್ಕಿಂತಲೂ ಸ್ವಾತಂತ್ರ್ಯ ಹೋರಾಟದಲ್ಲಿ ದೊರೆಯುವ ಸಾವು ಸ್ವರ್ಗಸಮಾನ ಎನ್ನುವ ಉದಾತ್ತ ಭಾವನೆಗಳು ದಿನವೂ ಆ ಜನ ಬೆಳೆಯುವ ಹಾಗೆ ಮಾಡಿದುವು.

ಈಗ ಆ ರೈತರು ನಡುಬಾಗಿದ ಬಡಗೌಡರಲ್ಲ—ತಮ್ಮ ತೋಳ ಬಲದಲ್ಲಿ ಅಚಲ ನಂಬುಗೆಯಿದ್ದ ರೈತಭಟರು. ಸಂದೇಹ ಸಂಶಯಗಳು ಯಾರನ್ನೂ ಕಾಡಲೇ ಇಲ್ಲವೆಂದಲ್ಲ; ದೌರ್ಬಲ್ಯದ ನಿಮಿಷಗಳಲ್ಲಿ ಯಾರಿಗೂ ಕಣ್ಣು ಮಸುಕಾಗಲೇ ಇಲ್ಲವೆಂದಲ್ಲ. ಆದರೂ ಅಂಥವರ ಸಂಖ್ಯೆ ಕಡಮೆಯಾಗಿತ್ತು.

ಸಾಮ್ರಾಜ್ಯದ ಉಳಿವಿಗಾಗಿಯೇ ಹೋರಾಡುತ್ತಿದ್ದ ಪರಕೀಯ ಸರಕಾರ ನಿದ್ರಿಸುತ್ತಿರಲಿಲ್ಲ. ಅದರ ಗೂಢಚಾರರು ಊರೂರು ತಿರುಗಿದರು. ಕಯ್ಯೂರಿಗೂ ಬಂದರು. ಅವರು ಟಿಪ್ಪಣಿ ಮಾಡಿದರು; ಎಲ್ಲಿ ಹೇಗೆ ಹೊಡೆಯಬೇಕೆಂದು ಲೆಕ್ಕ ಹಾಕಿದರು. ಆದರೆ ಸ್ವಯಂಸೇವಕರು ಸರಕಾರದ ಚಾಕರರಿಗಿಂತಲೂ ಹೆಚ್ಚು ಸೂಕ್ಷ್ಮಮತಿಗಳಾಗಿದ್ದರು. ಯಾವ ಗೂಢಚಾರನೂ ಅವರ ಕಣ್ಣು ತಪ್ಪಿಸಿ ಕಯ್ಯೂರಿಗೆ ಬರುವುದು ಸಾಧ್ಯವಿರಲಿಲ್ಲ. ಸಮವಸ್ತ್ರ ಧರಿಸಿದ್ದ ಪೋಲೀಸನಂತೂ ಸರಿಯೆ. ಬಾಲಸಂಘದ ಸದಸ್ಯರ 'ಲೀಲೆ'ಗಳ ಫಲವಾಗಿ ಆತನಿಗೆ ಸಾಕೋ ಸಾಕೆನಿಸುತ್ತಿತ್ತು.

..... ಅಂಥ ವಾತಾವರಣದಲ್ಲಿ ಆ ತಾಲ್ಲೂಕಿನ ರೈತ ಸಮ್ಮೇಳನ ಕಯ್ಯೂರಿನಲ್ಲಿ ಜರಗಬೇಕೆಂದು ಗೊತ್ತಾಯಿತು. ಕಯ್ಯೂರಿನ ರೈತರ ದೃಷ್ಟಿಯಲ್ಲಿ ಅದು ಅವರಿಗೆ ದೊರೆತ ದೊಡ್ಡ ಗೌರವ. ಸಿದ್ಧತೆಗೆ ಮೊದಲಾಯಿತು. ಸರಕಾರ ಹುಡುಕುತ್ತಲಿದ್ದ ರೈತ ಮುಖಂಡರು ಗುಪ್ತವಾಗಿ ಅಲ್ಲಿಗೆ ಬಂದು ಹೋದರು. ಹಳ್ಳಿಯ ಸಮೀಪದಲ್ಲಿ ಸುರಕ್ಷಿತವಾದ ಸ್ಥಳದಲ್ಲಿ ಸಮ್ಮೇಳನಕ್ಕೆ ನಿರ್ದೇಶನ ನೀಡುವ ರಹಸ್ಯ ಠಾಣ್ಯ ವ್ಯವಸ್ಥೆಯಾಯಿತು.

ಸ್ವಾಗತ ಕಾರ್ಯದರ್ಶಿಗಳಾದ ಅಪ್ಪು ಮತ್ತು ಚಿರುಕಂಡ ತಮ್ಮ ಮೇಲಿನ ಅತಿ ದೊಡ್ಡ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿರ್ವಹಿಸುವುದಕ್ಕೋಸ್ಕರ ಅತ್ಯಂತ ಉತ್ಸಾಹದಿಂದ ದುಡಿದರು. ಉಳಿದವರೂ ಅಷ್ಟೆ. ಯಾರು ಯಾರಿಗೂ ಕಡಮೆ ಇರಲಿಲ್ಲ. ಹಲವಾರು ಹಳ್ಳಿಗಳಿಂದ ರೈತರೆಲ್ಲ ಸಮ್ಮೇಳನಕ್ಕೋಸ್ಕರ ಕಯ್ಯೂರಿಗೆ ಬರುವರೆಂಬ ಅಂಶ, ದೊಡ್ಡ ಹಬ್ಬದ—ಜಾತ್ರೆಯ—ಕಲ್ಪನೆಯನ್ನು ಅವರಲ್ಲಿ ಉಂಟುಮಾಡಿತು.

ಅದು ಬೇಸಗೆಯ ಆರಂಭ. ದಿನ ಕಳೆದಂತೆ ಸೂರ್ಯ ಹೆಚ್ಚುಹೆಚ್ಚು ಪ್ರಖರನಾಗುತ್ತಿದ್ದ. ರೈತರ ಮೈಯಲ್ಲಿ ಬಲು ಸುಲಭವಾಗಿ ಬೆವರೊಡೆಯಿತು. ಅಂಥದರಲ್ಲೂ ರೈತರು ಸಂಘದ ಕಚೇರಿಯ ಮುಂದೆ ವಿಸ್ತಾರವಾದ ಚಪ್ಪರ ಕಟ್ಟಲು ತೊಡಗಿದರು.

ಸಮ್ಮೇಳನಕ್ಕಿನ್ನೂ ಒಂದು ವಾರವಿದೆ ಎನ್ನುವಾಗ ಪ್ರತಿ ದಿನವೂ ಪ್ರಭಾತ ಫೇರಿ ಆರಂಭವಾಯಿತು. ಅದು ಮುಂಜಾವದ ಮೆರವಣಿಗೆ. ಸ್ವಯಂಸೇವಕರು ಸಂಘದ ಕಚೇರಿಯಿಂದ ಬಾವುಟ ಹಿಡಿದು ಹೊರಟು, ಹಾಡುತ್ತ ಸಮ್ಮೇಳನದ ವಿಷಯ ಘೋಷಿಸುತ್ತ, ಊರು ಸುತ್ತಿ ಹಿಂತಿರುಗುತ್ತಿದ್ದರು.

.........................

ಆ ವಾರ ಪೋಲೀಸನೊಬ್ಬ ಕಯ್ಯೂರಿಗೆ ಆಗಮಿಸಿದ. ಆತ ಬಂದುದು

ಹೊಸದುರ್ಗದಿಂದ—ಪೋಲೀಸ್ ಠಾಣೆಯಿಂದ. ಬಂದವನು ನಂಬಿಯಾರರ ಮನೆಯಲ್ಲಿ ಬೀಡುಬಿಟ್ಟ. ನೋಡಲು ಭಾರೀ ಕುಳ. ವಯಸ್ಸು ಇನ್ನೂ ಮೂವತ್ತೈದರೊಳಗೆ. ತಿರುವಿದ ಕಿರುಮೀಸೆ, ತೀಕ್ಷ್ಣ ನೋಟದ ಕಣ್ಣುಗಳು, ದಿಟ್ಟತನದ ನಡಿಗೆ—ಈತ ಸಾಮಾನ್ಯನಲ್ಲವೆಂಬುದನ್ನು ಸ್ಪಷ್ಟಪಡಿಸುತ್ತಿದ್ದುವು.

ಜಮೀನ್ದಾರರು ಆತನಿಗೆಂದರು:

"ನೀವೇನೂ ಸಂಕೋಚಪಡಬೇಡಿ ಸುಬ್ಬಯ್ಯ. ಏನು ಬೇಕಾದರೂ ಕೇಳಿ, ಏನು ಬೇಕಾದರೂ."

"ಆಗಲಿ ಸ್ವಾಮೀ" ಎಂದ ಆತ. ಸ್ವರವೂ ಆತನಷ್ಟೇ ದೃಢವಾಗಿ ಕಠೋರವಾಗಿತ್ತು.

ಸುಬ್ಬಯ್ಯ ಠೀವಿಯಿಂದ ನಡೆಯುತ್ತ, ನಂಬಿಯಾರರ ಒಬ್ಬ ಆಳಿನ ಜತೆಯಲ್ಲಿ ಹಳ್ಳಿಗೊಂದು ಪ್ರದಕ್ಷಿಣ ಹಾಕಿ ಬಂದ. ಅಲ್ಲಲ್ಲಿ ತನ್ನನ್ನು ದಿಟ್ಟಿಸಿ ನೋಡಿದ ರೈತರ ಬಳಿ ಏನನ್ನೂ ಆಡದಿದ್ದರೂ ತನ್ನ ಹಿಂದೆ ಬರುತ್ತಿದ್ದ ಆಳಿನೊಡನೆ ಧಾರಾಳವಾಗಿ ಮಾತನಾಡಿದ. ಆ ಮಾತಿನ ಧ್ವನಿಯೋ—ಕಯ್ಯೂರಿನ ಭವಿಷ್ಯತ್ತೆಲ್ಲ ತನ್ನ ಮುಷ್ಟಿಯೊಳಗಿದೆ ಎಂದು ಸಾರುತ್ತಿತ್ತು.

ಭಯದಿಂದಲೂ ಗೌರವದಿಂದಲೂ ತನ್ನೊಡನೆ ವರ್ತಿಸುತ್ತಿದ್ದ ಆಳಿಗೆ ಸುಬ್ಬಯ್ಯ ಹೇಳಿದ:

"ಹಳ್ಳಿ ರೈತರೆಲ್ಲ ಕುರಿಮಂದೆ ಇದ್ದಹಾಗೆ. ಒಬ್ಬ ಹೊಂಡಕ್ಕೆ ಬಿದ್ದ ಅಂದರೆ ಎಲ್ರೂ ಹೋಗಿ ಬೀಳ್ತಾರೆ. ಒಂದಿಷ್ಟೂ ಬುದ್ಧಿ ಇಲ್ಲ."

"ಹೌದು ಫೌಜದಾರರೇ" ಎಂದು ಆಳು ಒಪ್ಪಿದ.

ತಾನು ಫೌಜದಾರನಲ್ಲವೆಂದು ನಿರಾಕರಿಸುವ ಗೋಜಿಗೆ ಹೋಗದೆ ಪೋಲಿಸ್ ಸುಬ್ಬಯ್ಯ ಮುಂದುವರಿಸಿದ:

"ಇಲ್ಲದಿದ್ದರೆ, ನಮ್ಮ ಸರಕಾರಕ್ಕೆ ಇದಿರುನಿಲ್ಲೋದು ಅಂದ್ರೇನು? ಬ್ರಿಟಿಷ್ ರಾಜರ ಶಕ್ತಿಯೆಲ್ಲಿ? ಈ ಹುಳುಗಳೆಲ್ಲಿ? ಇದೆಲ್ಲ ಸರಿಯಾಗ್ಬೇಕಾದರೆ ಇರೋ ಔಷಧಿ ಒಂದೇ. ಏನು ಗೊತ್ತೇನೋ?"

"ಇಲ್ಲ ಫೌಜದಾರರೇ."

"ಆ ಮುಖಂಡ ಸೂಳೇಮಕ್ಕಳು ನಾಲ್ಕು ಜನರನ್ನು ಹಿಡಿದು ಸಿಗಿದು ಸಮ್ಮೇಳನದ ಚಪ್ಪರದೆದುರಿಗೆ ತೋರಣ ಕಟ್ಬೇಕು!"

ಆಳು ಉಸಿರೆತ್ತಲಿಲ್ಲ. ಹೇಳಿದ ಹಾಗೆ ಮಾಡುವ ಸಮರ್ಥ ಸುಬ್ಬಯ್ಯ ಎಂದು ಆತ ನಂಬಿದ....

ಬಂದಿದ್ದ ಭಾರೀ ಪೋಲೀಸನನ್ನು ಕುರಿತು ಕಿವಿಯಿಂದ ಕಿವಿಗೆ ಸುದ್ದಿ ಹರಡಿತು. ಸಂಘದ ಕಚೇರಿಯಲ್ಲಿ ಜನ ನೆರೆದು ಆ ಬಗ್ಗೆ ಮಾತನಾಡಿದರು.

"ಮಲಬಾರಿನಲ್ಲೆಲ್ಲೂ ಆತ ಕೆಲಸ ಮಾಡಿದ ಹಾಗಿಲ್ಲ. ನಮ್ಮ ಬಾವುಟದ ರುಚಿ ಆತನಿಗೆ ತಿಳೀದೂಂತ ತೋರ್ತ್ತದೆ."

"ಪಂದ್ಯಾಟದ ಪಟುವಂತೆ. ಎಷ್ಟೋ ಸಲ ಬಹುಮಾನ ಪಡೆದಿದ್ದಾನಂತೆ."

"ಓಡೋದರಲ್ಲಿ?"

"ಸಮ್ಮೇಳನಕ್ಕೆ ಹಿಂದಿನ ದಿವಸ ಪೋಲೀಸರ ಪಡೆ ಬರ್ತ್ತದಂತೆ. ರಿಸರ್ವ್ ಪೋಲೀಸರೂ ಬರ್ತ್ತಾರಂತೆ. ಅವರೆಗೂ ಸುಬ್ಬಯ್ಯ ಇಲ್ಲಿರ್ತ್ತಾನೆ."

"ಆಹಾ! ಇರೋದು ನಿಜವಂತೇನು?"

"ಅಂತೂ ಜಮೀನ್ದಾರರ ಕೋಳಿಗೂ ಹಂಡಕ್ಕೂ ಕಾಲ !"

ವರ್ಷಗಳ ಹಿಂದೆ, ಪೋಲೀಸರ ಕೆಂಪು ಟೋಪಿ ಕಂಡೊಡನೆ ರೈತರು ಸದ್ದು ಮಾಡದೆ ಹೊಲಗಳಲ್ಲೋ ಗುಡಿಸಲುಗಳಲ್ಲೋ ಅವಿತುಕೊಳ್ಳುತ್ತಿದ್ದರು. ಆದರೆ ಈಗ, ಅವರ ಪ್ರಸ್ತಾಪ ಬಂದಾಗ ನಗೆ ಮಾತಾಡುತ್ತಿದ್ದರು.

ಕಚೇರಿಯ ಕೆಲಸದಲ್ಲಿ ಕಾಗದದ ಹಾಳೆಗಳ ನಡುವೆ ಮುಳುಗಿದ್ದರೂ ಚಿರುಕಂಡ ಜನರಾಡುತ್ತಿದ್ದ ಮಾತುಗಳಿಗೆಲ್ಲ ಕಿವಿಗೊಟ್ಟು, ಎಲ್ಲರಿಗೂ ಕೇಳಿಸುವಂತೆ ಅಂದ: "ಸದ್ಯ: ನೀವು ಯಾರೂ ಅವನ ತಂಟೆಗೆ ಹೋಗ್ಬೇಡಿ. ಕಾಲು ಕೆರೆದು ಜಗಳಾಡ್ಬೇಡಿ!"

.... ಮಾರನೆಯ ಮುಂಜಾನೆ ಪ್ರಭಾತಫೇರಿಗೆಂದು ಕಣ್ಣ ಬರುತ್ತಿದ್ದಾಗ, ಸಂಘದ ಕಚೇರಿಯಲ್ಲಿ ಕಂದೀಲು ಉರಿಯುತ್ತಿದ್ದುದನ್ನು ದೂರದಿಂದ ಕಂಡು ತಡವಾಯಿತೆಂದು ಬೇಗಬೇಗನೆ ಹೆಜ್ಜೆ ಇಟ್ಟ. ಆದರೆ ಕಚೇರಿಯಲ್ಲಿದ್ದುದು ಮೇಜಿನೆದುರು ಕುಳಿತು ಬರೆಯುತ್ತಿದ್ದ ಚಿರುಕಂಡನೊಬ್ಬನೇ

"ಯಾಕೆ ಇಷ್ಟು ಬೇಗ ಬಂದೆ?" ಎಂದ ಚಿರುಕಂಡ, ತಲೆಯೆತ್ತಿ ಕಣ್ಣನನ್ನು ನೋಡಿ. ನಿದ್ದೆಗೆಟ್ಟು ಚಿರುಕಂಡನ ಕಣ್ಣುಗಳು ಆಳಕ್ಕೆ ಇಳಿದಿದ್ದುವು, ಕಪೋಲಗಳು ಬತ್ತಿದ್ದುವು.

ಕಣ್ಣ, 'ಟಿಕ್‌ಟಾಕ್' ಎನ್ನುತ್ತಿದ್ದ ಗಡಿಯಾರ ನೋಡಿದ. ಅದೇ ಆಗ ಮೂರು ಹೊಡೆದಿತ್ತಷ್ಟೆ.

'ಐದು ಆಯ್ತೇನೋಂತ ಓಡಿಬಂದೆ. ಥೂ! ಬೆಳ್ಗೆ ಎಬ್ಬಿಸೂಂತಷ್ಟೆ ದೇವಕಿಗೆ ಹೇಳಿದ್ದೆ. ಆಗಲೆ ಎಬ್ಬಿಸಿ, ಹೊತ್ತಾಯ್ತೂಂತ ಕಳಿಸಿದ್ಳು" ಎಂದ ಕಣ್ಣ, ಪೆಚ್ಚು ಮೋರೆ ಹಾಕಿ.

"ಅಷ್ಟೇ ತಾನೆ? ಆ ಚಾಪೆ ಹಾಸಿಕೊಂಡು ಮಲಕೋ" ಎಂದು ಚಿರುಕಂಡ

ತನಗೆ ಅಂದಾಗ, ಕಣ್ಣನಿಗೆ ನಾಚಿಕೆಯಾಯ್ತು.

"ನೀನು ಮನೆಗೆ ಹೋಳ್ಗೆ ಇಲ್ವ?"

ಇಲ್ಲವೆಂದು ಚಿರುಕಂಡ ತಲೆಯಾಡಿಸಿದ.

"ನನಗೆ ಹೇಳಿದ್ದಿದ್ರೆ ನಾನೂ ಇಲ್ಲೇ ಇರ್ತಾ ಇದ್ದೆ. ಒಬ್ಬನೆ ಇರೋದು ಸರೀನಾ?"

"ಇಲ್ಲ ಕಣ್ಣ. ಅಪ್ಪು ಕುಂಇಂಬು ಎರಡು ಗಂಟೆಗಷ್ಟೇ ಹೋದ್ರು."

"ಹುಂ ನನಗಿನ್ನು ನಿದ್ದೆ ಬರೋದಿಲ್ಲ, ಏನಾದರೂ ಕೆಲಸ ಕೊಡು."

"ನೀನು ಮಾಡೋ ಕೆಲಸ ಈಗೇನೂ ಇಲ್ಲ. ಮಲಗೋದಕ್ಕೆ ಇಷ್ಟವಿಲ್ಲವಾದರೆ ಏನಾದರೂ ಪುಸ್ತಕ ತಗೊಂಡು ಓದು."

ಕಣ್ಣ ಕಪಾಟದತ್ತ ಹೋಗಿ ಒಂದು ಪುಸ್ತಕವನ್ನೆತ್ತಿ ತಂದ. 'ಸಮಾಜದ ವಿಕಾಸ.' ಇನ್ನೊಂದು ಕುರ್ಚಿಯನ್ನು ಬೆಳಕುಬೀಳುವ ಕಡೆ ಮೆಲ್ಲನೆ ಒಯ್ದು, ಅದರ ಮೇಲೆ ಕುಳಿತು, ಪುಸ್ತಕವನ್ನು ಕಣ್ಣ ಓದತೊಡಗಿದ. ಒಂದು ಪುಟ, ಎರಡು ಪುಟ.... ಹೊರಗಿನಿಂದ ಗಾಳಿ ತಣ್ಣನೆ ಬೀಸಿತು. ಕಣ್ಣೆವೆಗಳು ಒಂದನ್ನೊಂದು ಅಪ್ಪಿಕೊಂಡುವು.

ಚಿರುಕಂಡ ಇದನ್ನು ನೋಡಿ ನಸುನಕ್ಕು ಸುಮ್ಮನಾದ. ಕಣ್ಣನನ್ನು ಕರೆದು ಎಬ್ಬಿಸಲಿಲ್ಲ.

ಆದರೆ ಸ್ವಲ್ಪ ಹೊತ್ತಿನಲ್ಲಿ ಕಣ್ಣನಿಗೇ ಎಚ್ಚರವಾಗಿ, ತಾನು ನಿದ್ದೆ ಹೋದುದರ ಅರಿವಾಗಿ ತಪ್ಪಿತಸ್ಥನಂತೆ ಆತ ಚಿರುಕಂಡನತ್ತ ನೋಡಿದ. ಮೆಲ್ಲನೆದ್ದು ಹೇಳಿದ:

"ನಾನಿಷ್ಟು ಮಲಕೊಳ್ತೇನೆ ಚಿರುಕಂಡ. ಅಬೂಬಕರ್ ಬಂದ ತಕ್ಷಣ ಎಬ್ಬಿಸ್ಬಿಡು."

ಚಿರುಕಂಡ ಕಣ್ಣನನ್ನು ನೋಡಿ ನಕ್ಕು "ಹೂಂ" ಎಂದ.

ಕೈಲಿದ್ದ ಪುಸ್ತಕವನ್ನು ಕಪಾಟದಲ್ಲಿಟ್ಟು ಕಣ್ಣ ಚಾಪೆಯ ಮೇಲೆ ಮಲಗಿ ಮೈ ಚಾಚಿದ.

ಐದು ಹೊಡೆಯಲು ಸ್ವಲ್ಪ ಹೊತ್ತಿದ್ದಾಗಲೇ ಎಲ್ಲರೂ ಬರತೊಡಗಿದರು. ಆ ಸದ್ದು ಕೇಳಿಯೇ ಕಣ್ಣನಿಗೆ ಎಚ್ಚರವಾಯಿತು. ಬಾಲಸಂಘದ ಕುಟ್ಟಿ ಕೃಷ್ಣ ಕಣ್ಣನನ್ನು ನೋಡಿ, "ಏನು ಮಾವ? ರಾತ್ರಿ ಇದ್ಯಾ?" ಎಂದ.

"ಹೂನಪ್ಪ ಮೂರು ಗಂಟೆಯವರೆಗೂ ಬರೀತಾನೇ ಇದ್ದೆ. ಇದೇ ಈಗ ಮಲಕೊಂಡೆ" ಎಂದ ಕಣ್ಣ ನಗುತ್ತ ಮೈಮುರಿಯುತ್ತ.

"ನೀನು ಬರೆಯೋದು! ಗೊತ್ತು ಪಾಪ!" ಎಂದ ಕುಟ್ಟಿಕೃಷ್ಣ.

ಚಿರುಕಂಡ, ಅಬೂಬಕರ್ ಎಲ್ಲರೂ ನಕ್ಕರು.

ಆಯಾಸಪಟ್ಟಿದ್ದ ಚಿರುಕಂಡನನ್ನು ಮನೆಗೆ ಕಳುಹಿಸಿ, ಹೊಸಬರು ಕಚೇ
ಜವಾಬ್ದಾರಿ ವಹಿಸಿಕೊಂಡರು. ಸ್ವಯಂಸೇವಕರನ್ನೆಲ್ಲ ಅಬೂಬಕರ್ ಸಾಲಾ
ನಿಲ್ಲಿಸಿದ. ಅರುಣೋದಯದ ಹೊತ್ತಿಗೆ ಮೆರವಣಿಗೆ ಹೊರಟಿತು. ಬಾವುಟ ಹಿಡಿ
ಕಣ್ಣ ನವೋದಯದ ನಾಂದಿಯನ್ನು ಹಾಡಿದ. "ಇಂಕ್ವಿಲಾಬ್ ಜಿಂದಾಬಾದ್
ಘೋಷ ನೀರವತೆಯನ್ನು ಸೀಳಿಕೊಂಡು ಕಾಡಿನ ನಡುವಿನಲ್ಲೂ ಬೆಟ್ಟ
ತಪ್ಪಲಿನಲ್ಲೂ ಮಾರ್ದನಿಗೊಂಡಿತು. ಮರದ ಪೊಟರೆಗಳಲ್ಲಿದ್ದ ಹಕ್ಕಿಗಳೆ
ಗಾಬರಿಯಾಗಿ ಹೊರಕ್ಕೆ ಬಂದು ಹಾರಾಡುತ್ತ ಚಿಲಿಪಿಲಿಗುಟ್ಟಿದುವು. ಬಳಿ
'ನೀವೇನಾ? ನಮ್ಮವರೇನಾ?' ಎಂದು ನೆಮ್ಮದಿಯಿಂದ ಮರಳಿ ಗೂಡು ಸೇರಿದುವು

ಕಾಲುಹಾದಿಯಾಗಿ ಹೊಲದ ಏರಿಯ ಮೇಲಿಂದ ನಡಿಗೆ. ಅಬೂಬಕರನ ಕಂ
ಲೆಫ್ಟ್-ರೈಟ್, ಲೆಫ್ಟ್-ರೈಟ್, ಲೆಫ್ಟ್... ನಡುನಡುವೆ ಘೋಷ... ನಡುನಡು
ಹಾಡು.

ಎಂದಿನಂತೆ ನಂಬಿಯಾರರ ಮನೆಯ ಮುಂದಿನಿಂದಲೂ ಮೆರವಣಿಗೆ ಸಾಗಿತು
ಅಲ್ಲಿಯೂ ಘೋಷಗಳು ದಪ್ಪಗಿನ ಗೋಡೆಗಳನ್ನು ಹಾದು ಒಳಹೊಕ್ಕುವ
"ಇಂಕ್ವಿಲಾಬ್ ಜಿಂದಾಬಾದ್!" "ಕ್ರಾಂತಿಗೆ ಜಯವಾಗಲಿ!" "ಜಮೀನ್ದಾರಿ ಪದ್ಧ
ಅಳಿಯಲಿ!" "ಸಾಮ್ರಾಜ್ಯಶಾಹಿ ನಾಶವಾಗಲಿ!"

ಮೊಗಸಾಲೆಯಲ್ಲಿ ಮಲಗಿದ್ದ ಪೋಲೀಸ್ ಸುಬ್ಬಯ್ಯ ಗಡಬಡಿಸಿ ಎದ್ದ
ಘೋಷಗಳಿಗೆ ಕಿವಿಗೊಟ್ಟ. ಮೆರವಣಿಗೆ ಮುಂದೆ ಸಾಗಿದಂತೆ, ಏನು ಮಾಡಬೇ
ತಾನು? ಎಂದು ಅರೆಕ್ಷಣ ಚಿಂತಿಸಿದ ಮತ್ತೆ ಮಲಗಿ ಮುಸುಕೆಳೆದು ನಿದ
ಹೋಗುವುದೇ ಸರಿ, ಎಂದುಕೊಂಡ.

ಆದರೆ ಅಷ್ಟರಲ್ಲೇ ಎದ್ದು ಹೊರಬಂದಿದ್ದ ನಂಬಿಯಾರರ ಸ್ವರ ಕೇಳಿಸಿತು

"ನೋಡಿದಿರಾ ಸುಬ್ಬಯ್ಯ? ಪ್ರತಿ ದಿನ ಇದನ್ನು ನಾವು ಸಹಿಸ್ಬೇಕು!"

ಸುಬ್ಬಯ್ಯನ ನಿದ್ದೆ ಓಡಿ ಹೋಯಿತು. ತನ್ನ ಕರ್ತವ್ಯನಿಷ್ಠೆಯನ್ನು ತೋರುವುದ
ಮೇಲೆಂದು ಆತ ಅವಸರವಾಗಿ ಪೋಷಾಕು ಧರಿಸಿದ. ಕರಿಯ ಬೂಟುಗಳೊಳ
ಕೆಂಪಗಿನ ಪಾದಗಳನ್ನು ತುರುಕಿದ.

"ಎಲ್ಲಿಗೆ?" ಎಂದರು ನಂಬಿಯಾರರು.

ಸುಬ್ಬಯ್ಯನೂ ತನ್ನನ್ನೇ ಮನಸ್ಸಿನಲ್ಲಿ ಕೇಳಿಕೊಂಡ: 'ಎಲ್ಲಿಗೆ?'

"ಬರ್ತೇನೆ ಸ್ವಾಮಿ. ಇವರ ಜತೆ ಸ್ವಲ್ಪ ದೂರ ಹೋಗಿ ಬರ್ತೇನೆ."

ಅವಸರವಾಗಿ ಸುಬ್ಬಯ್ಯ ಕ್ರಾಪು ಬಾಚಿ, ಅದರ ಮೇಲೆ ತನ್ನ ಸ್ಥಾನಮಾನ
ನಿಶಾನೆಯಾದ ಕೆಂಪು ಟೋಪಿಯನ್ನಿಟ್ಟ.

"ನಮ್ಮ ಇಬ್ಬರು ಆಳುಗಳನ್ನು ಕರಕೊಂಡು ಹೋಗ್ತೀರೇನು ?" ಎಂದರು ನಂಬಿಯಾರರು. ತಮ್ಮ ಮಾತಿನಲ್ಲಿ ವ್ಯಂಗ್ಯವಿತ್ತೇ ಇಲ್ಲವೇ ಎನ್ನುವುದನ್ನು ಅವರೇ ಹೇಳಲಾರದ ಸ್ಥಿತಿಯಲ್ಲಿದ್ದರು.

"ಬೇಡ! ಯಾಕೆ? ಸುಮ್ಮನೆ ಹೋಗ್ತಾ ಇರ್ತೇನೆ. ಸರಕಾರ ಬದುಕಿದೆ ಅನ್ನೋದು ಅವರಿಗೆ ಗೊತ್ತಾಗಲಿ!"

"ಆಗಲಪ್ಪ, ಹೋಗ್ಬನ್ನಿ."

ಸುಬ್ಬಯ್ಯ ಹೊರಕ್ಕಿಳಿದು ಮೆರವಣಿಗೆಯ ಬೆನ್ನು ಹಿಡಿಯಲೆಂದು ವೇಗವಾಗಿ ನಡೆದ. ಸೊಂಟದಲ್ಲೊಂದು ಕೈಪಿಸ್ತೂಲು ಇದ್ದಿದ್ದರೆ ನೋಡಲು ಎಷ್ಟು ಚೆನ್ನಾಗಿರುತ್ತಿತ್ತು—ಎನಿಸಿತು ಸುಬ್ಬಯ್ಯನಿಗೆ. ಆದರೆ ಪಿಸ್ತೂಲು ಸಿಗಲು ಆತ ಪೋಲೀಸ್ ಅಧಿಕಾರಿಯಾಗಬೇಕು; ಅಧಿಕಾರಿಯಾಗಲು ಪ್ರಯಾಸ ಪಡಬೇಕು. ಸುಬ್ಬಯ್ಯ ಅವಸರವಾಗಿ ಮುಖದ ಮೇಲೆ ಕೈಯಾಡಿಸಿ ಮೀಸೆ ತಿರುವಿದ. ಮುಖಕ್ಕಿಷ್ಟು ನೀರು ಕೂಡ ಹನಿಸಿರಲಿಲ್ಲ; ಕನ್ನಡಿ ನೋಡುವುದೂ ಆಗಿರಲಿಲ್ಲ. "ಥೂ ನನ್ಮಕ್ಕಳು! ಇವರಮ್ಮನ—!" ಎಂದು ಶಪಿಸಿದ.

ಪೋಲೀಸರವನು ಹಿಂಬಾಲಿಸಿ ಬರುತ್ತಿದ್ದಾನೆಂದು ಮೆರವಣಿಗೆಯ ಉದ್ದಕ್ಕೂ ಸುದ್ದಿ ಹೋಯಿತು. ಎಲ್ಲರೂ ಕತ್ತು ತಿರುಗಿಸಿ ನೋಡಿದರು.

"ನೇರಕ್ಕೆ ನೋಡಿ!" ಎಂದು ಅಬೂಬಕರ್ ಅನುಜ್ಞೆ ಇತ್ತು ತಾನೇ "ಇಂಕ್ವಿಲಾಬ್!" ಎಂದ. "ಜಿಂದಾಬಾದ್!" ಎಂದು ಅಲ್ಲಿದ್ದ ನಾಲ್ವತ್ತೈದು ಜನರು ಒಂದಾಗಿ ಉತ್ತರವಿತ್ತರು. ಈಗ ಘೋಷಗಳು ಮತ್ತಷ್ಟು ಗಟ್ಟಿಯಾಗಿ ಹೊರಟುವು.

ಒಬ್ಬ ಪಿಸುಗುಟ್ಟಿದ:

"ಮುಂದೆ ಕೆಂಪು ಬಾವುಟ, ಹಿಂದೆ ಕೆಂಪು ಟೋಪಿ."

ಅದು ಕೇಳಿಸಿದವನು ಕಿಸಕ್ಕನೆ ನಕ್ಕ.

ಸ್ವಯಂಸೇವಕರ ಶಿಸ್ತು ಸಮವಸ್ತ್ರಗಳನ್ನು ಕಂಡಂತೂ ಸುಬ್ಬಯ್ಯನ ಮೈ ಉರಿಯಿತು. ಆ ಮೆರವಣಿಗೆಯ ಬಾಲವಾಗಿ ತಾನು ನಡೆಯುವುದು ಹೇಸಿಕೆ ಎನಿಸಿತು. ಹೊಲಗಳು ಬಂದೊಡನೆ ಆತ, ಬೇರೊಂದು ಏರಿಯ ಮೇಲೆ ಮೆರವಣಿಗೆಗೆ ಸಮಾನಾಂತರವಾಗಿ ನಡೆದ. ಆಗಲಾದರೂ ರಾಜಪ್ರತಿನಿಧಿಯಾದ ತನ್ನನ್ನು ಕಂಡು ಆ ರೈತರು ತಣ್ಣಗಾಗಬಹುದು—ಎಂದು ಆತ ಭಾವಿಸಿದ. ಆದರೆ ಈಗಲೂ, ಅವನು ಅಪೇಕ್ಷಿಸಿದ ಯಾವ ಪರಿಣಾಮವೂ ಆಗಲಿಲ್ಲ. ಬದಲು "ಪೋಲೀಸ್ ದಬ್ಬಾಳಿಕೆಗೆ ಧಿಕ್ಕಾರ!" ಎಂಬ ಹೊಸ ಘೋಷವನ್ನು ಸ್ವಯಂ ಸೇವಕರು ಕೂಗಿದರು.

ಸೂರ್ಯ ಮೇಲೇರುತ್ತಿದ್ದ. ಮೆರವಣಿಗೆ ನೋಡಲೆಂದು ಗುಡಿಸಲು ಗುಡಿಸಲುಗಳಿಂದ ಹೊರಗಿಣಿಕಿದ ರೈತರು ಪೋಲೀಸನನ್ನೂ ಕಂಡರು. ಇದೇನೋ ಆಗುತ್ತಿದೆ ಎಂದು ರೈತರು ತಾವೂ ಮೆರವಣಿಗೆಯನ್ನು ಹಿಂಬಾಲಿಸತೊಡಗಿದರು.

ಸುಬ್ಬಯ್ಯ ಪೆಚ್ಚಾಗಿ ಹೋದ. "ಧಿಕ್ಕಾರ!" ಎಂದಾಗಲೆಲ್ಲ ಸ್ವಯಂಸೇವಕರು ಆತನತ್ತ ಬೊಟ್ಟು ಮಾಡುತ್ತಿದ್ದರು.' ಅಬ್ಬಾ! ಈ ಹಳ್ಳೀ ಮುಕ್ಕಗಳ ಎದೆಯೇ!' ಎಂದು ತುಟಿ ಕಚ್ಚಿದ. ಸಾಲದುದಕ್ಕೆ ರೈತರೂ ನೋಡತೊಡಗಿದ್ದರು, ಅಂತೂ ಅವಮಾನ. ಏನಾದರೂ ಮಾಡಿ ತಾನು ತನ್ನ ಅಧಿಕಾರ ತೋರಿಸದೇ ಹೋದರೆ ಮೂರು ಕಾಸಿನ ಬೆಲೆಯೂ ಉಳಿಯುವ ಹಾಗಿಲ್ಲ.......

ಮೆರವಣಿಗೆ ಎಡಕ್ಕೆ ತಿರುಗಿ ನದಿ ದಂಡೆಯುದ್ದಕ್ಕೂ ನಡೆಯಿತು. ಅಲ್ಲೇ ಕೋರ, ಕಣ್ಣ ಮತ್ತಿತರರ ಗುಡಿಸಲುಗಳಿದ್ದುವು. ರೈತ ಹೆಂಗಸರೂ ಹೊರಬಂದು, ಪೋಲೀಸನು ಕೆಂಪು ಬಾವುಟದ ನೆರಳಿನಂತೆ ಬರುತ್ತಿದ್ದ ದೃಶ್ಯವನ್ನು ನೋಡಿದರು. ಇದರಲ್ಲಿ ಅಪಾಯವಿದೆಯೇನೋ ಎಂದು ಒಮ್ಮೆ ಅವರಿಗೆ ದಿಗಿಲಾದರೂ, ಆ ಜನಸಮುದಾಯದಲ್ಲಿ ಆತ ಒಂಟಿಗನೆಂಬುದು ಸ್ಪಷ್ಟವಾಗಿ ಅವರು ನಗುತ್ತ, ಪೋಲೀಸನತ್ತ ಬೊಟ್ಟು ಮಾಡುತ್ತ, ಗುಜುಗುಜು ಮಾತಾಡಿದರು. ಹೆಂಗಸರ ಆ ವರ್ತನೆಯಂತೂ ಸುಬ್ಬಯ್ಯನಿಗೆ ನುಂಗಲಾರದ ತುತ್ತಾಯಿತು. ಆತನಲ್ಲಿ ವಿವೇಕ ಮರೆಯಾಗಿ ದುರಭಿಮಾನಕ್ಕೆ ಮೇಲುಗೈ ಆಯಿತು, ಹೊಲಕ್ಕೆ ಹಾರಿ, ಓಡುತ್ತ, ಸುಬ್ಬಯ್ಯ ಮೆರವಣಿಗೆಯ ಮುಂಭಾಗವನ್ನು ತಲಪಿದ.

ಹಾದಿಗೆ ಅಡ್ಡಿಯಾಯಿತೆಂದು ಕಣ್ಣ ನಿಲ್ಲಬೇಕಾಯಿತು. ಕಣ್ಣ ನಿಂತನೆಂದು ಬಾವುಟವೂ ಸ್ತಬ್ಧವಾಯಿತು. ಹಾಡು ಕೂಡ.

"ಹಾಲ್ಟ್! ನಿಂತಲ್ಲೆ ನಿಲ್ಲಿ !" ಎಂದು ಹೇಳಿ ಅಬೂಬಕರ್ ಶಿಳ್ಳೆ ಊದಿದ.

ಯಾರೋ "ಇಂಕ್ವಿಲಾಬ್!" ಎಂದರು. ಅದಕ್ಕೆ ಮಾರುತ್ತರ ದೊರೆಯಿತು. ಮತ್ತೆ ಘೋಷಗಳು ಹೊರಟವು.

"ಬಿಡು ಹಾದಿ!" ಎಂದ ಕಣ್ಣ.

"ಬಿಡೋದಿಲ್ಲ. ಸರಕಾರ ಸತ್ತೋಯ್ತೂಂತ ತಿಳಿದಿರಾ?"

ಅಬೂಬಕರ್ ಬಂದು ಪೋಲೀಸನ ರಟ್ಟೆ ಹಿಡಿದು "ಸರಿದು ನಿಲ್ಲು! ಏನು ಸಮಾಚಾರ?"ಎನ್ನುತ್ತ ಆತನನ್ನು ಬದಿಗೆಳೆದ. ಸುಬ್ಬಯ್ಯನ ಪಾಲಿಗೂ ಅದು ಬಲವಾದ ಹಿಡಿತವೇ! ಆತ ಕೈಕೊಡವಿ ಅಬೂಬಕರ್‌ನ ಕೆನ್ನೆಗೊಂದು ಏಟು ಬಿಗಿದ. ಮೆರವಣಿಗೆಯ ಸಾಲು ಮುರಿಯಿತು. ಎಲ್ಲರೂ ಬಾವುಟದ ಸುತ್ತಲೂ ಪೋಲೀಸನ ಸುತ್ತಲೂ ಗುಂಪು ಕಟ್ಟಿದರು. ಕೂಗುಗಳು ಕೇಳಿದುವು. "ಕೊಡಿ ಆತನಿಗೆ! "ಬಿಗೀರಿ

ನಾಲ್ಕೇಟು!"

"ಇದರ ಪರಿಣಾಮ ಏನಾದೀತೂಂತ ಗ್ಯಾನ ಇರ್‍ಲಿ!" ಎಂದು ಸುಬ್ಬಯ್ಯ ಕಿರಿಚಿದ.

ನಾಯಕನ ನಿರ್ದೇಶನವನ್ನಿದಿರು ನೋಡುತ್ತ ಜನ ಹಾಗೆಯೇ ನಿಂತರು. ಮುಖ ಕೆಂಪೇರಿದ ಅಬೂಬಕರ್‌ಗೆ ತಾನು ತಿರುಗಿ ಹೊಡೆಯಬೇಕೇ ಬೇಡವೇ ಎಂಬುದು ಬಗೆಹರಿಯದ ಪ್ರಶ್ನೆಯಾಯಿತು. ಮಾತು ಮಾತ್ರ ಹೊರಟಿತು:

"ಹೊಡೆದಿಯಾ ಮಗನೆ?"

"ಮಗ ಅಂದಿಯಾ?"

ಮತ್ತೆ ಕೈಬೀಸಿದ ಸುಬ್ಬಯ್ಯ. ಚಿಕ್ಕವನಾದ ಕುಟ್ಟಿಕೃಷ್ಣ ಆತನನ್ನು ಹಿಂದಕ್ಕೆ ತಳ್ಳಿದ. ಮುಗ್ಗರಿಸಿ ಬೀಳುವ ಹಾಗಾಯಿತು. ಕ್ಷಣಾರ್ಧದಲ್ಲಿ ಆತ ಸಾವರಿಸಿಕೊಂಡು, ಕುಟ್ಟಿ ಕೃಷ್ಣನನ್ನು ಬೂಟುಕಾಲಿನಿಂದೊದೆದ. ಹುಡುಗನ ಎಳೆಯ ಕಂಠದಿಂದ "ಆ!" ಎಂದು ಸ್ವರ ಹೊರಟಿತು. ಜನ ಎಲ್ಲರೂ ಒಮ್ಮೆಲೆ ಮಾತನಾಡುತ್ತ ಪೋಲೀಸನ ಮೇಲೇರಿದರು. ಸುತ್ತಮುತ್ತಲಿಂದಲೂ ರೈತರು ಓಡಿಬಂದರು. ಸುಬ್ಬಯ್ಯನಿಗೆ ಏಟುಗಳು ಬಿದ್ದವು. ನೋವು ತಡೆಯಲಾರದೆ ಆತ ಗುಂಪನ್ನು ಭೇದಿಸಿ ಹೊರಬಂದ. ಟೋಪಿ ಹೊಲಕ್ಕೆ ಬಿತ್ತು. ಅದನ್ನು ಲೆಕ್ಕಿಸದೆ ಸುಬ್ಬಯ್ಯ ಓಡಿದ. ಓಡುತ್ತಿದ್ದ ಆತನನ್ನು ಸ್ವಯಂಸೇವಕರೂ ಬೆನ್ನಟ್ಟಿದರು. ಕಣ್ಣನೂ ಬಾವುಟವನ್ನೆತ್ತಿಕೊಂಡೇ ಜನರ ಜತೆಯಲ್ಲಿ ಸಾಗಿದ. ನೂರು ಗಜ ಓಡುವಷ್ಟರಲ್ಲೇ ಸುಬ್ಬಯ್ಯ ಕಾಲು ಜಾರಿ ಬಿದ್ದ. ಎದ್ದು ಮತ್ತೆ ಓಡಿದ. ಜನರ ಕೂಗು ಸಮೀಪದಲ್ಲೆ ಕೇಳಿಸಿ, ಹೊಲದ ಮಣ್ಣು ಹೆಂಟೆಯೊಂದು ಬೆನ್ನಿಗೆ ತಗಲಿದಂತಾಗಿ, ಸುಬ್ಬಯ್ಯ ಅಧೀರನಾದ. 'ಬದುಕಿದರೆ ಸಾಕು' ಎನ್ನುವ ಹಾಗಾಯಿತು ಆತನ ಸ್ಥಿತಿ. ಆದರೂ ರೈತರೆದುರು ಸೋಲನ್ನೊಪ್ಪಿಕೊಳ್ಳಲಾರದೆ ಆತ ನದಿಯ ದಂಡೆಗೆ ಧಾವಿಸಿ ನೀರಿಗೆ ಧುಮುಕಿದ.

ಜನ ಬಂದು ನೆರೆದರು. ಆತ ಈಸಿ ಆಚೆಯ ದಡಕ್ಕೆ ಹೋಗಿ ಪಾರಾಗುವನೆಂಬುದು ಸ್ಪಷ್ಟವಾಯಿತು."ಕಳ್ಳ ತಪ್ಪಿಸ್ಕೊಂಡ!" ಎಂದರು ಹಲವರು. "ನೀಲೇಶ್ವರದ ಹಾದಿಯಾಗಿ ನಡೆದುಕೊಂಡೇ ಹೊಸದುರ್ಗಕ್ಕೆ ಹೋಗಲಿ ಫೌಜದಾರರು!" ಎಂದನೊಬ್ಬ. "ಇನ್ನೊಮ್ಮೆ ಬಾ, ಕಲಿಸ್ತೇವೆ" ಎಂದಿತು ಒಂದು ಬಾಲ ಕಂಠ.

ಕಣ್ಣನೂ ಬಾವುಟದೊಡನೆ ಬಂದು ತಲಪಿದ.

ಯಾರೋ ಅಂದರು:

"ಬನ್ನಿರೋ, ನದಿಗಿಳೀರಿ, ಹಿಡಿದು ತರೋಣ ಅವನನ್ನ!"

"ಬೇಡಿ, ಬೇಡ! ಎಂದು ಹಲವರೆಂದರು.

"ತಗೊಳ್ಳಿ ಒಂದೊಂದು ಕಲ್ಲು. ಉಡುಗೊರೇನಾದರೂ ಕೊಟ್ಟು ಕಳಿಸೋಣ."

ನದಿಯ ದಡದಿಂದ ಕಲ್ಲುಗಳನ್ನೆತ್ತಿ ಹಲವರು, ಈಸಿ ಹೋಗುತ್ತಿದ್ದ ಸುಬ್ಬಯ್ಯನತ್ತ ಬೀರಿದರು. ಯಾವುದೋ ಒಂದು ಕಲ್ಲು ತಾಕಿದಾಗ ಈಸುತ್ತ ಇದ್ದವನು ತಲೆಕೊಡವಿದ. ದಡದ ಮೇಲಿದ್ದವರು ನಕ್ಕರು. ಸುಬ್ಬಯ್ಯ ಮತ್ತೆ ಈಸಿದ. ಮತ್ತೆ ಕಲ್ಲುಗಳು ಆತನೆಡೆಗೆ ಹೋದುವು.

ಆಗ ಕೇಳಿಸಿತು ಅಬೂಬಕರನ ಸ್ವರ:

"ಹೋಗಲಿ, ಬಿಟ್ಟುಬಿಡಿ!"

ಅಷ್ಟರಲ್ಲೆ, ನಂಬಿಯಾರರ ಮನೆಯಿಂದ ಪೋಲೀಸನು ಮೆರವಣಿಗೆಯನ್ನು ಹಿಂಬಾಲಿಸಿದನೆಂದು ಕೇಳಿ, ಧಾವಿಸಿ ಬಂದ ಅಪ್ಪು ಮತ್ತು ಚಿರುಕಂಡ, ಏದುತ್ತ ಏದುತ್ತ ಜನ ನೆರೆದಿದ್ದ ಸ್ಥಳಕ್ಕೆ ತಲಪಿದರು. ಏನಾಯಿತೆಂದು ಕೇಳ ಬೇಕಾದುದಿರಲಿಲ್ಲ. ಕೆಲವರ ಕೈಯಲ್ಲಿ ಕಲ್ಲುಗಳಿದ್ದುದನ್ನು ಕಂಡು ಚಿರುಕಂಡ ಎಂದ:

"ಹಾಳಾಗಲಿ, ಕಲ್ಲೆಸೀಬೇಡಿ!"

ಪಂದ್ಯಾಟದ ಪಟುವೆಂದು ಹಿಂದಿನ ದಿನ ಆತ್ಮಸ್ತುತಿ ಮಾಡಿಕೊಂಡಿದ್ದ ಸುಬ್ಬಯ್ಯನ ಈಸುಗಾರಿಕೆಯ ವಿಷಯದಲ್ಲಿ ಮೂದಲಿಕೆಯ ಮಾತನ್ನಾಡುತ್ತ ಜನ ನಕ್ಕರು.

ಸುಬ್ಬಯ್ಯನ ಕೈ ಸೋತ ಹಾಗೆ ತೋರಿತು. ಅಪ್ಪು ಕಾತರದಿಂದ ಅತ್ತ ನೋಡಿದ. ಚಿರುಕಂಡನ ಹಣೆ ಯೋಚನೆಯಿಂದ ನೆರಿಗೆ ಕಟ್ಟಿತು.

ಯಾರೋ ಒಬ್ಬನೆಂದ:

"ವಿಶ್ರಾಂತಿ ತಗೊಳ್ತಿದ್ದಾನೆ ಕಣ್ರೋ....."

ಮುಂದೆ ಈಸಲು ಮತ್ತೊಂದು ಯತ್ನ. ಮತ್ತೆ ಸೋಲು.

"ಏನಪ್ಪ, ಫೌಜದಾರರು ಕಷ್ಟದಲ್ಲಿದ್ದಾರೇಂತ ಕಾಣ್ತದೆ!" ಎಂದು ಒಬ್ಬ ರಾಗವೆಳೆದ....

.....ಅಪ್ಪು ಚಿರುಕಂಡ ಊಹಿಸಿದಂತೆಯೇ ಆಯಿತು. ನಡುನೀರಿನಲ್ಲಿ ಸುಬ್ಬಯ್ಯ ಮುಳುಗಿದ. ಕರಿಯ ಚುಕ್ಕೆಯಾಗಿ ಆವರೆಗೂ ತೋರುತ್ತಿದ್ದ ತಲೆ ಕಾಣಸದೇ ಹೋಯಿತು.

ಅಲ್ಲಿ ಸೇರಿದ್ದವರೆಲ್ಲ ಮಾತು ನಿಲ್ಲಿಸಿ ಕ್ಷಣಕಾಲ ಮೌನವಾದರು.

"ಪಾಪಿ ಮುಳುಗಿದ!" ಎಂದಿತೊಂದು ಸ್ವರ.

ಅಪ್ಪು ಮತ್ತು ಚಿರುಕಂಡ ಪರಸ್ಪರ ಮುಖ ನೋಡಿದರು. ಇಬ್ಬರ ದೃಷ್ಟಿಯೂ ಪ್ರಶ್ನಾರ್ಥಕ ಚಿಹ್ನೆಯಾಗಿ ನದಿಯನ್ನು ನೋಡಿತು. ಅಲ್ಲಿ ಆದುದೇನು? ಆತ

ಈಸಲಾರದೆ ಸತ್ತನೆ? ಅಥವಾ ಸುಳಿಗೆ ಸಿಲುಕಿದನೆ? ಇಲ್ಲವೆ ಮೊಸಳೆ ಆತನ ಕಾಲು ಹಿಡಿದೆಳೆಯಿತೆ? ಏನಾಯಿತು?

ಎಷ್ಟು ನೋಡಿದರೂ, ಒಂದು ಜೀವ ಅಲ್ಲಿ ಮುಳುಗಿ ಸತ್ತಿತೆಂಬುದಕ್ಕೆ ಯಾವ ಸಾಕ್ಷ್ಯವೂ ಇರಲಿಲ್ಲ. ಎಂದಿನಂತೆಯೇ ಹರಿಯುತ್ತಿತ್ತು ತೇಜಸ್ವಿನಿ.

ದೀರ್ಘವಾಗಿ ಉಸಿರುಬಿಟ್ಟು ಚಿರುಕಂಡನೆಂದ:

"ಸ್ವಯಂಸೇವಕರ ಮೆರವಣಿಗೆ ನೇರವಾಗಿ ಸಂಘದ ಕಚೇರಿಗೆ ಹೋಗಲಿ ಉಳಿದವರೆಲ್ಲ ಅವರವರ ಕೆಲಸಕ್ಕೆ ಹೋಗಿ."

ಆ ಧ್ವನಿ ಭಾರವಾಗಿತ್ತು.

ಕೋರ ಬಂದ ಹಾದಿಯಲ್ಲೆ ಹೊರಟ. ಪೋಲೀಸನ ಕೆಂಪು ಟೋಪಿ ಬಿದ್ದಲ್ಲೆ ಇತ್ತು. ತನ್ನ ಕೈಲಿದ್ದ ಕೋಲಿನಿಂದ ಕೋರ ಅದನ್ನು ಬದಿಗೆ ಸರಿಸಿ ನದಿಯ ದಂಡೆಯತ್ತ ತಳ್ಳಿದ. ಅಲ್ಲಿಂದ ಟೋಪಿ ನೀರಿಗೆ ಉರುಳಿ ಮುಳುಗಿಹೋಯಿತು.

# ವಿರಾಮ

## ೧

ಪೋಲೀಸನ ಮರಣದ ದುರ್ಘಟನೆ ನಂಬಿಯಾರರ ನಾಭಿಯಲ್ಲಿ ನಡುಕ ಹುಟ್ಟಿಸಿತು. ಆ ಕ್ಷಣವೇ, ಮನೆ ಮಂದಿಯೊಡನೆ ಊರು ಬಿಟ್ಟು ಹೋಗಲು ಅವರು ನಿರ್ಧಾರ ಮಾಡಿದರು. ಆದರೆ ಇದು ಸುಲಭವಲ್ಲ. ಹಾದಿಯಲ್ಲೆ ರೈತರು ತಮ್ಮನ್ನು ತರುಬಬಹುದು, ಎಂಬ ಶಂಕೆ ತಲೆದೋರಿ ಅವರು ವ್ಯಾಕುಲರಾದರು. ಹೀಗಾಗಿ, ಬಂದೂಕನ್ನು ನೆಚ್ಚಿಕೊಂಡು, ದೇವರ ಮೇಲೆ ಭಾರಹಾಕಿ, ಅವರು ಮನೆಯೊಳಗೇ ಕುಳಿತರು. ಯಾವ ಕ್ಷಣವೂ ರೈತರು ತಮ್ಮ ಮನೆಯ ಮೇಲೆ ಏರಿಬರಬಹುದೆಂಬುದು ಜಮೀನ್ದಾರರ ಎಣಿಕೆಯಾಗಿತ್ತು. ಆದರೆ, ಮನೆಯ ಮಹಾದ್ವಾರದಲ್ಲಿ ಕಾವಲು ನಿಂತಿದ್ದ ಕಟ್ಟಾಳುಗಳಿಗೆ ರೈತರ ಸುಳಿವೇ ಕಂಡುಬರಲಿಲ್ಲ. ಅವರ ಎದೆಯೊಳಗೆ ಅವಲಕ್ಕಿ ಕುಟ್ಟುತ್ತಿದ್ದರೂ ಕ್ರಮೇಣ ಭಯ ಮಾಯವಾಗಿ, ನಿಂತು ಬೇಸರವೆನಿಸಿ, ಆಕಳಿಸುವಂತಾಯಿತು.

ಮಧ್ಯಾಹ್ನದ ಹೊತ್ತಿಗೆ ಒಬ್ಬ ಬೇಹುಗಾರ ನಂಬಿಯಾರರಿಗೆ ಸುದ್ದಿ ತಂದ. ರೈತರು ರಣೋತ್ಸಾಹ ತೋರದೆ ಸಪ್ಪಗಿರುವರೆಂದು ತಿಳಿಸಿದ. ಕೆಲವರು

ಗುಡಿಸಲುಗಳೊಳಗೇ ಅವಿತಿರುವರೆಂದೂ ಮುಂದೇನಾಗುವುದೋ ಎಂಬ ಭೀತಿ ಹಲವರನ್ನು ಕಾಡುತ್ತಿದೆಯೆಂದೂ ಇಂತಹ ಪರಿಸ್ಥಿತಿಯಲ್ಲಿ ಸಮ್ಮೇಳನ ನಡೆಸಬೇಕೆ ಬೇಡವೆ ಎಂಬ ಚರ್ಚೆಯಾಗುತ್ತಿದೆಯೆಂದೂ ವರದಿ ಮಾಡಿದ.

ನಂಬಿಯಾರರ ಮುಖ ಅರಳಿತು. ಅವರು ಗೆಲವು ತೋರಿ ಸ್ವಲ್ಪ ಹೊತ್ತು ಓಡಾಡಿದರು. ಬಳಿಕ ಕುಳಿತು, ಪರಿಸ್ಥಿತಿಯ ಭೀಕರತೆಯನ್ನು ಮನಗಾಣಿಸುವ ದೀರ್ಘಪತ್ರವನ್ನು ಬರೆದರು. ಮಲೆಯಾಳಿ ಭಾಷೆಯಲ್ಲಿ ಮಾತ್ರ ಸಾಲದೆಂದು ತಮ್ಮ ಹರಕು ಮುರುಕು ಇಂಗ್ಲಿಷಿನಲ್ಲೂ ಇನ್ನೊಂದು ಒಕ್ಕಣೆ ಸಿದ್ಧಗೊಳಿಸಿದರು. ಆ ಲಕೋಟೆಯೊಡನೆ ನಂಬಿಕೆಯ ದೂತರನ್ನು ಗುಪ್ತವಾಗಿ ಹೊಸದುರ್ಗಕ್ಕೆ ಅಟ್ಟಿದುದಾಯಿತು. ಇನ್ನೊಬ್ಬ ನೀಲೇಶ್ವರಕ್ಕೆ ಹೋಗಿ ಕಯ್ಯೂರಿನ ರೈತರು ಸಶಸ್ತ್ರ ಬಂಡಾಯವೆದ್ದು ಪೋಲೀಸನನ್ನು ಕೊಲೆಮಾಡಿದ ವಾರ್ತೆಯನ್ನು ತಂತಿ ಮೂಲಕವಾಗಿ ಮದರಾಸು ಸರಕಾರಕ್ಕೂ ಮಂಗಳೂರಿನ ಜಿಲ್ಲಾಧಿಕಾರಿಗೂ ತಿಳಿಸುವ ಏರ್ಪಾಟನ್ನು ನಂಬಿಯಾರರು ಮಾಡಿದರು.

ಇಷ್ಟು ಮಾಡಿ ಅವರು ತೃಪ್ತಿಯ ನಿಟ್ಟುಸಿರು ಬಿಟ್ಟು ಕಾನೂನು-ನೆಮ್ಮದಿಯ ರಕ್ಷಕರ ಆಗಮನವನ್ನು ಇದಿರು ನೋಡಿದರು. ಆದರೂ ಕತ್ತಲಾದಂತೆ, ಅವರಿಗೆ ಭಯವಾಯಿತು. ಎಚ್ಚರವಿರಲು ಆಳುಗಳಿಗೆ ಹೇಳಿ, ಬಾಗಿಲುಗಳನ್ನು ಭದ್ರವಾಗಿ ಮುಚ್ಚಿ ಅಗಣಿ ಹಾಕಿದರು. ನಂಬೂದಿರಿ ನೀಲೇಶ್ವರದಲ್ಲಿ ಸುಖವಾಗಿ ಇರುವನೆಂಬ ವಿಷಯ ಅವರನ್ನು ಆಗಾಗ್ಗೆ ಕುಟುಕಿತು. "ಖದೀಮ! ಹೀಗಾಗ್ತದೇಂತ ಅವನಿಗೆ ಮೊದಲೇ ಗೊತ್ತಿತ್ತೋ ಏನೋ" ಎಂದು ಜರೆದು ಬಯ್ದರು.

.....................

ರೈತ ಸಂಘದ ಕಚೇರಿಯಲ್ಲಿ ಜನಸಂದಣಿ ನೆರೆಯಿತು. ಕೆಲವರು ಭೀತರಾಗಿ ಅತ್ತ ಸುಳಿಯಲಿಲ್ಲ, ನಿಜ. ಆದರೆ ಹೆಚ್ಚಿನವರೆಲ್ಲ ಬರುತ್ತಲಿದ್ದರು. ಹೋಗುತ್ತಲಿದ್ದರು. ಆದರೆ ಮಾತನಾಡುತ್ತಿದ್ದವರು ಕಡಮೆ. ಎಲ್ಲರ ಮುಖಗಳ ಮೇಲೂ ಪ್ರಶ್ನಾರ್ಥಕ ಚಿಹ್ನೆಯಿತ್ತು : 'ಏನು? ಇನ್ನೇನು ? ಮುಂದೇನು?'

ಘಟನೆ ನಡೆದ ಸ್ವಲ್ಪ ಹೊತ್ತಿನಲ್ಲಿ ಸಂಘದ ಕಾರ್ಯಸಮಿತಿಯ ಅವಸರದ ಸಭೆ ಸೇರಿತು. ಅರ್ಧ ಗಂಟೆಯೊಳಗೇ ಪ್ರಕಟಣೆಯೊಂದು ಸಿದ್ಧವಾಯಿತು. ಎಲ್ಲರೂ ಓದಲು ಅನುಕೂಲವಾಗುವಂತೆ ಅಗಲದ ಹಾಳೆಯ ಮೇಲೆ ದೊಡ್ಡ ಅಕ್ಷರಗಳಲ್ಲಿ ಚಿರುಕಂಡ ಅದನ್ನು ಬರೆದ. ಹಾಳೆಯನ್ನು ಬಿದಿರಿನ ತಡಿಕೆಗೆ ಅಂಟಿಸಿ, ತಡಿಕೆಯನ್ನು ಸಂಘದ ಕಚೇರಿಯ ಮುಂದುಗಡೆ ತೂಗಹಾಕಿದರು. ಪ್ರಕಟಣೆಯಲ್ಲಿ ಹೀಗಿತ್ತು:

'ಇವತ್ತು ಬೆಳಗ್ಗಿನ ಘಟನೆಯನ್ನು ಸಂಘದ ಕಾರ್ಯಸಮಿತಿಯು ವಿವರವಾಗಿ

ಪರಿಶೀಲಿಸಿ ಮಾಡಿರುವ ಠರಾವು ಏನೆಂದರೆ—

"ಪೋಲೀಸನ ಮರಣಕ್ಕೆ ಕಯ್ಯೂರಿನ ರೈತರು ಯಾವ ರೀತಿಯಲ್ಲೂ ಹೊಣೆಗಾರರಲ್ಲ. ನದಿಗೆ ಹಾರದೆ ಇರುತ್ತಿದ್ದರೆ ಆತನಿಗೆ ಏನೂ ಆಗುತ್ತಿರಲಿಲ್ಲ. ನದಿಯಲ್ಲಿ ಆಕಸ್ಮಿಕಕ್ಕೆ ಒಳಗಾಗಿ ಅವನು ಸತ್ತುಹೋದ. ಆದುದರಿಂದ ಯಾರು ಯಾವ ಯೋಚನೆಯನ್ನು ಮಾಡದೆ ತಮ್ಮ ಕೆಲಸ ಕಾರ್ಯಗಳಲ್ಲಿ ನಿರತರಾಗಬೇಕು. ಸಮ್ಮೇಳನದ ಸಿದ್ಧತೆಯ ಅಂಗವಾಗಿ ಎಂದಿನಂತೆ ನಾಳೆ ಪ್ರಾತಃಕಾಲವೂ ಮೆರವಣಿಗೆ ಜರಗುವುದು. ಸ್ವಯಂ ಸೇವಕರಷ್ಟೇ ಅಲ್ಲದೆ ಎಲ್ಲ ರೈತ ಬಾಂಧವರೂ ಆ ಮೆರವಣಿಗೆಯಲ್ಲಿ ಭಾಗವಹಿಸಬೇಕೆಂದು ಸಂಘ ಕರೆಕೊಡುತ್ತದೆ.

ನ್ಯಾಯಕ್ಕೆ ಜಯವಾಗಲಿ !

ಇಂಕ್ವಿಲಾಬ್ ಜಿಂದಾಬಾದ್ !"

ಪ್ರಕಟಣೆಯ ಮುಂದೆ ರೈತರು ಗುಂಪು ಕೂಡಿದರು. ಕೆಲವರು ಪುನಃ ಪುನಃ ಅದನ್ನೋದಿದರು. ಅದು ಎಲ್ಲ ಸಂದೇಹಗಳನ್ನೂ ದೂರ ಮಾಡುವ ಸ್ಪಷ್ಟೀಕರಣವಾಯಿತು; ಸಮಾಧಾನಕ್ಕೆ ಕಾರಣವಾಯಿತು.

ಆದರೆ ಇಷ್ಟನ್ನೂ ಮಾಡಿ ಸಂಘದ ಪ್ರಮುಖರು ಸುಮ್ಮನಿರುವಂತಿರಲಿಲ್ಲ. ಸಶಸ್ತ್ರ ಪೋಲೀಸರ ಪಡೆ ಬಂದೇಬರುವುದೆಂದು ಅವರು ತರ್ಕಿಸಿದರು.

"ಅಧಿಕಾರಿಗಳಿಗೆ ಸುದ್ದಿ ಮುಟ್ಟೋದಕ್ಕೆ ಎಷ್ಟು ಹೊತ್ತು ಬೇಕು?" ಎಂದ ಅಬೂಬಕರ್.

ವಿವಿಧ ಅಭಿಪ್ರಾಯಗಳು ಬಂದವು:

"ಇಷ್ಟರಲ್ಲೇ ಜಮೀನ್ದಾರ ಯಾರನ್ನಾದರೂ ಕಳಿಸಿದನೋ ಏನೋ?"

"ಹಾದೀಲಿ ದೂತರನ್ನು ತಡೆಯಬಹುದಾಗಿತ್ತು."

ಎಲ್ಲವನ್ನೂ ಯೋಚಿಸಿ ಚಿರುಕಂಡ ಹೇಳಿದ:

"ಅದರಿಂದ ಅಷ್ಟೇನೂ ಪ್ರಯೋಜನವಿಲ್ಲ. ಬೆಳಿಗ್ಗೆ ತರಕಾರಿ ತಗೊಂಡು ನೀಲೇಶ್ವರದ ಪೇಟೆಗೆ ಹೋದವರ ಮೂಲಕ ಈಗಾಗಲೇ ಸುದ್ದಿ ಹಬ್ಬಿರ್ತದೆ. ಅದನ್ನು ತಡೆಯೋದು ಸಾಧ್ಯವಿಲ್ಲ. ಈಗ ವಿಪತ್ತನ್ನು ಧೈರ್ಯದಿಂದ ಇದಿರಿಸ್ಬೇಕು. ರಿಸರ್ವ್ ಪೋಲೀಸು ಪಡೆ ಬಂದೇಬರ್ತದೇಂತ ಊಹಿಸ್ಕೊಂಡೆ ಚರ್ಚೆ ನಡೆಸೋಣ."

"ನಾವೆಲ್ಲ ಭೂಗತರಾಗ್ಬೇಕು. ಯಾರೂ ಸಿಗಬಾರ್ದು" ಎಂದ ಅಪ್ಪು. ಆ ಧ್ವನಿಯಲ್ಲಿ ಉದ್ವೇಗ ತುಂಬಿತ್ತು.

ಆ ಮಾತು ಕೇಳಿ ಒಂದು ನಿಮಿಷ ಯಾರೂ ಏನನ್ನೂ ಹೇಳಲಿಲ್ಲ. ಆ ಬಗೆಗೆ ಚಿರುಕಂಡನ ಅಭಿಪ್ರಾಯವೇನೆಂದು ತಿಳಿಯಲು ಅವರು ತವಕಗೊಂಡರು.

ಚಿರುಕಂಡನ ಹಣೆಯ ಮೇಲೆ ಗೆರೆಗಳು ಮೂಡಿದುವು. ಆತ ಯೋಚಿಸಿ ನಿಧಾನವಾಗಿ ಹೇಳಿದ:

"ಅದು ನಿಜ. ಆದರೆ ನಮ್ಮಲ್ಲಿ ಇಂಥ ಬಿಕ್ಕಟ್ಟಿನ ಪರಿಸ್ಥಿತಿ ಉಂಟಾಗಿರೋದು ಇದೇ ಮೊದಲ್ನೇ ಸಲ. ಹಾಗಿರುವಾಗ, ಒಮ್ಮಿಂದೊಮ್ಮೆಲೆ ಜನರನ್ನು ಅವರ ಪಾಡಿಗೆ ಬಿಟ್ಟು ಕಾರ್ಯಕರ್ತರೆಲ್ಲ ಭೂಗತರಾಗೋದು ಸರಿಯಲ್ಲ."

ಆ ಮಾತಿನಲ್ಲಿ ಸತ್ಯಾಂಶವಿದೆಯೆಂಬುದು ಸ್ಪಷ್ಟವಾದರೂ ಒಪ್ಪಲಾರದೆ ಅಪ್ಪುವೆಂದು:

"ಹಾಗಾದರೆ ಪೋಲೀಸರನ್ನ ಇದಿರಿಸೋದು ಅಂತ್ಲ?"

ಅಬೂಬಕರ್ ನಡುವೆ ಬಾಯಿ ಹಾಕಿದ :

"ಅದು ಹ್ಯಾಗಾದೀತು? ಸುತ್ತುಮುತ್ತೆಲ್ಲ ದೇಶದಲ್ಲಿ ಅದೇ ಕಾರ್ಯಕ್ರಮ ಇಲ್ಲದಿರುವಾಗ, ಪ್ರತಿಭಟನೆ ಎಷ್ಟು ದಿವಸ ಸಾಧ್ಯ? ಪೋಲೀಸರ ಹಿಂದೆ ಸೈನ್ಯವೂ ಬರ್‍ತದೇಂತ ಮರೀಬೇಡಿ."

ಮಾತು ಮಾತಿಗೂ ಬೃಹದಾಕಾರ ತಳೆಯುತ್ತಿದ್ದ ಸಮಸ್ಯೆಯನ್ನು ಕುರಿತು ಎಲ್ಲರೂ ಯೋಚಿಸಿದರು.

ಮೌನವನ್ನು ಕೊನೆಗಾಣಿಸಿ, ಚಿರುಕಂಡ ಹೇಳಿದ :

"ಹಳ್ಳಿಯ ಹೊರಗಿನ ಕೇಂದ್ರದಲ್ಲಿ ಯಾರಾದರೂ ಇದ್ದೇ ಇರ್‍ತಾರೆ. ಅವರಿಗೆ ವಿಷಯ ತಿಳಿಸೋಣ. ನೀಲೇಶ್ವರಕ್ಕೂ ಯಾರನ್ನಾದರೂ ಕಳಿಸೋಣ, ಆದರೆ ಅದಕ್ಕೆ ಮುಂಚೆ ನಮ್ಮದೇ ಆದ ಅಭಿಪ್ರಾಯಕ್ಕೆ ನಾವು ಬರ್‍ಬೇಕು. ಅದನ್ನೂ ಪರಿಶೀಲಿಸಿ ಅವರು ನಿರ್ದೇಶ ಕೊಡಲಿ."

ಎಲ್ಲರಿಗೂ ಆ ಸೂಚನೆ ಒಪ್ಪಿಗೆಯಾಯಿತು. ಚಿರುಕಂಡ ಮುಂದುವರಿಸಿದ:

"ಈಗಿನ ಸ್ಥಿತೀಲಿ ಪ್ರತಿಭಟನೆ ಯೋಗ್ಯವಲ್ಲಾಂತ ನನ್ನ ಅಭಿಪ್ರಾಯ. ನಮ್ಮಲ್ಲಿ ಕೆಲವರು ಕತ್ತಲಾದ ಕೂಡಲೇ ಭೂಗತರಾಗ್ಬೇಕು. ಉಳಿದವರು ಜನರ ಜತೇಲಿದ್ದು ಬಹಿರಂಗವಾಗಿ ಮಾರ್ಗದರ್ಶನ ನೀಡ್ಬೇಕು. ಒಂದೆರಡು ದಿನ ಪರಿಸ್ಥಿತಿ ನೋಡ್ಕೊಂಡು ಆಮೇಲೆ ಹೊಸ ತೀರ್ಮಾನ ಮಾಡಬಹುದು. ಇದು ನಿಮಗೆ ಒಪ್ಪಿಗೆಯಾದರೆ, ನಮ್ಮ ಅಭಿಪ್ರಾಯ ಹೀಗಿದೇಂತ ನಮ್ಮವರಿಗೆ ಬರೆದು ಕಳಿಸೋಣ."

ಸುತ್ತಲೂ ಇದ್ದವರು ತಮ್ಮೊಳಗೇ ಸ್ವಲ್ಪ ಹೊತ್ತು ಮಾತನಾಡಿ 'ಒಪ್ಪಿಗೆ' ಎಂದರು.

ಅಪ್ಪು ಕೇಳಿದ:

"ಒಂದು ವೇಳೆ ಮೇಲಿನಿಂದ ನಿರ್ದೇಶ ಬರದೇ ಇದ್ದರೆ?"

ಉತ್ತರ ಸ್ಪಷ್ಟವಾಗಿತ್ತು.

"ಬರದೇ ಇದ್ದರೆ ಈಗ ನಾವು ಮಾಡಿರೋ ತೀರ್ಮಾನದಂತೆ ನಡೆಯೋದು."

ಕಾರ್ಯದರ್ಶಿಯಾದ ಚಿರುಕಂಡ ಜವಾಬುದಾರ ವ್ಯಕ್ತಿಯಾಗಿ ಹಳ್ಳಿಯಲ್ಲೇ ಇರಬೇಕೆಂದು ಎಲ್ಲರೂ ಹೇಳಿದರು. ಚಿರುಕಂಡನ ಬಳಿಯಲ್ಲೇ ಇರಲು ಕೋರ ಬಯಸಿದ. ಬಾವುಟ-ಹಾಡುಗಳ ಸಂಗಾತಿಯಾದ ಕಣ್ಣನ ಉಪಯೋಗವಿದ್ದುದೂ ಜನರ ನಡುವೆ. ಅಪ್ಪು, ಅಬೂಬಕರ್ ಮತ್ತು ಸಾಹಸಿಗಳಾದ ಸ್ವಯಂ ಸೇವಕರಿಬ್ಬರು—ಇಷ್ಟು ಜನ ಅಡವಿ ಸೇರುವುದೆಂದು ನಿರ್ಧಾರವಾಯಿತು....

ಯಾವಾಗಲೂ ಮಹಾ ಸಂಭವಗಳನ್ನೇ ನಿರೀಕ್ಷಿಸುತ್ತಿದ್ದ ಅಪ್ಪು, ಮನೆಯಲ್ಲಿ ಹೆಂಡತಿ ಜಾನಕಿಯೊಬ್ಬಳನ್ನೇ ಕರೆದು ಹೇಳಿದ :

"ಒಂದು ಗುಟ್ಟು.... ಯಾರಿಗೂ ಹೇಳ್ಬಾರ್ದು."

ಆ ದಿನ ಪ್ರತಿ ಕ್ಷಣವೂ ಕೇಡನ್ನು ಇದಿರುನೋಡುತ್ತಿದ್ದ ಜಾನಕಿ "ಹೂಂ" ಎಂದಳು.

"ನಾನು ಇವತ್ತು ರಾತ್ರೆ ಭೂಗತನಾಗ್ತೇನೆ. ಅರ್ಥವಾಯ್ತೆ?"

ಅಪ್ಪುವಿನ ಹೆಂಡತಿ ಅದೇನೆಂದು ತಿಳಿಯದ ಅಜ್ಞಾನಿಯಾಗಿರಲಿಲ್ಲ. ಆಕೆ ಅರ್ಥವಾಯಿತೆಂದು ಮೌನವಾಗಿ ತಲೆಯಾಡಿಸಿದ್ದನ್ನು ಕಂಡು ಅಪ್ಪು ಮುಂದುವರಿಸಿದ:

"ನೀನು ನನ್ನ ಹೆಂಡತಿ ಮಾತ್ರವಲ್ಲ. ಸಂಗಾತಿ ಕೂಡ. ಎಂಥ ಆಪತ್ತಿನಲ್ಲೂ ಧೈರ್ಯವಾಗಿರ್ತೇನೇಂತ ಮಾತುಕೊಡು."

ಆಕೆ ಆತನ ಬಲ ಅಂಗೈಯನ್ನು ತನ್ನ ಎರಡೂ ಕೈಗಳಿಂದ ಎತ್ತಿ ಎದೆಯ ಮೇಲಿರಿಸಿಕೊಂಡಳು. ಆಕೆಯ ಕಣ್ಣೀರಿನೊಂದು ಹನಿ ಆತನ ಕೈಯನ್ನು ಸೋಂಕಿತು.

"ಅಳಬೇಡವೆ ! ಇಷ್ಟೇನಾ ನೀನು?"

ಸ್ವತಃ ಆತನೇ ಅಳುವ ಹಾಗಿತ್ತು ಧ್ವನಿ.

"ಇಲ್ಲ" ಎಂದಳು ಜಾನಕಿ. ಈಗ ಸ್ವರದಲ್ಲಿ ಧೈರ್ಯವಿತ್ತು, ಗಾಂಭೀರ್ಯವಿತ್ತು.

ಅಪ್ಪುವಿಗೆ ಅದರಿಂದ ಸಮಾಧಾನವಾಯಿತು. ಆತ ಹೆಂಡತಿಯನ್ನು ಅವಸರವಾಗಿ ಚುಂಬಿಸಿದ. ಮಗುವನ್ನು ಮುದ್ದಿಸಿದ. ಸದ್ದಿಲ್ಲದೆ ಕತ್ತಲೆಯಲ್ಲಿ ಲೀನವಾದ.

ಅಬೂಬಕರ್ ನಿಜವನ್ನೇ ಹೇಳಿ ಬೂಬಮ್ಮನನ್ನು ಬಿಟ್ಟುಬರುವುದು ಸುಲಭವಾಗಿರಲಿಲ್ಲ. ಅದಕ್ಕೊಲ್ಸರ ಆತ ಪ್ರಯೋಗಿಸಿದುದು ಸುಳ್ಳಿನ ಅಸ್ತ್ರ.

"ಸ್ವಲ್ಪ ದಿವಸ ತಲಚೇರಿಗೆ ಹೋಗ್ತೇನಮ್ಮ."

ಬೇರೆ ದಿನವಾಗಿದ್ದರೆ ಬೂಬಮ್ಮ ಆತನಿಗೆ ಅಡ್ಡಿ ಮಾಡುತ್ತಿದ್ದಳು. ಆದರೆ ಈ ದಿನ, ಮಗನಿಗೆ ಒದಗಬಹುದಾದ ಅಪಾಯದ ಭೀತಿ ಆಕೆಯ ಹೃದಯವನ್ನು ದಹಿಸುತ್ತಿತ್ತು. ಮಗ ತಲಚೇರಿಗೆ ಹೋಗುವುದೇ ಸುರಕ್ಷಿತವೆಂದು ಆಕೆಗೆ ತೋರಿತು.

"ಒಬ್ಬನೇ ಹೋಗ್ತೀಯೇನು?"

"ಬೇರೆಯವರೂ ಇರ್ತಾರೆ..... ನಾನೆಲ್ಲೀಂತ ಯಾರಾದರೂ ಕೇಳಿದರೆ ಏನು ಹೇಳ್ತೀಯಾ?"

"ಏನು ಹೇಳ್ಲಿ ಮಗು?"

"ಕಲ್ಲಿಕೋಟೆಗೆ ಹೋಗಿದ್ದಾನೇಂತ ಹೇಳು."

"ಹೂಂ, ನಿನ್ನ ರಕ್ಷಣೆ ಮಾಡ್ಕೋಪ್ಪಾ. ಅಲ್ಲಾ ನೋಡ್ತಾನೆ!"

ಬೇಡವೆಂದರೂ ಆಕೆ ತಂದುಕೊಟ್ಟ ತಿಂಡಿಯೊಡನೆ ಅಬೂಬಕರ್ ಮಾಯವಾದ.

ಹಾಗೆಯೇ ಇಬ್ಬರು ಸ್ವಯಂ ಸೇವಕರೂ ಬಂದರು. ರಾತ್ರಿಯೆ ನಾಲ್ವರೂ ನದಿಯ ದಂಡೆಯುದ್ದಕ್ಕೂ ಮೇಲಕ್ಕೆ ಸಾಗಿ ಅಡವಿ ಸೇರಿದರು....

ಚಿರುಕಂಡನ ಎಣಿಕೆ ಸರಿಯಾಯಿತು. ಹೊಸದುರ್ಗದಿಂದ ನಾಲ್ವತ್ತು ಜನ ಸಶಸ್ತ್ರ ಪೋಲೀಸರು ಯಾವುದೋ ಗೂಡ್ಸ್‌ಗಾಡಿಯಲ್ಲಿ ಚರ್ವತ್ತೂರಿನವರೆಗೆ ಬಂದು, ನಡುವಿರುಳು ದಾಟುತ್ತಿದ್ದಂತೆ ಕಯ್ಯೂರು ಸೇರಿದರು. ಕಯ್ಯೂರು ತಲಪುವ ಹಾದಿಯಲ್ಲೂ ನದಿ ದಾಟುವಲ್ಲೂ ಹಳ್ಳಿಯಿಂದ ಹೊರಹೋಗುವ ಬೇರೆ ಎರಡು ಕಾಲುದಾರಿಗಳಲ್ಲೂ ಆ ಪೋಲೀಸರು ನಾಲ್ವರು ನಾಲ್ವರಾಗಿ ಕಾವಲು ನಿಂತರು. ಉಳಿದವರು ಜಮೀನ್ದಾರರ ಬಂಟರನ್ನು ನೆರವಿಗೆ ಕರೆದು, ಮುಂಜಾವದ ಹೊತ್ತಿನಲ್ಲಿ ಅಪ್ಪು, ಚಿರುಕಂಡ, ಅಬೂಬಕರರ ಮನೆಗಳನ್ನೂ ಸಂಘದ ಕಚೇರಿಯನ್ನೂ ಮುತ್ತಿದರು. ಸರಕಾರದ ಆಗಮನವಾಗಿದೆಯೆಂದು ಸಾರುವುದಕ್ಕೋಸ್ಕರ ನಾಲ್ಕಾರು ಗುಂಡುಗಳು ಗುರಿಯಿಲ್ಲದೆ ಹಾದುಹೋಗಿ ಡಂ-ಡಂ ಸದ್ದು ಮಾಡಿದುವು. ಅವುಗಳ ಪ್ರತಿಧ್ವನಿಗಳಿಂದ ಕಯ್ಯೂರು ಕಂಪಿಸಿತು.

ಬೆಳಕು ಹರಿಯುತ್ತಿದ್ದಂತೆ ಬಂಧನಗಳಾದವು. ರಾಜಮರ್ಯಾದೆಯಲ್ಲ, ವೈರಿಯನ್ನು ಚುಚ್ಚಿ ತಿವಿದು ಗಾಯಾಳುವಾಗಿ ಮಾಡಿ ಸೆರೆಹಿಡಿಯುವ ಪದ್ಧತಿ. ಬಯನೆಟಿನ ಇರಿತ. ಹೇಯವಾದ ನಿಂದ್ಯವಾದ ಚುಚ್ಚುಮಾತಿನ ಕೊರೆತ. ಬೂಟುಗಾಲುಗಳ ಒದೆತ.

ಆ ಪೋಲೀಸ್ ಅಧಿಕಾರಿ ಮಹಾ ಚತುರನಾಗಿದ್ದ. ಕರಿದಾದ ಭೀಮ ದೇಹದ

ಆ ಒರಟು ಮನುಷ್ಯ ಕುಶಲಮತಿ ಎಂದು ಸಾಮಾನ್ಯರ ದೃಷ್ಟಿಗೇನೂ ತೋರುತ್ತಿರಲಿಲ್ಲ. ಆದರೆ ವಾಸ್ತವವಾಗಿ ಆತನಿಗೆ ಎಂಥ ಚಾಣಾಕ್ಷ ಬೇಟೆಗಾರನನ್ನೂ ನಾಚಿಸುವ ಸಾಮರ್ಥ್ಯವಿತ್ತು.

ಎಲ್ಲರಿಗೂ ಕೇಳಿಸುವಂತೆ ಆತ ಸಾರಿ ಹೇಳಿದ:

"ನಮಗೆ ಬೇಕಾಗಿರೋದು ಮುಖಂಡರು ಮಾತ್ರ. ಬೇರೆ ಯಾರಿಗೂ ನಾವು ತೊಂದರೆ ಕೊಡೋದಿಲ್ಲ."

ನಂಬಿಯಾರರು ಎಂದೋ ಸಿದ್ಧಗೊಳಿಸಿದ್ದ ಮುಖಂಡರ ಪಟ್ಟಿ ಆತನ ಕೈಯಲ್ಲಿತ್ತು.

"ಕಾರ್ಯದರ್ಶಿ ಕೋಯಿತಟ್ಟನ ಚಿರುಕಂಡ—"

ಆತನ ಎರಡೂ ಕೈಗಳನ್ನು ಹಿಂಬದಿಗೆ ಬಿಗಿದು ಬೇಡಿ ಹಾಕಿದರು.

"ಮಠದ ಅಪ್ಪು—"

ಅವನಿರಲಿಲ್ಲ.

"ಎರಡು ಬಿಗಿಯಿರಿ ಅವನಪ್ಪನಿಗೆ. ಸರಿ, ಹಾಗೆ! ಅವನನ್ನೇ ಬಂಧಿಸಿ! ಈ ಮನೆಗೆ ಕಾವಲು ನಿಲ್ಲಿ!"

ಮತ್ತೊಂದು ಹೆಸರು:

"ಪೊಡವರ ಕುಂಞಂಬು—ಓಹೋ! ಸಂಘ ಕಟ್ಟೋಕೆ ಜಾಗ ದಾನ ಮಾಡಿದ ದೊಡ್ಡ ಮನುಷ್ಯ! ಅರೆಸ್ಟ್!"

ಮುಂದೆ ಬೂಬಮ್ಮನ ಮನೆಗೆ ಸಂದರ್ಶನ. ಅಬೂಬಕರನಿಲ್ಲ. 'ಕಲ್ಲಿಕೋಟೆಗೆ ಹೋದನಂತೆ."

"ಕಳ್ಳ ಸೂಳೇಮಗ! ಈ ಮುದುಕಿಗೂ ಹ್ಯಾಗೆ ಹೇಳಿಕೊಟ್ಟಿದ್ದಾನೆ! ಒಳಗೆ ಹುಡುಕಿ ಯಾರು ಆ ಹುಡುಗ? ತಮ್ಮನೇನು? ಬೀಳಲಿ ಹಾಗೆ! ಬಿಟ್ಬೋ ಬಾಯಿ—ಸುಪ್ಪರ್ ಕೆ ಬಚ್ಚಾ!"

ಅಲ್ಲಿಂದ ಮನೆ ಮನೆಗೆ.

"ಹಾಡುವ ಕಣ್ಣ! ಆಹಾ! ಸಂಗೀತಗಾರ! ಬಯನೆಟನಿಂದ ತಿವೀರಿ ಮುಕುಳಿಗೆ. ಅವನ ಗಂಟಲು ಸ್ವರ ಸ್ವಲ್ಪ ಕೇಳೋಣ!"

ಅಸಹಾಯನಾದ ನಿರ್ಜೀವ ವ್ಯಕ್ತಿ ತಾನು ಎನ್ನುವಂತೆ ಕೋರ, ಗಾಜಿನಂತಹ ಕಣ್ಣುಗಳಿಂದ ತೆಳ್ಳನೆಯ ನೋಟ ಬೀರುತ್ತ ನಿಶ್ಚಲನಾಗಿ ನಿಂತಿದ್ದ. ಅವನೇ ಕೋರನೆಂದು ನಂಬಿಯಾರರ ಬಂಟನೊಬ್ಬ ಬೊಟ್ಟುಮಾಡಿದ.

"ಇವನೇ ಕೋರ! ಬಾಡಿಗಾರ್ಡ್! ರಾಮನ ಬಂಟ ಹನುಮಂತ! ಲಗಾವ್ ಇಸ್ಕೊ!"

ಆಮೇಲೆಯೂ ಕೃಷ್ಣನ್ ನಾಯರ್ ಮತ್ತಿತರ ಒಬ್ಬಿಬ್ಬರ ಬಂಧನ.

ದಸ್ತಗಿರಿಯಾದವರನ್ನೆಲ್ಲ ಸಂಘದ ಕಚೇರಿಗೆ ನಡೆಸಿಕೊಂಡು ಬಂದರು. ತರಕಾರಿ ಹೊತ್ತು ನೀಲೇಶ್ವರಕ್ಕೆ ಹೊರಟಿದ್ದ ಹೆಂಗಸರು, ನದಿ ದಾಟಲು ಪೋಲೀಸರ ಸಮ್ಮತಿ ದೊರೆಯದೆ, ಹಿಂತಿರುಗಿದರು. ಓಡಿಹೋಗಬೇಕೆನಿಸಿತ್ತು ಹಲವು ರೈತರಿಗೆ. ಅವರಿಗೆ ಭಯವಾಗಿತ್ತು. ಆದರೆ ಹಾದಿಗಳಲ್ಲೆಲ್ಲ ಪೋಲಿಸರು ಕಾವಲಿದ್ದುದನ್ನು ಕಂಡು ಅವರು ಹತಾಶರಾದರು. ಕ್ರಮೇಣ ಮುಖಂಡರನ್ನು ಮಾತ್ರ ಬಂಧಿಸಿದರೆಂಬುದು ತಿಳಿದು, 'ಬದುಕಿದೆವು!' ಎಂದು ಅವರು ಸ್ವಲ್ಪ ಸಡಿಲವಾಗಿ ಉಸಿರುಬಿಟ್ಟರು.

ಪೋಲೀಸನೊಬ್ಬ ಸಂಘದ ಕಚೇರಿಯ ಛಾವಣಿಯನ್ನೇರಿ ಧ್ವಜಸ್ತಂಭವನ್ನು ಮುರಿದ. ಬಾವುಟ ಜೋಲಾಡುತ್ತ ಕೆಳಕ್ಕೆ ಬಂದು ಬಂಧಿತರ ಗುಂಪಿನ ಬಳಿಯಲ್ಲೇ ಮುರಿದು ಬಿತ್ತು. ಇನ್ನೊಬ್ಬ ಪೋಲೀಸ ಅದನ್ನೆತ್ತಿ ಮುದ್ದೆಯಾಗಿ ಮಾಡಿ ಅಧಿಕಾರಿಯ ಬಳಿಗೆ ಒಯ್ದ.

"ಕತ್ತೆ! ನನಗ್ಯಾಕೆ ಕೊಡ್ತೀಯಾ ಅದನ್ನು? ಕಟ್ಟಿ ನೆಲದ ಮೇಲಿಡು !" ಎಂದು ಅಧಿಕಾರಿ ಗದರಿಸಿದ.

ಬಂಧಿತರನ್ನು ಮನಸ್ವೀ ಬಯ್ದು ಹೀನಾಯವಾಗಿ ಅವಮಾನಿಸಿದುದಾಯಿತು. ಆದರೆ, ಚಿರುಕಂಡನ ಮೊದಲ್ಗೊಂಡು ಒಬ್ಬರೂ ತುಟಿಪಿಟ್ಟೆನ್ನಲಿಲ್ಲ. ಕಚೇರಿಯ ಮುಂದೆ ತೂಗುಹಾಕಿದ್ದ ಪ್ರಕಟಣೆಯನ್ನು ಅಧಿಕಾರಿ ಓದಿದ:

"ಪೋಲೀಸನ ಮರಣಕ್ಕೆ ಕಯ್ಯೂರಿನ ರೈತರು ಯಾವ ರೀತಿಯಲ್ಲೂ ಹೊಣೆಗಾರರಲ್ಲ..... ಆಹಾ!....ನಾಳೆ ಪ್ರಾತಃಕಾಲವೂ ಮೆರವಣಿಗೆ ಜರಗುವುದು..... ಓಹೋ! ಧಾರಾಳವಾಗಿ!"

ಗದ್ದುಗೆಯನ್ನು ಮರಳಿ ಪಡೆದ ಅರಸುಕುಮಾರನ ಹಾಗೆ ನಂಬಿಯಾರರು ಅತ್ತ ಬಂದು, ಅಧಿಕಾರಿಯ ಎದುರು ವಿನಯದಿಂದ ತಮ್ಮ ಇಂಗ್ಲೀಷಿನಲ್ಲಿ "ಮನೆಕಡೆ ಹೋಗೋಣ. ವಿಶ್ರಾಂತಿ ತಗೊಳ್ಳಿ...." ಎಂದು ಹೇಳಿದರು.

ಅಧಿಕಾರಿ ನಂಬಿಯಾರರನ್ನು ನೋಡಿದ, ಕೈದಿಗಳನ್ನೂ ನೋಡಿದ. ತನ್ನ ಪೋಲೀಸರನ್ನೂ ನೋಡಿದ.

"ವಿಶ್ರಾಂತಿ ತಗೊಳ್ಳೋಣ. ಇಷ್ಟು ಮಾಡಿದ ಮೇಲೆ ವಿಶ್ರಾಂತಿ ಬೇಡವೆ? ಆದರೆ ಮೊದಲು ಇವರ ಮೆರವಣಿಗೆ ಹೊರಡಿಸ್ಬೇಕು!"

ಕೈದಿಗಳನ್ನು ಚೆರ್ವತ್ತೂರಿಗೊಯ್ದು ಅಲ್ಲಿಂದ ಹೊಸದುರ್ಗಕ್ಕೆ ಸಾಗಿಸಬೇಕೆಂದು ಆತನ ಆಜ್ಞೆಯಾಯಿತು. ಎಂಟು ಜನ ಕೈದಿಗಳನ್ನು ಈಗ ಬೇರೆ ರೀತಿಯಲ್ಲಿ ಒಬ್ಬನ ಕೈಗೆ ಒಬ್ಬರದನ್ನು ಜೋಡಿಸಿ ಬೇಡಿ ಹಾಕಿದರು. "ಹೀಗೆ ಹಾಕಿದರೆ ಏರಿ ಮೇಲೆ

ನಡೆದು ಹೋಗೋದು ಕಷ್ಟ" ಎಂದ ಯಾರೋ. "ನೊಗಕ್ಕೆ ಹೂಡಿದ ಎತ್ತುಗಳ ಹಾಗೆ ಹೊಲದ ಮೇಲೆ ನಡೆದು ಹೋಗ್ತಾರೆ. ಇದೇ ಸರಿ" ಎಂದು ಇನ್ನೊಬ್ಬನೆಂದ. ಹದಿನೈದು ಜನ ಸಶಸ್ತ್ರ ಪೋಲೀಸರು ಕೈದಿಗಳ ಆ ತಂಡವನ್ನು ಒಯ್ದರು. ಹಾದಿಯಲ್ಲಿ ಕಾವಲು ನಿಂತಿದ್ದವರ ಸಂಖ್ಯೆಯನ್ನು ಎರಡೆರಡಕ್ಕೆ ಇಳಿಸಿ ಉಳಿದ ಪೋಲಿಸರೂ ಅಧಿಕಾರಿಯೂ ವಿಶ್ರಾಂತಿಗೋಸ್ಕರ ನಂಬಿಯಾರರ ಮನೆಗೆ ನಡೆದರು.

ರೈತ ಹೆಂಗಸರೂ ಗಂಡಸರೂ ತಡಿಕೆಗಳೆಡೆಯಿಂದ ಬಾಗಿಲ ಮರೆಯಿಂದ ಇಣಿಕಿ, ಕೈದಿಗಳು ನಡೆದುಹೋಗುವ ದೃಶ್ಯವನ್ನು ನೋಡಿದರು. ತುಟಿ ಬಿಗಿ ಹಿಡಿದುನಿಂತಿದ್ದ ಸೊಸೆಯನ್ನು ಮಡಿಲಿಗೆಳೆದು ಚಿರುಕಂಡನ ತಾಯಿ ಚೀರಾಡಿದಳು. ಅಪ್ಪುವನ್ನು ಹೆತ್ತಾಕೆ ಅತ್ತಳು. ದೇವಕಿ ಅತ್ತೆಯನ್ನು ಸಂತೈಸಿದಳು. ಉಸಿರು ಬಿಗಿಹಿಡಿದರು—ಗಂಡಸರು ಹೆಂಗಸರೆಲ್ಲ.

ಇದು ಬೆಂಗಾಡು—ಎನ್ನುವಂತೆ ಒಣಗಿದ್ದ ನೆಲ ಭಣಗುಟ್ಟಿತು.

೨

ಎಂಟು ಜನರ ಬಂಧನದೊಡನೆ ಆ ಪ್ರಕರಣ ಮುಗಿಯಿತೆಂದು ಭಾವಿಸಿದವರು ಸಂಜೆ ಸೈನ್ಯದ ಹಾಗೆ ಸದ್ದು ಮಾಡುತ್ತ ಬಂದ ಪಟಾಲಮನ್ನು ನೋಡಿ ನಡುಗಿಹೋದರು. ಪಿಸುಮಾತಿನಲ್ಲೇ, ಮಿಲಿಟರಿ ಬಂತೆಂಬ ಸುದ್ದಿ ಗುಡಿಸಲಿನಿಂದ ಗುಡಿಸಲಿಗೆ ಹಬ್ಬಿತು.

—"ಎಣಿಸಿ ನೋಡಿದೆ. ಅರುವತ್ತು ಜನ ಮತ್ತು ಸೈನ್ಯಾಧಿಕಾರಿ!"

—"ಕಲ್ಲಿಕೋಟೆಯಿಂದ ಬಂದಿರ್ಬೇಕು!"

—"ಪರಮಾತ್ಮ! ಇನ್ನೇನು ಗತಿ!"

—"ಅಯ್ಯೋ!"

ಬಂದುದು ಮಿಲಿಟರಿಯಾಗಿರಲಿಲ್ಲ. ಆದರೆ ಅಷ್ಟೇ ಸಮರ್ಥವಾಗಿದ್ದ ಮಲಬಾರ್ ಸ್ಪೆಷಲ್ ಪಡೆ—ಎಂ. ಎಸ್. ಪಿ. ಈ ಸಶಸ್ತ್ರ ದಳ ವಿಸ್ತರವಾದೊಂದು ತೋಪಿನಲ್ಲಿ ಡೇರೆ ಹೊಡೆದು ಬೀಡುಬಿಟ್ಟಿತು. ಅದರ ನಾಯಕನೂ ಪೋಲೀಸ್ ಅಧಿಕಾರಿಯೂ ಪರಸ್ಪರ ಸಂಧಿಸಿದರು. ವಿಚಾರ ವಿನಿಮಯವಾಯಿತು. ನಂಬಿಯಾರರನ್ನು ಎದುರಲ್ಲಿ ನಿಲ್ಲಿಸಿಕೊಂಡು ಸಮಾಲೋಚನೆ ನಡೆಯಿತು.

ಕತ್ತಲಾಗುತ್ತಲೆ ರೈತರೂ ಅಲ್ಲಲ್ಲಿ ಗುಂಪು ಕೂಡಿದರು. ಮುಂದೇನು ಮಾಡಬೇಕು? ಇದೇ ಸರಿಯಾದ ಮಾರ್ಗ ಎನ್ನುವವರು ಅಲ್ಲಿರಲಿಲ್ಲ. ಅವರು ಪರಸ್ಪರರಿಗೆ ನೀಡಿದುದೊಂದೇ, ಭೀತಿಯ ಸಂದೇಶ. ನಾಳೆ ನಮ್ಮನ್ನೆಲ್ಲ

ಹಿಡಿಯಬಹುದು, ಗುಡಿಸಲುಗಳಿಗೆ ಬೆಂಕಿ ಇಡಬಹುದು, ಹೆಂಗಸರ ಮೇಲೆ ಅತ್ಯಾಚಾರ ನಡೆಸಬಹುದು.... ಎಲ್ಲರೂ ಓಡಿ ಹೋಗೋಣವೇ? ಊರು ಬಿಟ್ಟು ಓಡೋಣವೆ? ಹಾದಿಗಳಲ್ಲಿನ್ನೂ ಪೋಲೀಸರ ಕಾವಲಿದೆ....

ತುಟಿಯೊಣಗಿ ಗಂಟಲು ಆರಿ ಸ್ವರ ಹೊರಡದೆ ಮೈ ನಡುಗಿದ ಆ ಪರಿಸ್ಥಿತಿಯಲ್ಲಿ ಅಪ್ಪು ಕಾಣಿಸಿಕೊಂಡ ! ಆ ಬಳಿಕ ಅಬೂಬಕರ್!

—"ಅಪ್ಪು! ಎಲ್ಲಿಂದ ಬಂದೆ?"

—"ಅಪ್ಪು! ಹೀಗಾಯ್ತಲ್ಲ ನಮ್ಮ ಗತಿ!"

—"ಇದಕ್ಕೆಲ್ಲಾ ಈ ಅಬೂಬಕರೇ ಕಾರಣ."

ಆ ದಿನವೆಲ್ಲ ಏನು ನಡೆಯಿತೆಂಬುದನ್ನು ಅಪ್ಪು ಕೇಳಿ ತಿಳಿದ. ಹಡಗು ಮುಳುಗುತ್ತಿತ್ತು. ಕಪ್ತಾನನಿಗೆ ಕೇಳಿಸಿದುದೊಂದೇ. ಪ್ರಯಾಣಿಕರ ಆಕ್ರಂದನ-ಭಯದ ನುಡಿ: "ಹೆಂಗಸರ ಮೇಲೆ ಅತ್ಯಾಚಾರವಾಗಬಹುದು!" ಕಪ್ತಾನಾಜ್ಞೆಯೆಂಬಂತೆ ಅಪ್ಪುವೆಂದ:

"ಹುಡುಗೀರು, ಕೈಗೂಸುಗಳು, ಯುವತೀರ್‍ನ ಹಳ್ಳಿಯಿಂದ ಹೊರಗ ಸಾಗಿಸ್ಬೇಕು—ಈಗಿಂದೀಗ!"

"ಹ್ಯಾಗ? ಎಲ್ಲಿಗೆ? ಕಾವಲಿದೆ!"

"ಇರಲಿ! ನದಿ ಇಲ್ವ? ದೋಣಿಗಳಿಲ್ವ? ಆಚೇ ದಡಕ್ಕೆ ಹೋಗಿ ಬೆಳಗಾಗೋದರೊಳಗೆ ಅಲ್ಲಿಂದ ಚೆದರಿದರಾಯ್ತು. ಕೆಲವು ಜನ ಗಂಡಸರೂ ಜತೇಲಿ ಬರ್‍ಲಿ. ಹುಂ ! ಏಳಿ !"

ರೈತರು ಎದ್ದರು. ಮಗುವನ್ನೆತ್ತಿಕೊಂಡ ಜಾನಕಿ, ಚಿರುಕಂಡನ ಹೆಂಡತಿ, ದೇವಕಿ, ತವರುಮನೆಗೆ ಬಂದಿದ್ದ ಕೃಷ್ಣನ್ ನಾಯರನ ಸೊಸೆ, ಕುಂಞಂಬುವಿನ ಹೆಂಡತಿ ಶ್ರೀದೇವಿಯಮ್ಮ, ಇನ್ನೂ ಮೂವತ್ತು ನಾಲ್ವತ್ತು ಜನ.... ಕತ್ತಲೆಯ ಮುಸುಕಿನಲ್ಲಿ ಇರುವೆಗಳ ಹಾಗೆ ಇವರು ನದಿಯ ದಡ ಸೇರಿದರು. ಕಯ್ಯೂರಿನ ಬಲಿಷ್ಠ ಬಾಹುಗಳು ದೊರೆತ ಒಂದು ದೋಣಿಗೆ ಹುಟ್ಟುಹಾಕಿದವು; ಚುಕ್ಕಾಣಿ ತಿರುವಿದುವು. ಮೌನವಾಗಿದ್ದ ನದಿಯ ಎದೆಯನ್ನು ಸೀಳಿ ದೋಣಿ ಎರಡು ಸಾರೆ ಆ ದಡಕ್ಕೆ ಹೋಗಿ ಬಂತು. ಅಷ್ಟು ಜನ ಹೆಂಗಸರೂ ಬೆಂಗಾವಲಿಗೆ ಕೆಲ ಗಂಡಸರೂ ಪಾರಾದರು. ಅಲ್ಲಿದ್ದ ಗಂಡಸರಿಗೆ ಅಪ್ಪುವೆಂದ:

"ನಾಳೆ ಇಲ್ಲಿ ನಡೆಯೋದು ದಬ್ಬಾಳಿಕೆ ರಾಜ್ಯ! ಸೋತ ಜನದ ಎದೆಯ ಮೇಲೆ ಪಿಶಾಚಿ ನೃತ್ಯ!.... ಆದರೂ ಎಲ್ಲರೂ ಒಂದೇ ತುತ್ತಿಗೆ ಬಲಿ ಬೀಳೋದು ಸರಿಯಲ್ಲ. ನನ್ನ ಜತೆ ಕಾಡಿಗೆ ಬರುವವರು ಬನ್ನಿ. ನಾಳೆ ರಾತ್ರಿ ಹಿಂತಿರುಗುವಿರಂತೆ."

ಆ ಮಾತಿನಂತೆಯೆ ಹಲವರು ಅವನನ್ನು ಹಿಂಬಾಲಿಸಿದರು. ಉಳಿದವರು ಹಳ್ಳಿ ಸೇರಿದರು.

....ಸುಳ್ಳಾಗಿರಲಿಲ್ಲ ಅಪ್ಪು ನುಡಿದ ಮಾತು. ಬೆಳಗು ಮುಂಜಾನೆ ಸಶಸ್ತ್ರ ದಳದವರು ಪ್ರಭಾತಫೇರಿ ನಡೆಸಿದರು; ಲೆಫ್ಟ್-ರೈಟ್, ಲೆಫ್ಟ್-ರೈಟ್; ಅಬೌಟ್ಟರ್ನ್!

ಆ ಬಳಿಕ ನಂಬಿಯಾರರ ಸೇವಕರು ಸಿದ್ಧಗೊಳಿಸಿದ ಉಪಾಹಾರ ಸ್ವೀಕಾರ. ಆದಾದ ಮೇಲೆ ತಂಡತಂಡಗಳಾಗಿ ಚೆದರಿ, ಬೇಟೆ—ನರಬೇಟೆ. ಅವರು ಗುಡಿಸಲುಗಳನ್ನು ಹೊಕ್ಕರು. ಹುಡುಗಿಯರಿಗಾಗಿ ಹುಡುಕಿ ನಿರಾಶರಾಗಿ "ಮುಖಂಡರಿಲ್ಲ" ಎನ್ನುತ್ತ ಹೊರಬಂದರು. ಪುಡಿಕಾಸುಗಳನ್ನು ದೋಚಿದರು. ಮಡಿಕೆ ಕುಡಿಕೆಗಳನ್ನೊಡೆದರು. ಬಡ ಗಂಡಸರ ಎದೆಗೆ ಬಂದೂಕಿನ ಹಿಂಬದಿಯಿಂದ ಹೊಡೆದರು. ಮುದುಕಿಯರ ತಲೆ ಕೂದಲು ಹಿಡಿದೆಳೆದು, ಅವರು ರೋದಿಸಿದಾಗ ಅಬ್ಬರಿಸುತ್ತ ನಕ್ಕರು; ನಗುತ್ತ ಅಬ್ಬರಿಸಿದರು. ಮಧ್ಯಾಹ್ನದ ಹೊತ್ತಿಗೆ ಗಟ್ಟಿಮುಟ್ಟಾಗಿದ್ದ ನೂರು ನೂರೈವತ್ತು ಜನರನ್ನು ಹಿಡಿದು ತಂದರು. ಅವರನ್ನು ಪೋಲೀಸರ ಕಾವಲಿಗೊಪ್ಪಿಸಿ ಸಶಸ್ತ್ರದಳದವರು ಭೂರಿಭೋಜನಕ್ಕೆ ಕುಳಿತರು.

ಊಟವಾದ ಮೇಲೆ ಶುರುವಾಯಿತು ಮಾತು:

—"ಹೆಂಗಸರ್ನ ಎಲ್ಲಿ ಬಚ್ಚಿಟ್ಟಿದ್ದೀರಿ?"

—"ಓಡಿಹೋದ ಗಂಡಸರು ಎಷ್ಟು ಜನ?"

—"ಸಾಮ್ರಾಜ್ಯಶಾಹಿ ನಾಶವಾಗಲೀಂತ ಈಗ ಹೇಳಿ ನೋಡೋಣ!"

—"ಪೋಲೀಸರ ಮೈ ಮುಟ್ಟಿದರೆ ಏನಗ್ತದೇಂತ ಗೊತ್ತಾಯ್ತೊ?"

ಏಟುಗಳು ಬಿದ್ದುವು. ಅವಾಚ್ಯ ಬೈಗಳು ಏಟಿಗಿಂತಲೂ ಹೆಚ್ಚು ನೋವುಂಟುಮಾಡಿದುವು. ಸಶಸ್ತ್ರ ದಳದವರು ಆ ಗುಂಪಿನಿಂದ ಮೂವತ್ತು ರೈತರನ್ನು ಆರಿಸಿದರು. ಆ ರೈತರಲ್ಲಿ ಚಿರುಕಂಡನ ತಂದೆಯೂ ಒಬ್ಬ. ಕುಂಞಂಬುವಿನ ಅಣ್ಣನೊಬ್ಬ. ಅವರೆಲ್ಲರನ್ನೂ ಸಂಘದ ಕಛೇರಿಯೊಳಕ್ಕೆ ತಳ್ಳಿ, ಅದನ್ನ ಕೂಡುದೊಡ್ಡಿಯಾಗಿ ಮಾಡಿದರು. ಬಳಿಕ ಹಳ್ಳಿಯ ಸುತ್ತಲೂ ದಳದವರು ಕಾವಲುನಿಂತರು.

ಆ ಸರ್ಪಗಾವಲನ್ನೂ ಭೇದಿಸಿ ಇಬ್ಬರು ಸ್ವಯಂಸೇವಕರು ಹಳ್ಳಿಗೆ ಆ ರಾತ್ರಿ ಬಂದು, ವಿಷಯ ತಿಳಿದು, ಹಿಂತಿರುಗದೆ ಇರಲಿಲ್ಲ.

ಮಾರನೆಯ ಬೆಳಗ್ಗೆ ಮತ್ತೆ ತುತ್ತೂರಿ; ಲೆಫ್ಟ್-ರೈಟ್, ಲೆಫ್ಟ್-ರೈಟ್, ಅಬೌಟ್ಟರ್ನ್!....

ಸಶಸ್ತ್ರದಳದವರು ದಸ್ತಗಿರಿ ಮಾಡಿದ ಮೂವತ್ತು ಜನರನ್ನು ಪೋಲೀಸರ ವಶಕ್ಕೆ ಕೊಟ್ಟು, ಹೊಸದುರ್ಗಕ್ಕೆ ಕಳುಹಲು ಅಧಿಕಾರಗಳು ತೀರ್ಮಾನಿಸಿದರು. ವಿಜೃಂಭಣೆಯಿಂದಲೆ ನಡೆಯಿತು ಬೀಳ್ಕೊಡುಗೆ. ಕೈದಿಗಳನ್ನು ಹೊರಗೆ ನಿಲ್ಲಿಸಿ, ಸಂಘದ ಛಾವಣಿಗೆ ಸೈನಿಕರು ಬೆಂಕಿ ಕೊಟ್ಟರು. ಉರಿ ಆಕಾಶವೇರುತ್ತಿದ್ದಾಗ ಅಧಿಕಾರಿಯ ಅನುಜ್ಞೆಯಂತೆ "ಸಂಘ ನಾಶವಾಗಲಿ! ಬ್ರಿಟಿಷ್ ಸರಕಾರಕ್ಕೆ ಜಯವಾಗಲಿ! ಜಮೀನ್ದಾರರು ನೂರು ವರ್ಷ ಬಾಳಲಿ!" ಎಂದು ನಂಬಿಯಾರರ ಸೇವಕರು ಕೂಗಿದರು. ಬಳಿಕ ದಿನವೆಲ್ಲ ಉಪವಾಸ ಇದ್ದು ರಾತ್ರಿ ನಿದ್ದೆಗೆಟ್ಟಿದ್ದ ಬಂಧಿತರನ್ನು ಚೆರ್ವತ್ತೂರು ನಿಲ್ದಾಣಕ್ಕೆ ಪೋಲೀಸರು ನಡೆಸಿದರು.

ಈ ಬೀಳ್ಕೊಡುಗೆಯ ಬಳಿಕ ಮತ್ತೆ ಬೇಟೆ. ಏನೂ ಸಿಗದೆ ಹೋದಾಗ, ಒಬ್ಬೊಬ್ಬರನ್ನೇ ಕರೆಸಿ ಚತುರನಾದ ಪೋಲೀಸ್ ಅಧಿಕಾರಿಯಿಂದ ವಿಚಾರಣೆ.

ಕಯ್ಯೂರು ಶಾಲೆಯ ಹೊಸ ಮಾಸ್ತರು ಅವರೆದುರು ಕೈಕಟ್ಟಿ ನಿಲ್ಲಬೇಕಾಯಿತು. ಸ್ವತಃ ನಂಬಿಯಾರರೇ ಓಡಿ ಬಂದು, "ಈತ ನಮ್ಮವನು" ಎಂದು ಹೇಳಿದುದರಿಂದ ಆ ಉಪಾಧ್ಯಾಯನಿಗೆ ಹೊಡೆತ ತಪ್ಪಿತು.

ಆದರೂ ಅಧಿಕಾರಿ ಕೇಳಿದ:

"ಈತ ಕ್ರಾಂತಿಕಾರನಲ್ಲ ಅನ್ನೋದು ಖಂಡಿತವೋ?"

"ನಾನು ಭರವಸೆ ಕೊಡ್ತೇನೆ" ಎಂದರು ನಂಬಿಯಾರರು.

ಅಧಿಕಾರಿ ಉಪಾಧ್ಯಾಯನನ್ನು ಪ್ರಶ್ನಿಸಿದ :

"ಏನಯ್ಯಾ, ಇವತ್ತು ಶಾಲೆ ಯಾಕೆ ನಡೆಸ್ಬಾರ್ದು?"

ನಡುಗುತ್ತಿದ್ದವನಿಂದ ತೊದಲು ಉತ್ತರ ಬಂತು.

"ಹುಡುಗರಿಲ್ಲ ಸರ್."

"ಹುಡುಗರಿಲ್ಲದಿದ್ದರೂ ಶಾಲೆ ನಡೆಸ್ಬೇಕು!"

"ಆಗಲಿ ಸರ್."

"ಪರೀಕ್ಷೆ ಹತ್ತಿರ ಬಂತು, ಏನ್ಮಾಡ್ತೀಯಾ ?"

"ಹುಡುಗರು—"

"ಹುಡುಗರ್ನ ಕೂಡಿಸ್ಕೊಂಡು ಬಂದು ಪರೀಕ್ಷೆ ನಡೆಸ್ಬೇಕು."

"ಆಗಲಿ—ಆಗಲಿ ಸರ್."

"ಹೂಂ. ಹೋಗು!"

ಬದುಕಿದೆನೆಂದು ಆತ ತಿರುಗಿದೊಡನೆ ಅಧಿಕಾರಿ ಪುನಃ ಕರೆದ:

"ಎಲ್ಲಿ ಹೇಳು—ಲಾಂಗ್ ಲಿವ್ ದಿ ಕಿಂಗ್!"

"ಲಾಂಗ್ ಲಿವ್ ದಿ ಕಿಂಗ್."

ಉಪಾಧ್ಯಾಯರು ಪಾಠ ಒಪ್ಪಿಸಿದರು.

"ಇನ್ನು ಹೊರಡು!"

ಬೇರೆಯವರಿಗೆ ಬೇರೆ ರೀತಿಯ ಪ್ರಶ್ನೆ. ಹೆಂಗಸರೆಲ್ಲಿ ಮಾಯವಾದರು? ಎಂದು ಗುಡುಗು. ತಲೆ ತಪ್ಪಿಸಿಕೊಂಡಿದ್ದ ಮುಂಡೆಲಗಂಡರಿಗಾಗಿ ಗರ್ಜನೆ.

"ಅಪ್ಪು—ಅಬೂಬಕರ್.... ಎಂಥ ಶಿಕ್ಷೆಕೊಟ್ಟರೂ ಸಾಲದು ಅವರಿಬ್ಬರಿಗೆ!"

ಮತ್ತೊಂದು ದಿನ ಕಳೆಯಿತು. ಬೇಟೆಯ ರೀತಿಯೂ ಬದಲಾಯಿತು. ಸಶಸ್ತ್ರ ದಳದವರು, ನಂಬಿಯಾರರ ಸೇವಕರು ತೋರಿಸಿಕೊಟ್ಟ ಕೆಲವು ಗುಡಿಸಲುಗಳನ್ನು ಸುಟ್ಟು ಹೋಳಿ ಮಾಡಿದರು. ಒಂದೆಡೆ, ಕಾಯಿಲೆಬಿದ್ದು ಓಡಿ ಹೋಗಲಾರದೆ ಉಳಿದಿದ್ದ ಹೆಂಗಸೊಬ್ಬಳ ಮೇಲೆ ನಾಲ್ಕಾರು ಜನ ಸೈನಿಕರಿಂದ ಅತ್ಯಾಚಾರ ನಡೆಯಿತು. ತಮ್ಮನ್ನು ನೋಡಿ ಹತ್ತಿರ ಬಂದು ಬೊಗಳಿತೆಂದು ಒಂದು ನಾಯಿಯನ್ನು ಅವರು ಕೊಂದರು.

ಹಳ್ಳಿಯ ಹೊರ ವಲಯದಲ್ಲೇ ನಿಂತಿದ್ದ ಹಲವಾರು ಜನ ಹಸಿವನ್ನು ತಾಳಲಾರದೆಹೋದರು. ಗುಡಿಸಲುಗಳಿಂದ ಕಂಡು ಬಂದ ಬೆಂಕಿಯಂತೂ ಅವರನ್ನು ಅಪಾರ ಕಳವಳಕ್ಕೆ ಗುರಿಮಾಡಿತು. ಆ ಕಂಗಾಲ ಪರಿಸ್ಥಿತಿಯಲ್ಲಿ ಅಪ್ಪುವೆಂದ:

"ನೀವು ಹೋಗಿ ಸಂಗಾತಿಗಳೇ!" ಇಲ್ಲಿದ್ದು ಏನೂ ಗೊತ್ತಾಗದೆ ಸಂಕಟ ಪಡೋದಕ್ಕಿಂತ ಹಳ್ಳೀಲೇ ನೀವಿರೋದು ಮೇಲು."

ಕೆಲವರೆಂದರು:

"ನೀವೂ ಬಂದ್ಬಿಡಿ ಅಪ್ಪು. ಅಷ್ಟು ಜನರನ್ನು ಹಿಡ್ಕೊಂಡು ಹೋಗಿದ್ದಾರೆ. ಅವರ ಜತೇಲಿ ನಾವೂ."

"ಇಲ್ಲ. ನಾನು ಮತ್ತು ಅಬೂಬಕರ್ ಇನ್ನೂ ಸ್ವಲ್ಪ ದಿವಸ ಹೊರಗಿರ್ತೇವೆ. ಪಂಡಿತರು-ಮಾಸ್ತರು ಯಾರನ್ನಾದರೂ ನೋಡೋದಕ್ಕೆ ಪ್ರಯತ್ನ ಪಡ್ತೇವೆ."

"ಆಗಲಿ—ಹಾಗೇ ಮಾಡಿ."

ಆ ಇಬ್ಬರನ್ನುಳಿದು ರೈತರೆಲ್ಲ ಹಳ್ಳಿಗೆ ಮರಳಿ ನುಸುಳಿದರು.

ಬೇರೊಂದು ದಿನದ ಬೇಟೆಯಲ್ಲಿ, ಮತ್ತೆ ಹದಿನೈದು ಜನ ರೈತರ ಬಂಧನವಾಯಿತು. ಅಷ್ಟು ಜನ, ಅಪ್ಪು-ಅಬೂಬಕರರ ಸಂಗಡಿಗರೆಂದು ಅತ್ಯಧಿಕ ಹಿಂಸೆಗೆ ಗುರಿಯಾದರು. ಆದರೆ ಅವರಿಂದಲೂ ಅಧಿಕಾರಿಗಳಿಗೆ ಬೇಕಾದ ವಾರ್ತೆ ಸಿಗಲಿಲ್ಲ.

'ಅಪ್ಪು-ಅಬೂಬಕರರನ್ನು ಹಿಡಿದುಕೊಟ್ಟವರಿಗೆ ಭಾರಿ ಬಹುಮಾನ ಎಂದು

ಹಳ್ಳಿಯಲ್ಲೆಲ್ಲ ಅಧಿಕಾರಿಗಳು ಡಂಗುರ ಸಾರಿಸಿದರು.

ಆದರೂ ಆ ಇಬ್ಬರ ಪತ್ತೆ ಇಲ್ಲದೆಯೇ ದಿನಗಳು ಕಳೆದುವು.........

ಅಂತೂ ಯುದ್ಧ ಬಂದಿತ್ತು ಕಯ್ಯೂರಿಗೆ. ತಾವು ಗೆದ್ದ ಹಳ್ಳಿಯಲ್ಲಿ ಸಶಸ್ತ್ರದಳದವರು, ವಿಜೇತ ಸೈನಿಕರಂತೆ ವರ್ತಿಸಿದರು. ಅವರನ್ನು ತೃಪ್ತಿಪಡಿಸುವುದು ಸಾಮಾನ್ಯ ವೆಚ್ಚದ ಮಾತಲ್ಲವೆಂಬುದು ನಂಬಿಯಾರರಿಗೆ ಬೇಗನೆ ಮನದಟ್ಟಾಯಿತು. ಮರಳಿ ದೊರೆತ ಗದ್ದುಗೆಗಾಗಿ ಅವರು ತೆರುತ್ತಿದ್ದ ಬೆಲೆ ಅಪಾರ. ಇದಕ್ಕೂ ಒಂದು ಮಿತಿ ಇರಬೇಕು ಎಂದು ರೋದಿಸಿತು ಅವರ ಮನಸ್ಸು. ಇದಕ್ಕೆ ಮುಖ್ಯ ಕಾರಣ—ಸಶಸ್ತ್ರ ದಳದ ಅಧಿಕಾರಿ ಜಮೀನ್ದಾರರ ಅಂತಃಪುರದತ್ತ ನೋಟ ಬೀರಿದ್ದು. ಹಳ್ಳಿ ಬರಡಾಗಿತ್ತೆಂದು, ತಮ್ಮ ಮೆಚ್ಚುಗೆಯ ಒಬ್ಬಳನ್ನು ಅವರು ಅಧಿಕಾರಗೋಸ್ಕರ ಬಿಟ್ಟುಕೊಡಬೇಕಾಯಿತು. ಆ ನಷ್ಟವನ್ನು ಬಲು ಸಂಕಟದಿಂದ ಅವರು ಅನುಭವಿಸಿದರು. ರಾಜ್ಯವನ್ನು ಸದ್ಯಃ ತಮ್ಮ ವಶಕೊಟ್ಟು ಇವರೊಮ್ಮೆ ಹೊರಡಬಾರದೆ ಎಂದು ಗೊಣಗಿದರು.

ಆದರೆ ಸೈನಿಕರು ಹೊರಡುವ ಸ್ಥಿತಿಯಲ್ಲಿರಲಿಲ್ಲ. ಊಟ ಉಪಾಹಾರ ಬಡವಾಗಬಾರದೆಂದು, ಹಳ್ಳಿಯಲ್ಲಿ ಸಿಕ್ಕಿದ ಕೋಳಿಗಳನ್ನೂ ಆಡುಗಳನ್ನೂ ಹಂದಿಗಳನ್ನೂ ಅವರು ಹಿಡಿದು ತಂದರು. ಅಕ್ಕಿಯನ್ನು ಶಿಬಿರಕ್ಕೆ ಸಾಗಿಸಿದರು. ಬಾಳೆಯ ಗೊನೆಗಳನ್ನು ಕಡಿದರು. ಮರಗಳ ಮೇಲೆ ಇನ್ನೂ ಉಳಿದಿದ್ದ ಹಣ್ಣು ಹಂಪಲುಗಳನ್ನು ಸೂರೆ ಮಾಡಿದರು.

ತೇಜಸ್ವಿನಿ ನದಿ ಅವರ ಜಲಕೇಳಿಯಿಂದ ಬೇಸತ್ತಿತು............

........... ಮುಂದಿನ ಕಾರ್ಯಕ್ರಮವೇನೆಂದು ಸಶಸ್ತ್ರ ದಳದ ಅಧಿಕಾರಿಯನ್ನು ಕೇಳಲು ಹೊರಟ ನಂಬಿಯಾರರು, ಪ್ರಶ್ನೆಯನ್ನು ಉಚ್ಚರಿಸಲು ಧೈರ್ಯಬಾರದೆ "ಆ ನಾಯಿಗಳೆರಡು ಸಿಗಲೇ ಇಲ್ಲ" ಎಂದರು.

'ನೋಡೋಣ. ಎಷ್ಟು ದಿವಸ ತಪ್ಪಿಸ್ಕೊಳ್ತಾರೇಂತ. ನಾವೇನು ಅವರನ್ನು ಹಿಡೀದೆ ಇಲ್ಲಿಂದ ಹೊರಡೋದಿಲ್ಲ."

ತಮ್ಮ ಸಂಕಟದ ಕಾಲ ಇನ್ನೂ ಲಂಬಿಸುವ ಸೂಚನೆ ಕಂಡು ನಂಬಿಯಾರರು ತಣ್ಣಗಾದರು. ಬಂದವರಿಗೆ ಸಿಗರೇಟು ಕೊಟ್ಟುಕೊಟ್ಟು ಸಾಕಾಗಿ, ಸ್ವತಃ ತಾವು ಸೇದುವುದನ್ನೇ ನಿಲ್ಲಿಸಿಬಿಟ್ಟಿದ್ದರು ಜಮೀನ್ದಾರರು. ಸುಮ್ಮನೆ ಕುಳಿತು ಯೋಚಿಸಿ ಯೋಚಿಸಿ ಅವರೆಂದರು:

"ಅವರಿಬ್ಬರೂ ಬೇರೆ ಊರಿಗೆ ಓಡಿ ಹೋಗಿದ್ದರೂ ಹೋಗಿರಬಹುದು."

ಕುಡಿದುದು ಸ್ವಲ್ಪ ಜಾಸ್ತಿಯಾಗಿ ಮತ್ತೇರಿದ್ದ ಆ ಅಧಿಕಾರಯೆಂದ :

"ನೀನ್ಯಾಕಪ್ಪ ಹೆದರ್‍ತಿಯಾ? ನಾವಿಷ್ಟು ಜನ ಇರುವಾಗ ಯಾಕಪ್ಪ ಹೆದರ್‍ಕೆ?"

ತಮ್ಮ ಮಾನ ಏಕವಚನದ ಮಟ್ಟಕ್ಕಿಳಿಯಿತಲ್ಲ ಎಂದು ನಂಬಿಯಾರರು ಉಗುಳು ನುಂಗಿ, ತಣ್ಣಗಾದರು.

ಅತಿಥಿಸತ್ಕಾರ ಮಾಡಿ ಬಳಲಿದ ಜಮೀನ್ದಾರರ ಗೋಳು ನೋಡಿ ಮುಗುಳು ನಕ್ಕು, ಸಶಸ್ತ್ರ ದಳದವರಿಗಿಂತ ತಾನು ಮೇಲೆಂದು ತೋರಿಸಿಕೊಳ್ಳುತ್ತ, ಪೋಲೀಸ್ ಅಧಿಕಾರಿಯೆಂದ:

"ನಾನೇನೋ ನಾಳೆ ಹೊರಡ್ತೇನೆ. ಮುಂದಿನ ಕೆಲಸಕ್ಕೆ ಏರ್ಪಾಟು ಮಾಡ್ಬೇಕು. ಅಂತೂ ನಿಮಗೆ ಸ್ವಲ್ಪ ಭಾರ ಕಡಿಮೆಯಾಗ್ತದೆ."

ನಗಬೇಕೆಂದು ನಂಬಿಯಾರರು ಯತ್ನಿಸಿದರು; ಆದರೆ ಅದರ ಬದಲು ಅಳು ಬಂತು.

"ಆ ನಂಬೂದಿರಿ ನೋಡಿ. ಬರಲೇ ಇಲ್ಲ. ನೀಲೇಶ್ವರದಲ್ಲೇ ಇದ್ದಾನೆ" ಎಂದು ತನ್ನ ವ್ಯವಸಾಯ ಬಂಧುವನ್ನು ಅವರು ಜರೆದರು. ಬಂದವರನ್ನು ನೋಡಿಕೊಳ್ಳುವ ಜವಾಬ್ದಾರಿಯಿಂದ ನಂಬೂದಿರಿ ನುಣುಚಿಕೊಂಡನೆಂದು ನಂಬಿಯಾರರಿಗೆ ಬ್ರಹ್ಮಾಂಡ ಕೋಪ ಬಂದಿತ್ತು.

ಪೋಲೀಸ್ ಅಧಿಕಾರಿ ಸ್ವಲ್ಪ ತಗ್ಗಿಸಿ ಅಂದ:

"ಏನಿದ್ದರೂ ಮಳೆಗಾಲದವರೆಗೆ. ಮಳೆ ಬಂದ ಮೇಲೆ ಸಶಸ್ತ್ರದಳ ಇಲ್ಲಿ ಇರೋದಕ್ಕಾಗೋದಿಲ್ಲ."

ಆದರೆ, ಮುಂಗಾರು ಮಳೆ ಬರಲು ದೀರ್ಘವಾದೊಂದು ತಿಂಗಳಿತ್ತು ಇನ್ನೂ. ನಂಬಿಯಾರರು ಮನೆಯಿಂದ ಹೊರಬಿದ್ದಾಗಲೆಲ್ಲ ಕರಿ ಮೋಡ ಕಾಣಿಸುವುದೇನೋ ಎಂದು ಪಶ್ಚಿಮದತ್ತ ನೋಡಿದರು.

೩

ಮೈಯೆಲ್ಲ ಕಣ್ಣಾಗಿ, ಎದುರು ಬಂದ ಅಪರಿಚಿತರೆಲ್ಲ ಗೂಢಚಾರರೇ ಎಂದು ಸಂಶಯಪಡುತ್ತ, ಹಗಲು ಗುಡ್ಡಕಾಡುಗಳ ಹಾದಿಯೂ ರಾತ್ರೆ ರಾಜಮಾರ್ಗದ ಮೇಲೂ ನಡೆಯುತ್ತ, ಅಪ್ಪು ಮತ್ತು ಅಬೂಬಕರ್ ತಲಚೇರಿ ಸೇರಿದರು. ಅದು ಅಬೂಬಕರ್ ಕೂಲಿಕಾರ ಚಳವಳಿಯ ಯೋಧನಾಗಿ ರೂಪುಗೊಂಡಿದ್ದ ಊರು. ಕತ್ತಲಾಗುವವರೆಗೂ ಕಾದಿದ್ದು, ಬಳಿಕ ರಾತ್ರೆ ಶಾಲೆಗೆ ಅವರು ಸುದ್ದಿ ಕಳುಹಿದರು. ಅಲ್ಲಿಂದ ಅಬೂಬಕರನ ಜತೆಗಾರನಾಗಿದ್ದವನೊಬ್ಬ ಬಂದ. ಪತ್ರಿಕೆಗಳ ಮೂಲಕ ಆಗಲೇ ಎಲ್ಲವನ್ನೂ ತಿಳಿದಿದ್ದ ಆತನಿಗೆ ಏನನ್ನೂ ವಿವರಿಸಬೇಕಾದುದಿರಲಿಲ್ಲ.

ಬಳಲಿಕೆಯಿಂದ ಬತ್ತಿಹೋಗಿದ್ದ ಮುಖಗಳು ಅವರು ಬಂದ ರೀತಿ ಎಂಥದೆಂಬುದನ್ನು ಸಾರಿ ಹೇಳಿದವು.

"ನಾವು ಮಾಸ್ತರನ್ನು ಈಗ್ಲೇ ನೋಡಬೇಕಾಗಿದೆ" ಎಂದು ಅಪ್ಪು.

ನೀನು ಯಾರು?— ಎಂದು ಆತ ಕೇಳಲಿಲ್ಲ. ತಲೆಯಾಲ್ಲಾಡಿಸಿ ಆತನೆಂದ:

"ನೀವು ಬಂದದ್ದು ಒಂದು ದಿನ ತಡವಾಯಿತು. ನಿನ್ನೆಯೇ ಮಾಸ್ತರು ಇಲ್ಲಿಂದ ಹೋದ್ರು."

"ಎಲ್ಲಿಗೆ?"

ಹೇಳಬೇಕೋ ಬೇಡವೋ ಎಂದು ಅರೆಕ್ಷಣ ಸುಮ್ಮನಿದ್ದು ಆತ ಉತ್ತರವಿತ್ತ:

"ಭೂಗತರಾದ್ರು. ನಿಮ್ಮೂರಿನ ಗಲಾಟೆಗೆ ಸಂಬಂಧಿಸಿಯೇ ಅವರ ಮೇಲೆ ವಾರಂಟು ಹೊರಟದೇಂತ ತೋರ್‍ತ್ತದೆ."

ಅಪ್ಪು ನೆಲ ನೋಡಿ ತಲೆ ಎತ್ತಿದ.

"ಅವರು ನಮಗೆ ಸಿಗೋದು ಸಾಧ್ಯವೇ ಇಲ್ಲ ಅಂತೀರಾ?"

"ಅವರು ಈ ಊರಲ್ಲಿಲ್ಲ. ನಿಮ್ಮ ಕಡೆಗೆ ಹೋಗಿರ್ತಾರೆ."

ಧೃಢವಾದ ಧ್ವನಿಯಲ್ಲಿ ಉತ್ತರ ಬಂತು:

"ಇಲ್ಲ, ಈಗ ಊರಲ್ಲಿ ಯಾರೂ ಇಲ್ಲ ಸಂಗಾತಿ."

ಅಪ್ಪು ಅಬೂಬಕರನತ್ತ ನೋಡಿ ಹೇಳಿದ.

"ಹಾಗಾದರೆ ಇಲ್ಲೇನೂ ನಮಗಿನ್ನು ಕೆಲಸವಿಲ್ಲ ಹೊರಡೋಣ."

ಅಬೂಬಕರನ ಸ್ನೇಹಿತನೆಂದ :

"ರಕ್ಷಣೆ ಬೇಕಾದರೆ ಹೇಳಿ. ನೀವಿಬ್ಬರೂ ಇರೋದಕ್ಕೆ ಏರ್ಪಾಟು ಮಾಡ್ತೇವೆ."

ಅಪ್ಪು ಕೊಟ್ಟುದು ನಿರ್ಧಾರದ ಉತ್ತರ :

"ಇಲ್ಲ, ನಾವು ಊರಿಗೆ ಹೋಗ್ಬೇಕು."

ಹಾಗೆ ಹೇಳಿದೊಡನೆಯೇ ಏನೋ ಯೋಚಿಸಿ ಆತ ಅಬೂಬಕರನತ್ತ ತಿರುಗಿ ಹೇಳಿದ:

"ನೀನು ಬೇಕಾದರೆ ಇಲ್ಲಿರು, ಸಂಗಾತಿ."

ಆ ಯೋಚನೆಯ ಅಗತ್ಯವೇ ಇಲ್ಲವೆನ್ನುವಂತೆ ಅಬೂಬಕರ್ ತಕ್ಷಣ ಉತ್ತರವಿತ್ತ:

"ಇಲ್ಲ, ನಾನೂ ಜತೆಯಲ್ಲೇ ಬರ್‍ತೇನೆ. ನಡಿ."

......................

ಹಾದಿ ವೆಚ್ಚಕ್ಕೆಂದು ಸ್ವಲ್ಪ ಹಣ ಪಡೆದು ನಡುರಾತ್ರಿಯ ರೈಲಿನಲ್ಲಿ ಅವರು,

ಗುರುತು ಸಿಗದಹಾಗೆ ಮುಖ ಮರೆಸಿ ತ್ರಿಕರಪುರಕ್ಕೆ ಪ್ರಯಾಣ ಬೆಳಸಿದರು. ಅಲ್ಲಿ ನಿಲ್ದಾಣದ ಎದುರು ಮಗ್ಗುಲಿಂದಲೇ ಧುಮುಕಿ ಹಳ್ಳಿ ಸೇರಿದರು.

ಚಂದುವಿರಲಿಲ್ಲ. ಆತನನ್ನೂ ಆ ಊರಿನ ಇನ್ನೊಬ್ಬನನ್ನೂ ಬಂಧಿಸಿದ್ದರು. ಚಂದುವಿನ ತಂಗಿ—ಚಿರುಕಂಡನ ಹೆಂಡತಿ—ಆಗಲೇ ಅಲ್ಲಿಗೆ ಬಂದಿದ್ದಳು. ಹೊರಗೆ ಬೆಳಕು ಹರಿಯುತ್ತಿದ್ದುದನ್ನು ಕಂಡು ಆಕೆ ಅಂದಳು:

"ಒಳಗ್ಬನ್ನಿ. ಹಗಲು ಹೊತ್ತು ಗೂಢಚಾರರು ಇಲ್ಲಿ ಎದುರಿಗೆ ಕಾವಲಿರ್‍ತಾರೆ—ಯಾರಾದರೂ ಬರಬಹುದೂಂತ. ಇಲ್ಲಿ ಬೇರೆ ಯಾರದಾದರೂ ಮನೆ ನಿಮಗೆ ಗೊತ್ತಾ?"

ಅಪ್ಪೂವಿಗೆ ಗೊತ್ತಿರಲಿಲ್ಲ. ಆತ ಹೇಳಿದ:

"ಇಲ್ಲ. ನಿಮಗೆ ತೊಂದರೆಯಾಗದೇ ಇದ್ದರೆ ಹಗಲು ಇಲ್ಲೇ ಇರ್‍ತೇವೆ. ರಾತ್ರೆ ನಾವು ನೀಲೇಶ್ವರಕ್ಕೆ ಹೋಗ್ಬೇಕು."

ಚಂದುವಿನ ತಾಯಿಯೆಂದಳು:

"ನಮಗೆಂಥ ತೊಂದರೆ? ಚಂದು ಬೇರೆ ನೀವು ಬೇರೇನಾ? ನೀವೆಲ್ಲ ನನ್ನ ಮಕ್ಕಳೇ ಅಲ್ಲವಾ? ಇಲ್ಲಿದ್ದರೆ ಏನಾದರೂ ನಿಮಗೆ ಕೇಡು ತಟ್ಟೇತೇನೋ ಅಂತ ಮಗಳು ಹಾಗಂದ್ಳು."

ಆ ಸಂಭವವಿತ್ತು ನಿಜ. ಆದರೆ ಬೇರೆ ಸ್ಥಳವಿರಲಿಲ್ಲ. ಹೀಗಾಗಿ ಅಪ್ಪು ಅಬೂಬಕರ್ ಹಗಲು ಅಲ್ಲೇ ಉಳಿದರು. ಕಲ್ಲು ಮುಳ್ಳು ತಗಲಿ ಬೊಬ್ಬೆ ಎದ್ದು ಒಡೆದು, ಊದಿಕೊಂಡು ಉರಿಯುತ್ತಿದ್ದ ಪಾದಗಳನ್ನು ಬಿಸಿನೀರಲ್ಲಿ ತೊಳೆದು ಎಣ್ಣೆ ಸವರಿದರು. ಊಟಮಾಡಿ, ನಿದ್ದೆ ಹೋದರು. ಆ ದಿನವೆಲ್ಲ ಹೆಚ್ಚಾಗಿ ಬಾಗಿಲ ಬಳಿಯಲ್ಲೇ ಕುಳಿತ ಚಿರುಕಂಡನ ಹೆಂಡತಿಯೂ ಆಕೆಯ ತಮ್ಮನೂ ಅವರಿಗೆ ಕಾವಲಾದರು.

ಅಪ್ಪು ಎದ್ದೊಡನೆ ಏನೇನೋ ಪ್ರಶ್ನೆಗಳನ್ನು ಕೇಳಬೇಕೆನ್ನಿಸಿತ್ತು ಆಕೆಗೆ. ಎಷ್ಟು ಪ್ರಶ್ನೆಗಳು? ಒಂದು, ಎರಡು, ಮೂರು—ನೂರು. ಎಣಿಕೆಗೆ ಸಿಗದಷ್ಟು. ಆದರೆ, ಕತ್ತಲಾಯಿತೇನೋ ಎಂದು ಅಪ್ಪು ಗಾಬರಿಯಾಗಿ ಎದ್ದು ಕಣ್ಣುಹೊಸಕಿಕೊಂಡಾಗ, ಆಕೆ ಏನನ್ನೂ ಕೇಳಲಿಲ್ಲ.

ಹಿತ್ತಿಲಗಿಳಿದು, ಬೇಲಿ ಹಾರಿ, ಬೀದಿ ಸೇರಿ ಅವರು ಮತ್ತೆ ನಡೆದರು. ಕಾಲುಗಳು ಅವರನ್ನು ಹೊತ್ತು ಮುಂದೆ ಹೋದುವೋ ಅವರು ಕಾಲುಗಳನ್ನು ಎಳೆದು ಮುಂದಕ್ಕೆ ಒಯ್ದರೋ ಹೇಳುವುದು ಕಷ್ಟ.... ಚರ್ವತ್ತೂರು... ಮತ್ತೂ ಉತ್ತರಕ್ಕೆ ನಡೆದರೆ ನೀಲೇಶ್ವರ. ತೇಜಸ್ವಿನಿ ಅಡ್ಡವಾಗಿತ್ತು. ರೈಲು ಸೇತುವೆಯ ಮೇಲೆ ಕತ್ತಲಲ್ಲಿ

ಅರ್ಥಮಾಡಿಕೊಂಡಳು. "ಇವರಲ್ಲಿ ಒಬ್ಬನನ್ನು ಮೊದಲು ನೋಡಿದ್ದೇನೆ, ಇನ್ನೊಬ್ಬ ಹೊಸಬ" ಎನ್ನುತ್ತ, ಗಂಜಿಗೆ ನೀರಿಡಲು ಒಳಹೋದಳು.

"ಐದು ವರ್ಷಗಳಿಗೆ ಹಿಂದೆ ಈ ಮನೇಲೆ ಪಂಡಿತರನ್ನು ಕಂಡಿದ್ದೆ" ಎಂದ ಅಪ್ಪು. ಕ್ಷೀಣಸ್ವರದ ದೃಷ್ಟಿಗಳು ಪರಸ್ಪರರನ್ನು ನೋಡಿದುವು. ಪರಿಚಯದ ಮಾತಿನ ಅಗತ್ಯ ಯಾರಿಗೂ ತೋರಲಿಲ್ಲ. ಅವರು ಬೊಟ್ಟು ಮಾಡಿದ ಬೆಂಚಿನ ಮೇಲೆ ಕುಳಿತುಕೊಳ್ಳುತ್ತಾ ಅಪ್ಪು ಹೇಳಿದ:

"ಮಾಸ್ತರನ್ನು ನೋಡೋದಕ್ಕೇಂತ ನೀಲೇಶ್ವರಕ್ಕೆ ಬಂದೆವು."

"ಕಯ್ಯೂರಿನ ಪರಿಸ್ಥಿತಿ? ಎಷ್ಟು ದಿವಸವಾಯ್ತು ನೀವು ಊರು ಬಿಟ್ಟು?"

"ಘಟನೆಯಾದ ದಿನವೇ ನಾವು ಭೂಗತರಾದೆವು."

ಆ ಮಾತಿನಲ್ಲಿ ಆತ್ಮಾಭಿಮಾನ ಸೂಕ್ಷ್ಮವಾಗಿ ಬೆರೆತಿತ್ತು.

"ಅದು ಸರಿ. ಕಯ್ಯೂರಿನ ಸಂಪರ್ಕವಿಲ್ಲದೆ ಎಷ್ಟು ದಿವಸ ಆಯ್ತೂಂತ?"

"ನಾಲ್ಕು ದಿವಸ."

"ಹಾಗಾದರೆ ಕಯ್ಯೂರಿನ ಪರಿಸ್ಥಿತಿ ಕುರಿತು ನಿಮಗೆ ಹೇಳಬೇಕಾದ್ದು ನಾನು."

ಆ ಮಾತು ಅಪ್ಪು-ಅಬೂಬಕರ್ ಇಬ್ಬರನ್ನೂ ಗಾಬರಿಗೊಳಿಸಿತು. ಅಬೂಬಕರ್ ಕೇಳಿದ:

"ಏನು ಸುದ್ದಿ? ಕಯ್ಯೂರಿನಲ್ಲಿ ಏನಾಗಿದೆ?"

ಅವರು ಓದುತ್ತಿದ್ದ ಪುಸ್ತಕವನ್ನು ಮುಚ್ಚಿ, ಕುರ್ಚಿಯ ಬೆನ್ನಿಗೊರಗಿ ಎರಡೂ ಅಂಗೈಗಳನ್ನು ಜೋಡಿಸಿ, ನಿಧಾನವಾಗಿ ಮಾತನಾಡಿದರು. ಸಶಸ್ತ್ರ ದಳದವರು ಕಯ್ಯೂರಿನಲ್ಲಿ ನಡೆಸುತ್ತಿದ್ದ ದಬ್ಬಾಳಿಕೆಯ ಹೊಸಹೊಸ ಸ್ವರೂಪಗಳ ವಿವರ ಕೊಟ್ಟರು. ಉರಿಯುವ ಸಿಗರೇಟನ್ನು ಮೂಗಿಗೆ ತುರುಕುವುದು, ಉಗುರುಗಳಿಗೆ ಸೂಜಿ ಚುಚ್ಚುವುದು, ಕೈಕಾಲು ಬಿಗಿದು ಬಾಯಿಗೆ ಹೊಲಸನ್ನು ಸುರಿಯುವುದು...

"ಅಷ್ಟೊಂದು ಜನ ಹೆಂಗಸರನ್ನ ನೀವು ಹೊರಕ್ಕೆ ದಾಟಿಸಿದ್ದು ಒಳ್ಳೆಯದಾಯ್ತು ಸಂಗಾತಿ. ಅದರ ವರದಿ ಕೇಳಿದಾಗ ನಾನು ಮೂಕನಾದೆ. ನೀವು ಹಾಗೆ ಮಾಡಿದ್ದು ಸಾಮಾನ್ಯ ವಿಷಯವಲ್ಲ; ಹಾಗೆ ಮಾಡಿದ್ದರಿಂದ ಮಾನಭಂಗದ ಸಂಖ್ಯೆ ಎಷ್ಟೋ ಕಮ್ಮಿಯಾಯ್ತು."

ಬಾಡಿದ ತಮ್ಮ ಕಣ್ಣುಗಳು ಮತ್ತೆ ಸಜೀವವಾಗಿ ಹನಿಗೂಡಿದಂತೆ, ಅಪ್ಪು ಮತ್ತು ಅಬೂಬಕರರಿಗೆ ಅನಿಸಿತು.

ಆದರೆ ಹೊಸ ಆಘಾತವಾಗಿ ಬಂದೆರಗಿತು ಮುಂದಿನ ಮಾತು.

"ನಿಮಗೆ ಗೊತ್ತೆ ? ಪ್ರಭು ಮತ್ತು ಥಾಂಡಿಗರನ್ನು ಮಡಿಕ್ಕೆಯಲ್ಲಿ ಇವತ್ತು ಬೆಳಿಗ್ಗೆ ಹಿಡಿದ್ರು."

"ಆ್ಹ!"

"ಕಯ್ಯೂರಿನ ವಿಷಯ ಈಗ ನಾನು ಹೇಳಿದ್ದೆಲ್ಲ ಅವರು ನಿನ್ನೆ ರಾತ್ರೆ ಕಳಿಸಿದ ವರದಿ. ನಿಮ್ಮನ್ನು ಕಾಣುವ ಉದ್ದೇಶದಿಂದಲೇ ಅವರು ಆಚೆಗೆ ಹೋದದ್ದು."

ದುಃಖಕ್ಕೆ ಮಿತಿಯೇ ಇಲ್ಲವೇನೊ ಎಂದು ಅಪ್ಪು ಆಳವಾಗಿ ನಿಟ್ಟುಸಿರು ಬಿಟ್ಟ. ಅವರು ಮುಂದುವರಿಸಿದರು:

"ಇಲ್ಲಿ ಸರಕಾರೀ ಠಾಣ್ಯದಿಂದ ಒಳಗಿನ ವರ್ತಮಾನ ನಮಗೆ ಬಂದಿದೆ. ಕಯ್ಯೂರು ಪ್ರಕರಣದ ಹೆಸರಲ್ಲಿ ಈ ಭಾಗದ ರೈತ ಚಳವಳಿಯ ಪ್ರಮುಖರನ್ನೆಲ್ಲ ಹಿಡೀಬೇಕೂಂತ ಸರಕಾರದ ಯೋಜನೆ. ಅವರು ಇಟ್ಟುಕೊಂಡಿರೋ ಗುರಿ ಅರವತ್ತೆರಡು. ರೈತರು, ಕಾರ್ಯಕರ್ತರು ಎಲ್ಲ ಸೇರಿ ಈಗಾಗ್ಲೇ ಐವತ್ತೆಂಟು ಜನರನ್ನು ಹಿಡಿದಿದ್ದಾರೆ. ನೀವಿಬ್ಬರೂ ಸೇರಿದರೆ ಆರುವತ್ತು. ಆದಾದ ಮೇಲೆ ಅವರಿಗೆ ಬೇಕಾಗಿರೋದು ಇಬ್ಬರು. ಆ ಇಬ್ಬರು ಯಾರೂಂತ ಅವರಿಗೇ ಸರಿಯಾಗಿ ಗೊತ್ತಿಲ್ಲ! ಹೆಸರು ನೋಡಿದರೆ ಎರಡೂ ಪಂಡಿತರು ಇಟ್ಟುಕೊಳ್ಳೋ ಬೇರೆ ಬೇರೆ ಹೆಸರುಗಳೇ...."

ಅಪ್ಪು ಮತ್ತು ಅಬೂಬಕರ್ ಮೌನವಾಗಿದ್ದುದನ್ನು ಕಂಡು ಅವರೇ ಅಂದರು:

"ಕಯ್ಯೂರಿನ ರೈತರ ಈಗಿನ ಕಷ್ಟಗಳಿಗೆಲ್ಲ ಅಪ್ಪು ಮತ್ತು ಅಬೂಬಕರ್ ಇಬ್ಬರೇ ಕಾರಣ ಅಂತ ಪ್ರಚಾರಮಾಡ್ತಿದ್ದಾರೆ. ನೀವಿಬ್ಬರು ಸಿಕ್ಕಿದ ತಕ್ಷಣ ದಳ ಅಲ್ಲಿಂದ ಹೊರಡ್ತದಂತೆ. ಹೊರಡ್ಬೇಕೂಂತ ಆಜ್ಞೆಯೂ ಇದೆಯಂತೆ."

ಅಪ್ಪು ಹಿಂದಕ್ಕೆ ಬಾಗಿ ಗೋಡೆಗೆ ತಲೆಯಿಟ್ಟು ಕೇಳಿದ:

"ಹಾಗಾದರೆ ಎಲ್ಲ ಮುಗೀತೂಂತ ಅರ್ಥವೇ?"

"ಏನು ಹಾಗಂದರೆ? ಇದು ಶುರು—ಅಷ್ಟೆ. ಈ ಘರ್ಷಣೆಯಲ್ಲಿ ಉಕ್ಕಾಗೋ ರೈತರೇ ಇನ್ನೂ ದೊಡ್ಡ ಹೋರಾಟ ನಾಳೆ ಮಾಡ್ತಾರೆ."

"ಅದು ನಾಳೆಯ ಮಾತಾಯ್ತು. ಇವತ್ತು ಏನೂ ಇಲ್ಲವೆ?"

ಸ್ವಲ್ಪ ಬೇಸರದ ಧ್ವನಿಯಲ್ಲಿ ಅವರೆಂದರು:

"ನೀವು ಯಾಕೋ ಎಳೇಮಗುವಿನ ಹಾಗೆ ಮಾತಾಡ್ತಿದ್ದೀರಿ, ಸಂಗಾತಿ. ಜನತೆಯ ಹೋರಾಟ ಅಂದರೇ ಹೀಗೆ. ಸಾವಿರ ಕಡೆ ಚಕಮಕಿಯಾಗಿ ಕಿಡಿ ಹಬ್ಬಿದ ಮೇಲೆ ದೊಡ್ಡ ಬೆಂಕಿಯಾಗ್ತದೆ."

"ಅದಕ್ಕಿಂತ ಮುಂಚೆ ಕಿಡಿ ಆರಿದರೆ?"

"ಆರೋದು ಯಾವತ್ತಿಗೂ ಇಲ್ಲ. ಜನರ ಹೃದಯದಲ್ಲಿ ಕಿಡಿ ಇದ್ದೇ ಇರುತ್ತದೆ. ಅದು ಜ್ವಲಿಸೋದಕ್ಕೆ ಪ್ರೇರಕ ಶಕ್ತಿಯೊಂದಿದ್ದರೆ ಸರಿ...."

ಮುದುಕಿ ಬಂದು ಮಕ್ಕಳನ್ನು ಗದರಿಸುವಂತೆ ಹೇಳಿದಳು:

"ಇನ್ನು ಮಾತಾಡಿದ್ದು ಸಾಕು. ಬಂದವರು ಗಂಜಿ ಕುಡಿದು ವಿಶ್ರಾಂತಿ ಪಡೆಯಲಿ. ನೀವೂ ಮಲಗಿ. ನಾಳೆ ಎದ್ದು ಮಾತುಕತೆ ಶುರುಮಾಡುವಿರಂತೆ. ಮುಗಿಯದ ಚರ್ಚೆ ಅದೆಂಥದೋ ಆ ದೇವರೇ ಬಲ್ಲ!"

....ಗಂಜಿ ಕುಡಿದು ದೀಪವಾರಿಸಿ ಅಪ್ಪು ಮತ್ತು ಅಬೂಬಕರ್ ಒಬ್ಬರಿಗೊಬ್ಬರು ಸಮೀಪವಾಗಿ ಮಲಗಿದರು. ನಿದ್ದೆ ಬರಲಿಲ್ಲ. ಯೋಚಿಸಿ ಯೋಚಿಸಿ ಅವರ ಮೆದುಳು ತಪ್ತವಾಯಿತು.

ಬಹಳ ಹೊತ್ತಾದ ಮೇಲೆ ಅಪ್ಪು ಮೆಲ್ಲನೆ ಹೇಳಿದ:

"ನಾವು ಕಯ್ಯೂರಿಗೆ ಹೊರಟುಹೋಗೋದೆ ಮೇಲು—ಅಲ್ವ, ಸಂಗಾತಿ?"

"ನಾನೂ ಹಾಗಂತಲೇ ಯೋಚಿಸ್ತಿದ್ದೆ ಅಪ್ಪು."

"ನಾಳೆ ಅವರಿಗೆ ತಿಳಿಸಿ ಹೊರಟ್ಬಿಡೋಣ."

"ಆಗಲಿ."

.....ಬೆಳಗ್ಗೆ ತಮ್ಮ ಅಭಿಪ್ರಾಯವನ್ನು ಅವರು ತಿಳಿಸಿದಾಗ, ಆ ನಾಯಕರೆಂದರು:

"ನಾನಾಗಿಯೆ ಈ ಸಲಹೆ ಮಾಡ್ತಿದ್ದೆನೋ ಇಲ್ಲವೋ. ಏನು ಹೇಳಬೇಕೂಂತ ನನಗಿನ್ನೂ ಸ್ಪಷ್ಟವಾಗಿಲ್ಲ. ಬೇರೆ ಕೆಲಸದ ಮೇಲೆ ಹೋದ ಪಂಡಿತರೂ ಬಹಳ ದೂರದಲ್ಲಿದ್ದಾರೆ. ಅವರ ಅಭಿಪ್ರಾಯ ಈಗ ತಿಳಿಯೋಹಾಗಿಲ್ಲ. ಒಂದು ರೀತೀಲಿ ನೀವು ಹೇಳೋದು ಸರಿ. ರೈತರಿಗೆ ನಿಮ್ಮ ಮೇಲೆ ವಿಶ್ವಾಸ ಹೆಚ್ಚಾಗ್ತದೆ. ಆದರೆ, ನ್ಯಾಯಸ್ಥಾನದ ವ್ಯವಹರಣೆ, ಆಗಬೇಕಾದ ಕೆಲಸ, ಇದನ್ನೆಲ್ಲ ನೆನೆಸಿದಾಗ ನೀವು ಭೂಗತರಾಗಿದ್ದರೇ ಮೇಲು ಅನಿಸ್ತದೆ."

ಆದರೆ ಜನರ ದುಃಖ ಕಂಡು ಕುದಿಯುತ್ತಿದ್ದ ಅಪ್ಪುವಿನ ಹೃದಯ ಪಟ್ಟುಹಿಡಿದು ಹೇಳಿತು:

"ಕ್ಷಮಿಸಿ ಸಂಗಾತಿ, ನಮ್ಮ ಜನರೆಡೆಗೆ ವಾಪ್ಸು ಹೋಗ್ಬೇಕೂಂತ ನಾವು ನಿರ್ಧಾರ ಮಾಡಿದ್ದೇವೆ."

ಅವರು ಒಂದು ಕ್ಷಣ ಮೌನವಾಗಿದ್ದು ಅಂದರು:

"ಆಗಲಿ ಹಾಗಾದರೆ. ಈ ರೀತಿ ತೀರ್ಮಾನ ಮಾಡಿದ್ದೀರಿ ಅಂತ, ಜೈಲಿಗೆ ಹೇಳಿ ಕಳಿಸ್ಲೇನು?"

"ಅಷ್ಟು ಮಾಡಿ."

................

ದಸ್ತಗಿರಿ ಖಂಡಿತವೆಂದು ಗೊತ್ತಿದ್ದರೂ ಕಯ್ಯೂರು ಸೇರುವವರೆಗೆ ತಾವು ಸುರಕ್ಷಿತವಾಗಿರಬೇಕೆಂದು ಅಪ್ಪು ಮತ್ತು ಅಬೂಬಕರ್ ಬಯಸಿದರು. ದೇವಕಿಯ ಜತೆಯಲ್ಲಿ ತವರುಮನೆ ಸೇರಿದ್ದ ಜಾನಕಿಯನ್ನೂ ಮಗುವನ್ನೂ ಒಮ್ಮೆ ನೋಡಬೇಕು; ತನ್ನ ತಾಯಿ, ಅಜ್ಜಿ, ತಮ್ಮಂದಿರನ್ನೂ ಕಾಣಬೇಕು ಎಂದು ಅಪ್ಪುವಿಗೆ ಬಯಕೆ. ತಾಯಿ ಬೂಬಮ್ಮನನ್ನೊಮ್ಮೆ ಕಂಡರಾದೀತೆಂದು ಅಬೂಬಕರನಿಗೆ ಆಸೆ. ಆದರೆ ಮನಸ್ಸಿನೊಳಗೆ ಆ ವಿಷಯ ಚಿಂತಿಸಿ, ಒಬ್ಬರಿಗೊಬ್ಬರು ಹೇಳದೆ, ಆ ಭಾವನೆಗಳನ್ನೂ ಇಬ್ಬರೂ ಅದುಮಿ ಹಿಡಿದರು.

ಚರ್ವತ್ತೂರು ತನಕ ರೈಲಿನಲ್ಲಿ ಬಂದು ಕಯ್ಯೂರಿಗೆ ಅವರು ನಡೆದರು.

ಎದೆಯ ಮೂಕ ಆರ್ತನಾದದಿಂದ ಅವರಿಗೆ ಅಸಹನೀಯ ಸಂಕಟವಾಯಿತು.

ಕಯ್ಯೂರು ಸಮೀಪಿಸಿದಂತೆ ಸೂರ್ಯನ ಶಾಖ ಹೆಚ್ಚಿತು. ರಣಗುಟ್ಟಿತು ಬಿಸಿಲು. ಹೇಳುವ ಕೇಳುವವರಿಲ್ಲವೆಂದು ಹೊಲಗಳು ಬಾಯ್ತೆರೆದು ಮಲಗಿದ್ದುವು. ತಾವು ಅನಾಥ ಪ್ರಾಣಿಗಳೆಂಬಂತೆ, ಕಣ್ಣಿಗೆ ಬೀಳದ ಹಸುರನ್ನು ಹುಡುಕುತ್ತ ಕೆಲ ಹೋರಿಗಳು ಅಲೆಯುತ್ತಿದ್ದುವು.

ಇದೆಲ್ಲವನ್ನೂ ದಿಟ್ಟಿಸುತ್ತ ಅಪ್ಪು ಮತ್ತು ಅಬೂಬಕರ್ ಸಶಸ್ತ್ರದಳದ ಶಿಬಿರವಿದ್ದ ಕಡೆಗೆ ನಡೆದರು.

ಅವರನ್ನು ದೂರದಿಂದಲೇ ಮೊದಲು ಗುರುತಿಸಿದವರು ನಂಬಿಯಾರರ ಸೇವಕರು. ಅವರು ಓಡಿ ಹೋಗಿ ದಳದ ಅಧಿಕಾರಿಗೆ ಸುದ್ದಿ ಮುಟ್ಟಿಸಿದರು.

"ಅಪ್ಪು ಮತ್ತು ಅಬೂಬಕರ್ ಬರ್‍ತಿದ್ದಾರೆ!"

ಇದು ತಮ್ಮ ದಳದ ಮೇಲೆ ಆಕ್ರಮಣವಿರಬಹುದೆಂದು ಅಧಿಕಾರಿ ಧಿಗ್ಗನೆ ಎದ್ದು ಕೇಳಿದ:

"ಎಷ್ಟು ಜನ?"

"ಇಬ್ಬರೇ."

"ಇಬ್ಬರು?"

"ಹೂಂ."

ಅಧಿಕಾರಿ, ಆಶ್ಚರ್ಯವೆನಿಸಿದರೂ ಸಂತೋಷಪಡುತ್ತ, ಅವರನ್ನು ಇದಿರುಗೊಳ್ಳಲು ತನ್ನ ಸೈನಿಕರಿಗೆ ಆಜ್ಞೆ ಇತ್ತ. ಹತ್ತು ಜನ ಬಂದೂಕನ್ನೆತ್ತಿ ಹಿಡಿದು ಮುಂದುವರಿದರು.

ಮತ್ತೆ ಗುಡಿಸಲ ತಡಿಕೆಗಳೆಡೆಯಿಂದ, ಬಾಗಿಲ ಮರೆಯಿಂದ ಭೀತಿಯ ಕಾತರದ ದೃಷ್ಟಿಗಳು ಆ ದೃಶ್ಯವನ್ನು ನೋಡಿದುವು. ಅಪ್ಪು-ಅಬೂಬಕರರನ್ನು ಗುರುತಿಸಿದವರು "ಅಯ್ಯೋ!" ಎಂದರು. ಇನ್ನೊಂದು ಕ್ಷಣದಲ್ಲಿ ಗುಂಡುಹಾರುವುದೆಂದು ಹಲವರು ಸ್ತಬ್ಧರಾದರು.

ಎದುರು ಬದುರಾಗಿ ಬರುತ್ತಿದ್ದರು—ಹತ್ತು ಜನ ಬಂದೂಕನ್ನು ಗುರಿಹಿಡಿದ ಸೈನಿಕರು ಮತ್ತು ಬರಿಗೈಯ ಇಬ್ಬರು ಜವ್ವನಿಗರು.

ನಡೆಯುವುದು ಇನ್ನು ಸಾಕೆಂದು ಅಪ್ಪು ಮತ್ತು ಅಬೂಬಕರ್ ನಿಂತರು— ಚಿತ್ರ ಹಿಂಸೆಗೆ ಸಿದ್ಧರಾಗಿ ನಿಂತರು. ಸೈನಿಕರು ಅವರನ್ನು ಸುತ್ತುವರಿಯಲು ಹೆಚ್ಚು ಹೊತ್ತು ಹಿಡಿಯಲಿಲ್ಲ. ಆದರೆ ರೈತರಿಗೆ ಹೊಡೆದುಹೊಡೆದು ಬೇಸತ್ತಿದ್ದ ಸೈನಿಕರು ಇವರಿಬ್ಬರ ಮೇಲೆ ಕೈಮಾಡಲಿಲ್ಲ. ಈ ನಾಯಕರ ಕೈಸೆರೆಯಾಯಿತೆಂಬುದೇ ಅವರಿಗೆ ಆತ್ಮಾನಂದದ ವಿಷಯವಾಗಿತ್ತು.

ಕೈದಿಗಳಾದ ಅಪ್ಪು ಮತ್ತು ಅಬೂಬಕರರನ್ನು ಅಧಿಕಾರಿಯ ಕಡೆಗೆ ಸೈನಿಕರು ಒಯ್ದರು.

ದಳದ ತುತೂರಿ ಮೊಳಗಿ, ವಿಜಯದ ಸುದ್ದಿಯನ್ನು ಸಾರಿತು.

ಶಿಬಿರದ ಮೇಲಿತ್ತು ದೊಡ್ಡ ಯೂನಿಯನ್ ಜಾಕ್ ಧ್ವಜ. ಗಾಳಿ ಇಲ್ಲದೆ ಜೋತು ಬಿದ್ದಿದ್ದರೂ ಶಸ್ತ್ರಾಸ್ತ್ರಗಳ ಸಂರಕ್ಷಣೆಯಲ್ಲಿ ಅದು ಭದ್ರವಾಗಿತ್ತು.

೪

ಹೊಸದುರ್ಗದಿಂದ ಪೋಲೀಸರ ದಳವೊಂದು ಕಯ್ಯೂರಿಗೆ ಹೋಗಿ ಅಪ್ಪು ಮತ್ತು ಅಬೂಬಕರರನ್ನು ಕರೆದು ತಂದಿತು. ಆ ಪೋಲೀಸರ ದೃಷ್ಟಿಯಲ್ಲಿ ಅವರಿಬ್ಬರೂ ಭೂಗತರಾಗಿದ್ದ ಕ್ರಾಂತಿಕಾರರು, ಅತಿಭಯಂಕರರು. ಸುಬ್ಬಯ್ಯನನ್ನು 'ಕೊಂದು ಕರುಳ ಬಗೆದ'ಆ ಕೈಗಳು ಈಗಲೂ ಕೆಂಪಗಿದ್ದಂತೆ ಅವರಿಗೆ ತೋರಿದುವು. ಸರಕಾರದ ಕಡುವೈರಿಗಳು ಆ ಇಬ್ಬರು; ಸಾಮ್ರಾಜ್ಯಕಂಟಕರು. ಅವರು ತಪ್ಪಿಸಿಕೊಂಡರೆಂದರೆ ಲೋಕಕ್ಕೆ ಆಪತ್ತು. ಆ ಆಪತ್ತಿನ ಮೊದಲ ಪರಿಣಾಮವಾಗಿ ಪೋಲೀಸರೆಲ್ಲರ ಕೆಲಸ ಹೋಗುವುದು. ಅದಕ್ಕಾಗಿ ಅವರು ಆ ಇಬ್ಬರು ಕೈದಿಗಳ ಒಂದೊಂದು ಕೈಗಳನ್ನು ಜೋಡಿಸಿ ಬೇಡಿಹಾಕಿದರು. ಉಳಿದ ಒಂದೊಂದು ಕೈಗೂ ಬೇರೆ ಬೇರೆ ಬೇಡಿ ತೊಡಿಸಿ ಸಂಕೋಲೆಗಳನ್ನು ತಾವು ಹಿಡಿದರು.

ಆ ಊರಲ್ಲಿದ್ದುದು ದೊಡ್ಡ ಸೆರೆಮನೆಯೇನಲ್ಲ. ವಿಶಾಲವಾದ ಲಾಕಪ್ಪು— ಕೂಡುದೊಡ್ಡಿ. ಅಲ್ಲಿ ಬಂಧಿತರಾಗಿದ್ದ ಐವತ್ತೆಂಟು ಜನರೂ ನೆಟ್ಟದೃಷ್ಟಿಯಿಂದ,

ತಮ್ಮೆಡೆಗೆ ಬರುತ್ತಿದ್ದ ಇಬ್ಬರು ಬಾಂಧವರನ್ನು ನೋಡಿದರು. ಅಪ್ಪು ಮತ್ತು ಅಬೂಬಕರ್ ಇಬ್ಬರೂ ಜೀವಂತರಾಗಿರುವರೆಂಬ ಅವರ ಸಮಾಧಾನದೊಡನೆ, ಇಲ್ಲಿಗೆ ತಮ್ಮ ಅಸಹಾಯಕತೆಯ ಚಿತ್ರ ಪೂರ್ಣವಾಯಿತು ಎಂಬ ತೀವ್ರ ಅಸಮಾಧಾನ ಬೆರೆಯಿತು. ಎಲ್ಲರನ್ನೂ ನೋಡುತ್ತಾ, ಆ ಗುಂಪಿನಲ್ಲಿ ತಂದೆಯನ್ನರಸುತ್ತಿದ್ದ ಅಪ್ಪುವಿನ ಕಣ್ಣುಗಳು ಮೊದಲು ಕಂಡುದು ಮಾಸ್ತರನ್ನು—ಎಂದಿನಂತೆಯೇ ಶಾಂತವಾದ ಮುಖಮುದ್ರೆ; ನೋವು ತುಂಬಿದ್ದರೂ ಆತ್ಮೀಯತೆಯನ್ನು ಸೂಸುತ್ತಿದ್ದ ನೋಟ. ಅವರ ಪಕ್ಕದಲ್ಲಿ ಚಿರುಕಂಡನಿದ್ದ. ಶುಭ್ರವಾಗಿದ್ದ ಉಡುಗೆ ಮಲಿನವಾಗಿತ್ತು; ಆದರೆ ನಿಲುವಿನ ಗಾಂಭೀರ್ಯಕ್ಕೆ ಚ್ಯುತಿ ಬಂದಿರಲಿಲ್ಲ—ಎಳ್ಳಿನಷ್ಟೂ. ಸುತ್ತಮುತ್ತಲೆಲ್ಲ ಇದ್ದ ಒಂದೊಂದು ಮುಖ, ಸಂಕಟವಾಗಿ ಮಾರ್ಪಟ್ಟಿದ್ದ ಕ್ರೋಧ, ಒಡೆದು ತೋರುತ್ತಿದ್ದ ಕಾತರ....

ಅವರೆಲ್ಲರ ಪರವಾಗಿಯೇ ಎಂಬಂತೆ ಮಾಸ್ತರು ಮೃದುಧ್ವನಿಯಲ್ಲಿ ಕರೆದರು:

"ಬಾ ಅಪ್ಪು, ಬಾ ಅಬೂಬಕರ್, ಬನ್ನಿ."

ಕೂಡುದೊಡ್ಡಿಯ ಬಾಗಿಲು ಮುಚ್ಚಿಕೊಂಡಿತು, ಬೀಗ ಬಿತ್ತು.

ಒಳಗಿದ್ದವರೆಲ್ಲ, ಬಂದ ಇಬ್ಬರ ಸುತ್ತಲೂ ನೆರೆದರು. ಎಲ್ಲರಿಗೂ ಕಯ್ಯೂರಿನ ವಾರ್ತೆ ಕೇಳುವ ಆತುರ, ಅಪ್ಪು ಭಾವೋದ್ವೇಗದಿಂದ ಮಾತನಾಡಲಾರದೆ ಹೋದ. ಕಂಠದ ನರಗಳು ಬಿಗಿದುಬಂದವು. ಅಲ್ಲೆ, ಮೂಲೆಯಲ್ಲಿ, ಎಲ್ಲರಿಗಿಂತ ಹಿಂದೆ, ಅಪ್ಪುವಿನ ತಂದೆ ನಿಂತಿದ್ದ. ನಿಶ್ಚಲವಾದ ನಿರ್ವಿಕಾರವಾದ ಅವನ ದೃಷ್ಟಿ ಮಗನನ್ನೇ ನೋಡಿತು.

ಒಬ್ಬೊಬ್ಬರಾಗಿ ಅವರೆಲ್ಲ ಕುಳಿತುಕೊಂಡರು. ಆ ನೀರವತೆಯನ್ನು ಭೇದಿಸಿ ಎಳೆಯ ಕುಟ್ಟಿಕೃಷ್ಣ ಬಿಕ್ಕುತ್ತ ಅತ್ತ. "ಅಳಬೇಡ" ಎಂದರು, ಹುಡುಗನ ಬದಿಯಲ್ಲಿದ್ದವರು ಯಾರೋ.

ನಿಧಾನವಾಗಿ ಸುಧಾರಿಸಿಕೊಂಡು ಅಪ್ಪು ಉರಿಯುತ್ತಿದ್ದ ಕಯ್ಯೂರಿನ ಕರುಣ ಕಥೆಯನ್ನು ಹೇಳಿದ. ಅಲ್ಲಿ ಇಲ್ಲಿ ಅಬೂಬಕರ್ ತಾನೂ ಒಂದೆರಡು ಮಾತು ಸೇರಿಸಿ, "ಅದು ಹೀಗೆ" ಎಂದು ಸ್ಪಷ್ಟೀಕರಿಸಿದ. ತಂಡತಂಡವಾಗಿ ಬೇರೆ ಬೇರೆ ದಿನಗಳಲ್ಲಿ ಬಂದಿದ್ದ ಕೈದಿಗಳಿಂದ ಹೆಚ್ಚಿನ ವಿಷಯವೆಲ್ಲ ಆಗಲೆ ಎಲ್ಲರಿಗೂ ತಿಳಿದಿತ್ತು. ಅಪ್ಪುವಿನ ಮಾತಿಗೆ ಕಿವಿಗೊಟ್ಟು 'ಅದೆಲ್ಲ ನಿಜ' ಎಂಬ ಅರಿವನ್ನು ಅವರು ಮತ್ತೊಮ್ಮೆ ಮಾಡಿಕೊಂಡರು.

"ಈಗಲಾದರೂ ತೃಪ್ತಿಯಾಯಿತಂತೇನು ನಾಯಿಗಳಿಗೆ?" ಎಂದನು ಯಾರೋ ಒಬ್ಬ ಕಟುಧ್ವನಿಯಲ್ಲಿ

"ಅಂತೂ ಕಯ್ಯೂರಿಗೆ ನಾವು ವಾಪಸಾಗುವಾಗ ಕೋಳಿ ಮರಿಗಳನ್ನೂ ಹೊಸದಾಗಿ ತಗೊಂಡು ಹೋಗ್ಬೇಕೂಂತ ಕಾಣ್ತದೆ!" ಎಂದ ಧಾಂಡಿಗ.

ಆ ಮಾತು ಕೇಳಿ ಸಂಕಟದ ನಡುವೆಯೂ ಕೆಲವರು ನಕ್ಕರು.

ಮಾಸ್ತರು ನಿಧಾನವಾಗಿ ಹೇಳಿದರು:

"ಸಾಯೋ ಮನುಷ್ಯನ ಹಾಗೆ, ಈ ಸರಕಾರ. ಯಮ ಬಂದು ನಿಂತಾಗ ಚಡಪಡಿಸೋದು ಜಾಸ್ತಿ.... ನಮ್ಮವರೇ ಆದವರು ನಮ್ಮ ಜನರ ಮೇಲೆಯೇ ಬೀಳೋದಂತೂ ಎಷ್ಟು ಅಸಹ್ಯ! ಅಷ್ಟರಮಟ್ಟಿಗೆ ನಮ್ಮವರನ್ನು ಗುಲಾಮರಾಗಿ ಪಶುಗಳಾಗಿ ಆಳುವವರು ಮಾಡಿದ್ದಾರೆ.... ಸರಕಾರ ಅನ್ನೋದು ಎಲ್ಲಿದೆ, ಅದು ಹ್ಯಾಗೆ ಕೆಲಸ ಮಾಡ್ತದೆ, ಅಂತ ಈವರೆಗೂ ನಾವು ನೋಡಿರ್ಲಿಲ್ಲ. ಬರೇ ಜಮೀನ್ದಾರರಿಬ್ಬರೇ ಕಣ್ಣಿಗೆ ಕಾಣ್ತಾ ಇದ್ರು. ಅವರ ರಕ್ಷಣೆಗಿರೋ ಶಕ್ತಿ ಎಂಥದೂಂತ ನಮಗೀಗ ಗೊತ್ತಾಯ್ತು. ಆ ಶಕ್ತೀನ ಮುರಿಯೋದಕ್ಕೆ ನಮ್ಮ ಶಕ್ತಿ ಹ್ಯಾಗಿರ್ಬೇಕು ಅನ್ನೋದು ತಿಳೀತು. ಅಂತೂ ನಮ್ಮ ಪಾಲಿಗೆ ಇದೊಂದು ಅಗ್ನಿಪರೀಕ್ಷೆ... ಇದರಲ್ಲಿ ನಾವು ಜಯಿಸಿ ಒಗ್ಗಟ್ಟಾಗಿ ಉಳಿದರೇನೇ ನಾಳೆ ಭೂಮಿಯ ಮೇಲೆ ಸ್ವರ್ಗ ರಚಿಸೇವು...."

ಧಾಂಡಿಗ ಎದ್ದು ಬಾಗಿಲ ಬಳಿ ಹೋಗಿ ಸರಳುಗಳ ಎಡೆಯಿಂದ ಹೊರಕ್ಕೆ ಇಣಕಿದ. "ಇವತ್ತಾದರೂ ಮಾವನ ಮನೆಗೆ ಕರಕೊಂಡು ಹೋಗ್ತಾರೋ ಇಲ್ಲವೋ" ಎಂದು ಗೊಣಗಿದ. ನಿಂತಲ್ಲಿಂದಲೇ ಕತ್ತು ತಿರುಗಿಸಿ ಕೇಳಿದ:

"ಟೈಮೆಷ್ಟು ಅಪ್ಪು?"

ಅಪ್ಪು ಅಭ್ಯಾಸಬಲದಿಂದ ಕೈ ನೋಡಿದ. ಆದರೆ ಅಲ್ಲಿ ಎಲ್ಲಿತ್ತು ಕೈಗಡಿಯಾರ! ನಗುವ ಹಾಗಾಯಿತು. ಧಾಂಡಿಗ ಮತ್ತೂ ಕೇಳಿದ:

"ಯಾಕೆ? ಕೈಗಡಿಯಾರ ಇಲ್ವೇನೋ? ಯಾರಿಗೆ ಕೊಟ್ಟೆ?"

"ಕಿತ್ಕೊಂಡ್ರು."

"ಆಹಾ! ಯಾರು? ಪೋಲೀಸರೋ? ಅಧಿಕಾರಿನೋ?"

"ಅಧಿಕಾರಿ."

"ಹಾಗಾದರೆ ಬೇಸರವಿಲ್ಲ."

ಯಾರೋ ಒಬ್ಬನು ಕೇಳಿದ:

"ಏನೂ ಹಾಗಂದರೆ?"

"ಈ ಕೈಗಡಿಯಾರದಲ್ಲಿ ಟೈಮು ನೋಡಿಯೇ ಕ್ರಾಂತಿ ಶುರು ಮಾಡಿದ್ರೂಂತ ನ್ಯಾಯಾಸ್ಥಾನದಲ್ಲಿ ಆತ ಇದನ್ನು ಹಾಜರುಪಡಿಸ್ತಾನೆ."

"ಓಹೋ!"

"ನಮ್ಮ ಸರ್ಕಾರ ಬಂದ ಕೂಡ್ಲೆ ನ್ಯಾಯಾಸ್ಥಾನದೋರು ಈ ಗಡಿಯಾರ ಚಾರಿತ್ರಿಕ ವಸ್ತೂಂತ ನಮಗೆ ವಾಪಸ್ಸು ಕೊಡ್ತಾರೆ."

ಆ ಮಾತು ಕೇಳಿ ಮಾಸ್ತರನ್ನು ಮೊದಲ್ಗೊಂಡು ಎಲ್ಲರೂ ನಕ್ಕರು.

ಧಾಂಡಿಗ ಮತ್ತೊಮ್ಮೆ ಹೊರಗಿಣುಕಿ ಅಂದ :

"ಆಹಾ! ಬಂದರು! ನೋಡೋ ಅಬೂಬಕರ್, ಹ್ಯಾಗೆ ಬರ್‍ತಿದ್ದಾರೆ !

ಲೆಫ್ಟ್-ರೈಟ್, ಲೆಫ್ಟ್-ರೈಟ್, ಢಂ-ಪುಸ್ಕ್."

ಎಲ್ಲರ ನೋಟುಗಳೂ ಅತ್ತ ತಿರುಗಿದವು. ಸಶಸ್ತ್ರ ಪೋಲೀಸರ ದೊಡ್ಡ ಪಡೆಯೇ ಅವರತ್ತ ಬರುತ್ತಿತ್ತು.

ಮಾಸ್ತರು ಎದ್ದು ನಿಂತು ಹೇಳಿದರು:

"ಏಳಿ ಸಂಗಾತಿಗಳೇ! ವಿಚಾರಣೆಯ ನಾಟಕದ ಮೊದಲ ಅಂಕ ಈಗ ಶುರು. ನಾವೀಗ ನ್ಯಾಯಸ್ಥಾನಕ್ಕೆ ಹೋಗ್ಬೇಕು."

ಮತ್ತೆ ಕೈಕೋಳ. ಹಿರಿದ ಬಂದೂಕಗಳ ಜೋಡು ಸಾಲುಗಳ ನಡುವೆ ಒಬ್ಬರ ಬೆನ್ನಿಗೊಬ್ಬರು ಅಂಟಿಕೊಂಡು ನಡಿಗೆ....

ಊರಿನ ಜನರೂ ಬಂದು ನೆರೆದರು. ಯಾವ ಭಾವನೆಯನ್ನೂ ಒಡೆದು ತೋರಿಸದ ನೋಟಗಳು ಕೆಲವು, ಕುಹಕದ ಕೊಂಕಿನ ಮುಖಭಾವಗಳು ಕೆಲವು....

ಆ ಪುಟ್ಟ ನ್ಯಾಯಸ್ಥಾನದಲ್ಲಿ ಅಷ್ಟೊಂದು ಜನ ಕೈದಿಗಳು ನಿಲ್ಲಲು ಜಾಗ ಇರಲಿಲ್ಲ. ಎತ್ತರದ ಸ್ಥಳದಲ್ಲಿ ಒಂಟಿಯಾಗಿ ಕುಳಿತಿದ್ದ ವಯಸ್ಸಾದ ನ್ಯಾಯಾಧೀಶರು, ಮನೆ ಜಗಲಿಯ ಮೇಲೆ ಓಡಾಡುವ ಒಕ್ಕಲಗಿತ್ತಿಯ ಮಕ್ಕಳನ್ನು ಕಾಣುವಂತೆ, ಆ ಕೈದಿಗಳತ್ತ ನೋಡಿದರು. ಮುಖಂಡರು ಯಾರು ಎಂಬುದನ್ನು ನಿರ್ಧರಿಸಲಾಗದೆ, ಎಲ್ಲರಿಗಿಂತ ಚಿಕ್ಕವನಾದ ಕುಟ್ಟಿಕೃಷ್ಣನ ಮೇಲೆ ದೃಷ್ಟಿ ನೆಟ್ಟರು. ಬಳಿಕ ಪೋಲೀಸ್ ಅಧಿಕಾರಿಯತ್ತ ನೋಡಿ, "ಕೊಡಿ ಇಲ್ಲಿ ಎಲ್ಲಿ ಸಹಿ ಹಾಕ್ಬೇಕು? ತಡಮಾಡ್ಬೇಡಿ" ಎಂದರು. ಹೊರಗೆ ಗುಂಪು ಸೇರಿದ್ದ ಜನರತ್ತ ಸಿಟ್ಟಿನಿಂದ ನೋಡಿ, ಅವರನ್ನು ಚದುರಿಸುವಂತೆ ಆದೇಶವಿತ್ತರು.

ಅರವತ್ತು ಕೈದಿಗಳ ಹೆಸರುಗಳನ್ನೂ ಓದಿದುದಾಯಿತು. ಒಬ್ಬೊಬ್ಬರಾಗಿ ಕೈದಿಗಳು ಹೂಂಗುಟ್ಟಿದರು. ಅವರಿಗೆಲ್ಲ ಹದಿನೈದು ದಿನಗಳ ರಿಮಾಂಡುಕೊಟ್ಟು ಮಂಗಳೂರಿನ ಸಬ್ ಜೈಲಿನಲ್ಲಿಡುವಂತೆ ನ್ಯಾಯಾಧೀಶರು ಬರೆದರು. "ಸರಿ ತಾನೆ?" ಎಂದು ಅಧಿಕಾರಿಯನ್ನು ಕೇಳುತ್ತ ಸಹಿ ಮಾಡಿದರು. "ಅವರಿಗೆ ಊಟ ಹಾಕಿಸುವ ಹಾಗಿದ್ದರೆ ಅದನ್ನೂ ಮುಗಿಸಿ ಕರಕೊಂಡು ಹೋಗಿ" ಎಂದರು, ಅಲ್ಲಿಗೆ ಆ ದೃಶ್ಯ ಮುಗಿಯಿತು.

ಕೈದಿಗಳು ವಂದಿಸುವ ಸಂಪ್ರದಾಯವನ್ನೂ ಆಚರಿಸದೆ ಹೊರ
ಹೋಗುತ್ತಿದ್ದಾಗ, ಇಂಥವರೇ ಮುಖಂಡರಿರಬಹುದೆಂದು ತಾವು ಊಹಿಸಿದ್ದವರನ್ನು
ನ್ಯಾಯಾಧೀಶರು ಮತ್ತೆ ಮತ್ತೆ ನೋಡಿದರು.

....ಊಟ ಹಾಕಿಸುವ ಯೋಚನೆಯೇ ಇಲ್ಲದೆ ಕೈದಿಗಳನ್ನು ನೇರವಾಗಿ ರೈಲ
ನಿಲ್ದಾಣಕ್ಕೆ ಒಯ್ಯುವ ಸೂಚನೆ ಕಂಡಿತು. ಧಾಂಡಿಗ ಸಿಟ್ಟು ಬೆಂಕಿಯಾದವನಂ
ನಟಿಸುತ್ತ ಕೂಗಾಡಿದ:

"ಈ ಆಟ ನಡೆಯೋಹಾಗಿಲ್ಲ. ಮೊದಲು ಊಟ, ಆಮೇಲೆ ಪ್ರಯಾಣ
ಅಬೂಬಕರ್! ಆರ್ಡರ್ ಕೊಡು—ಹಾಲ್ಟ್!"

ಅಬೂಬಕರನ ಆದೇಶವಿಲ್ಲದೆಯೇ ಕೈದಿಗಳು ನಿಂತರು. ಪೋಲೀಸನೊಬ್ಬ
ಬಂದೂಕಿನ ಹಿಡಿಯಿಂದ ಧಾಂಡಿಗನಿಗೆ ಹೊಡೆದ. ಬಲಮುಷ್ಟಿಯಿಂದ ಮುಖ
ಗುದ್ದಿದ. "ಥೂ!" ಎಂದ ಧಾಂಡಿಗ. ಉಗುಳಿನ ಆ ಪ್ರಸಾದಕ್ಕೆ ಮರುಕಾಣಿಕೆಯಾ
ಮತ್ತೆ ಏಟುಗಳು ಬಿದ್ದುವು. ಇತರ ಕೈದಿಗಳೆಲ್ಲ ಇದನ್ನು ನೋಡುತ್ತ ಅವುಡ
ಕಚ್ಚಿ ನಿಂತರು.

"ನಡೀರಿ ಮುಂದಕ್ಕೆ" ಎಂದ ಅಧಿಕಾರಿ. ಆದರೆ ಕೈದಿಗಳು ಮುಂದಕ್ಕೆ ಅ
ಇಡಲಿಲ್ಲ. "ಊಟವಾದ್ಮೇಲೆ ಹೊರಡ್ತೇವಪ್ಪ. ನಾವು ಉಪವಾಸ ಬಿದ್ದು ಹಾದೀ
ಸತ್ತರೆ, ಸಂಖ್ಯೆ ಅರವತ್ತಕ್ಕೆ ಕಡಿಮೆಯಾಗಿ ನಿಮ್ಮ ತಲೆಗೇ ಬಂದೀತು" ಎಂ
ಕೋರ, ಹಾಗೆ ಹೇಳುವಾಗ ಮಾಸ್ತರತ್ತ ನೋಡಿದ.

ಆದರ ಪರಿಣಾಮ, ಮತ್ತೆ ಕೂಡುದೊಡ್ಡಿಗೆ ನಡಿಗೆ. ಅಲ್ಲಿ ಸ್ವಲ್ಪ ಹೊತ್ತಿ
ಒಳಗಾಗಿಯೇ ಅತಿ ಕೆಟ್ಟ ಅಕ್ಕಿಯಿಂದ ಬೇಯಿಸಿದ ಗಂಜಿ ನೀರಿನ ಊಟ.

ಧಾಂಡಿಗ ನಾಲಿಗೆ ಚಪ್ಪರಿಸುತ್ತ, "ಮೃಷ್ಟಾನ್ನ ಭೋಜನ" ಎಂದು ಉದ್ಗರಿ
ಕೃತಕವಾಗಿ ತೇಗಿ, "ಮಂಗಳೂರಿಗೆ ಅಲ್ಲದಿದ್ರೆ ಬೆಂಗಳೂರಿಗೆ ಕರೆದುಕೊಂಡು ಹೋ
ಇನ್ನು!" ಎಂದ.

"ನಿನ್ನ ಉಪಕಾರ ಇಷ್ಟಾದರೂ ಆಯ್ತು ಮಹಾರಾಯ" ಎಂದ ಪ್ರಭು.

"ಇಂಥ ಎಷ್ಟೋ ಉಪಕಾರ ಮಾಡ್ಬೇಕೂಂತ ನನಗೆ ಮನಸ್ಸಿನಲ್ಲಿದೆ. ಆದ
ಏನು ಮಾಡೋಣ ಹೇಳು? ಉದಾಹರಣೆಗೆ ಬೀಡಿ. ಸಾಧ್ಯವಿದ್ದರೆ ಎಲ್ಲರಿಗ
ನಾನಿಲ್ಲ ಒಂದೊಂದು ಬೀಡಿ ಕೊಡಿಸ್ತಿದ್ದೆ. ಅಬೂಬಕರ್ ತಲಚೇರಿಲಿದ್ದಾಗ ಚೆನ್ನಾ
ಬೀಡಿ ಕಟ್ತಿದ್ದನಂತೆ. ಈಗ ಮರೆತಿದ್ದಾನೋ ಏನೋ. ಏ, ತರಗೆಲೆ ತಂದ್ಕೊಟ್ರೆ
ಬೀಡಿ ಕಟ್ಟೋದಕ್ಕಾಗ್ತದೇನೋ?"

ಆ ಮಾತುಗಳಿಂದ ಹೊರಟು ಹರಿಯುತ್ತಿದ್ದ ನಗೆಯ ಹೊನಲಿನ

ಉಸಾಡುತ್ತ, ಕೈದಿಗಳಿಗೆ ಹೃದಯ ಹಗುರವೆನಿಸಿತು.

ಅಷ್ಟರಲ್ಲೆ ಆಜ್ಞೆ ಬಂತು:

"ಏಳಿರನ್ನು! ಏಳಿರಿ ! ರೈಲಿಗೆ ತಡವಾಗ್ತದೆ!"

.... ಮೂರನೇ ದರ್ಜೆಯ ಡಬ್ಬವೊಂದನ್ನು ತೆರವು ಮಾಡಿಸಿ ಕೈದಿಗಳನ್ನು ಅದರಲ್ಲಿ ತುಂಬಿದರು. ಕಟ್ಟಿಹಾಕಿದ್ದ ಅರವತ್ತು ಜನರಿಗೆ ಕಾವಲಾಗಿ, ಹಿರಿದ ಬಂದೂಕಿನ ನಾಲ್ವತ್ತು ಜನ ಪೋಲೀಸರೂ ಜತೆಯಲ್ಲಿ ಪ್ರಮಾಣ ಮಾಡಿದರು.

ಆ ಗಾಡಿಯಿಂದ ಅಲ್ಲಿ ಇಳಿದ ಪ್ರಯಾಣಿಕರು, ಊರಿನವರು ಗುಂಪುಗುಂಪಾಗಿ ನಿಲ್ದಾಣದಲ್ಲಿ ನಿಂತರು. ಗೂಢಚಾರರು ಅವರ ನಡುವೆ ಸುಳಿದರು. 'ಕಯ್ಯೂರು', 'ಕಯ್ಯೂರು' ಎಂಬ ಪಿಸುದನಿ ಗಾಳಿಯೊಡನೆ ನಿಲ್ದಾಣದ ಉದ್ದಗಲಕ್ಕೂ ಸಂಚಾರಮಾಡಿತು. ಮುಖಗಳ ಮೇಲೆ ಯಾವ ಭಾವನೆಯನ್ನೂ ತೋರಗೊಡದೆ ಜನ ಅಲ್ಲೇ ನಿಂತರು.

ಅವರನ್ನೆಲ್ಲ ದಿಟ್ಟಿಸಿ ನೋಡಿದರು ಮಾಸ್ತರು ಮತ್ತು ಚಿರುಕಂಡ. ಮಾಸ್ತರಿಗೆ ಪರಿಚಯವಿದ್ದವರೂ ಅಲ್ಲಿದ್ದರು. ಆದರೆ ಪರಸ್ಪರ ಮಾತಿಗೆ—ಕಣ್ಣಿನ ಸಂಜ್ಞೆಗೆ ಕೂಡ—ಅಲ್ಲಿ ಅವಕಾಶವಿರಲಿಲ್ಲ.

ಗಾಡಿ ಉತ್ತರಕ್ಕೆ ಚಲಿಸಿತು. ಪ್ರತಿ ಕ್ಷಣಕ್ಕೂ ಮತ್ತಷ್ಟು ದೂರವಾಯಿತು ಕಯ್ಯೂರು. ಒಂದೇ ರೀತಿಯ ಬೇಸರ ಎಲ್ಲರನ್ನೂ ಆವರಿಸಿ ಹಿಂಸೆ ಕೊಟ್ಟಿತು. ಬಿಸಿಲಿಗೆ ಬೆವರಿದ ಮೈಗಳು ಗಾಳಿಗೆ ಸೋತು, ಅವರಿಗೆ ಜೊಂಪು ಹತ್ತಿತು. ಪೋಲೀಸರನ್ನೂ ಬಾಧಿಸಿತು ತೂಕಡಿಕೆ.

ಕಾಸರಗೋಡು ನಿಲ್ದಾಣ.... ಮತ್ತೆ ಎಚ್ಚರ...

"ಮುಂದಕ್ಕಂತೂ ಮಲೆಯಾಳ ತೀರಾ ಕಡಿಮೆ"ಎಂದರು ಮಾಸ್ತರು.

ಅಧಿಕಾರಿ ಬೇರೆ ವರ್ಗದಲ್ಲಿ ಸಂಚಾರ ಮಾಡುತ್ತಿದ್ದುದರಿಂದ ಧೈರ್ಯಗೊಂಡ ಪೋಲೀಸನೊಬ್ಬ ಪತ್ರಿಕೆ ಕೊಂಡು ಓದತೊಡಗಿದ. ಕೈದಿಗಳ ಕಣ್ಣುಗಳೆಲ್ಲ ಆ ಪತ್ರಿಕೆಯ ಮೇಲೆಯೇ ನೆಟ್ಟುವು.

"ಎಲ್ಲ ಪತ್ರಿಕೆಯೋದೊದರಿಂದಲೇ ಶುರುವಾಯ್ತು ಅಲ್ವ ಚಿರುಕಂಡ?" ಎಂದ ಥಾಂಡಿಗ.

ಚಿರುಕಂಡ ಕೊಟ್ಟುದು ಸಣ್ಣ ಮುಗುಳು ನಗೆಯ ಉತ್ತರ ಮಾತ್ರ. ಆದರೆ ಪ್ರಭು ಹೇಳಿದ:

"ಮಾಸ್ತರೆ, ಒಮ್ಮೆ ಆ ಪತ್ರಿಕೆ ಕೊಡೀಂತ ಕೇಳಿ. ನಮ್ಮ ವಿಷಯ ಏನಾದರೂ ಇದ್ದೀತು."

ಪೋಲೀಸರವನು ಓದಿ ಮುಗಿಸಿ, ಆಕಳಿಸಿದ. ಪತ್ರಿಕೆಯನ್ನು ಮಡಚಿ ಕೈದಿಗಳತ್ತ ಎಸೆದ. ಅದು ಕೈಬೇಡಿಗಳ ಜಣತ್ಕಾರದೊಡನೆ ಮಾಸ್ತರನ್ನು ತಲುಪಿತು. ಅವರು ಪುಟ ತಿರುವಿಹಾಕುತ್ತ ಮನಸ್ಸಿನಲ್ಲಿ ಓದಿದರು.

ಚಿರುಕಂಡನಿಗೆ ರಾತ್ರಿ ಶಾಲೆಯ ನೆನಪು ಬಂತು. ಅಲ್ಲಾದರೆ ಗಟ್ಟಿಯಾಗಿ ಓದುತ್ತಿದ್ದುದನ್ನು ರೈತರು ಕೇಳುತ್ತಿದ್ದರು. ಮುಂದೆಯೂ ಅಷ್ಟೆ. ಒಬ್ಬರು ಗಟ್ಟಿಯಾಗಿ ಓದಿ ಉಳಿದವರು ಕಿವಿಗೊಡುವುದೇ ಪದ್ಧತಿ. ಆದರೆ ಇಲ್ಲಿ ಅವರು ಸೆರೆಯಾಳುಗಳು.... ಆ ಪೋಲೀಸರವನು.... ಆತ ಯಾಕೆ ಪತ್ರಿಕೆ ಕೊಟ್ಟ?

ಚಿರುಕಂಡನ ದೃಷ್ಟಿ ಆ ಪೋಲೀಸನ ಮೇಲೆ ನೆಟ್ಟಿತು. ಯುವಕ ವಿದ್ಯೆಯ ಕುರುಹಿತ್ತು ಕಣ್ಣುಗಳಲ್ಲಿ. ಆತನೂ ಅರೆಮುಚ್ಚಿದ ಕಣ್ಣುಗಳಿಂದ ಒಬ್ಬೊಬ್ಬರನ್ನಾಗಿ ಕೈದಿಗಳನ್ನು ನೋಡುತ್ತಿದ್ದ. ಒಮ್ಮೆ ಆತನ ಮತ್ತು ಚಿರುಕಂಡನ ನೋಟಗಳು ಸಂಧಿಸಿದುವು. ಅರೆಕ್ಷಣ ಹಾಗೆಯೇ ಒಂದನ್ನೊಂದು ಇದಿರಿಸಿ ನಿಂತುವು. ಆತನ ತುಟಿಗಳ ಮೇಲೆ ಸೂಕ್ಷ್ಮ ನಗೆ ಮೂಡಿದಂತೆ ಚಿರುಕಂಡನಿಗೆ ಕಂಡಿತು.

ಆ ಭಾವನೆಯ ಹಿಂದೆಯೆ, ಇದು ಭ್ರಮೆಯೆಂದೂ ತೋರಿತು. ಮತ್ತೆ ವಿಚಾರ, ಇದ್ದರೂ ಇರಬಾರದೇಕೆ? ಕಯ್ಯೂರಿನಿಂದ ಸೈನ್ಯ ಸೇರಿದವರಲ್ಲೇ ತಮ್ಮವರಿರಲಿಲ್ಲವೆ? ಹಾಗೆಯೇ ಪೋಲೀಸು ಪಡೆಯಲ್ಲೂ ಎಲ್ಲರೂ ಸುಬ್ಬಯ್ಯನಂತೆಯೆ ಇರಬೇಕು—ಎಂದೇನು? 'ಹೆಚ್ಚಿನ ಪೋಲೀಸರೆಲ್ಲ ರೈತರ ಮಕ್ಕಳೇ ಎನ್ನುವುದು ಗಮನಾರ್ಹ. 'ಪುಸ್ತಕದಲ್ಲಿ ಓದಿದ್ದ ವಾಕ್ಯ. ಆದರೆ ಅವರು ಜನರನ್ನು ಸೇರುವುದು ಕೊನೆಯದಾಗಿ. ಕ್ರಾಂತಿಯ ವಿಜಯ ಸನ್ನಿಹಿತವಾಗುತ್ತ ಬಂದಂತೆ ಪೋಲೀಸರು ಮಿಲಿಟರಿ ಎಲ್ಲಾ, ಜನರ ಪಕ್ಷ ಸೇರುವರು...'

ಮಾಸ್ತರು ಓದು ಮುಗಿಸಿ ಪತ್ರಿಕೆಯನ್ನು ಚಿರುಕಂಡನತ್ತ ಕಳುಹಿದರು.

ಒಬ್ಬ ಪೋಲೀಸ್ ಅದೇ ಆಗ ಆ ಪತ್ರಿಕೆ ಕಂಡವನಂತೆ ಆಜ್ಞಾಪಿಸಿದ:

"ಯಾರದು? ಪತ್ರಿಕೆ ಓದಬಾರ್ದು!"

ಅವನ ಪಕ್ಕದಲ್ಲೇ ಇದ್ದ ಪೋಲೀಸನೆಂದ:

"ಹೋಗಲಿ ಬಿಡೋ."

ತಾವು ಓದಿದುದರ ಸಾರವನ್ನು ಮಾಸ್ತರು ಬಳಿಯಲ್ಲಿದ್ದವರಿಗೆ ಹೇಳಿದರು. ಅಷ್ಟು ಸುದ್ದಿ ಬಲು ಬೇಗನೆ ಎಲ್ಲರ ಸೊತ್ತಾಯಿತು.

ಮದ್ರಾಸ್ ಅಧಿಪತ್ಯದಲ್ಲಿ ರೈತಸಂಘವನ್ನು ಕಾನೂನುಬಾಹಿರಗೊಳಿಸಿದ್ದರು. ಹೊಸದುರ್ಗ ತಾಲ್ಲೂಕಿನಲ್ಲಿ ಸಭೆ ಮೆರವಣಿಗೆಗಳನ್ನು ನಿಷೇಧಿಸುವ 144ನೆಯ ವಿಧಿ ಇನ್ನೂ ಒಂದು ತಿಂಗಳ ಕಾಲ ಜಾರಿಯಲ್ಲಿರಬೇಕೆಂದು ಆಜ್ಞೆಯಾಗಿತ್ತು.

ರೈತಮುಖಂಡ ಅಪ್ಪು ಮತ್ತು ಸ್ವಯಂ ಸೇವಕ ದಳದ ನಾಯಕ ಅಬೂಬಕರ್ ಇವರಿಬ್ಬರ ಬಂಧನವಾಯಿತೆಂಬ ವಾರ್ತೆಯೂ ಪ್ರಕಟವಾಗಿತ್ತು.

ಮಂಗಲವಾಡಿ ನಿಲ್ದಾಣ. ಬಿಸಿಲು ಸ್ವಲ್ಪ ಕಡಮೆಯಾಗಿ ಕಡಲ ಕಡೆಯಿಂದ ಮೆಲ್ಲನೆ ಗಾಳಿ ಬೀಸತೊಡಗಿತ್ತು.

"ಮಾಸ್ತರೆ, ಕಣ್ಣನಿಗೆ ಗಂಟಲು ತುರಿಸ್ತದಂತೆ" ಎಂದ ಧಾಂಡಿಗ.

ಧಾಂಡಿಗನ ಸೂಚನೆಗೆ ತನ್ನ ವಿರೋಧವಿಲ್ಲ ಎನ್ನುವಂತೆ ಕಣ್ಣ ಮಾಸ್ತರ ದುಃಖ ನೋಡಿದ.

"ಹಾಗಾದರೆ ಕೇಳಿನೋಡು" ಎಂದರು ಮಾಸ್ತರು.

"ಜಮಾದಾರ ಸಾಹೇಬರೆ, ಒಂದೆರಡು ಹಾಡು ಹಾಡ್ಬಹುದೆ?" ಎಂದು ಕಣ್ಣ ಗಟ್ಟಿಯಾಗಿ ಕೇಳಿದ.

ಆದರೆ ಅಲ್ಲಿ ಜಮಾದಾರ ಇರಲಿಲ್ಲ. ತಾನೇ ಮುಖ್ಯಸ್ಥನೆಂದು ತಿಳಿದಿದ್ದ ನಡುವಯಸ್ಸಿನ ಪೋಲೀಸನೊಬ್ಬ ಗರ್ಜಿಸಿದ: "ಕೂಡದು! ಇದೇನು ಸಂಗೀತ ಕಚೇರೀಂತ ತಿಳಿದಿರೊ?"

ಪ್ರಭು ರಾಗವೆಳೆದ:

"ಇಲ್ಲ ಸರ್. ಒಂದೇ ಒಂದು ಸಿನಿಮಾ ಹಾಡು."

ಪೋಲೀಸರು ಸುಮ್ಮನಿದ್ದರೆಂದು, 'ಜ್ಞಾನಾಂಬಿಕಾ' ಚಿತ್ರದೊಂದು ಹಾಡನ್ನು ಕಣ್ಣ ಆರಂಭಿಸಿದ.

"ಮೆಲ್ಲಗೆ ಹಾಡು! ಹೊರಗೆ ಕೇಳಿಸ್ಬಾರದು!" ಪೋಲೀಸನ ಆಜ್ಞೆ.

ಮೆಲುದನಿಯಲ್ಲೇ ಹಾಡಿದ ಕಣ್ಣ. ಅದಾದ ಮೇಲೊಂದು ಜನಪದ ಹಾಡು. ಹಳ್ಳಿಯ ಬೆಡಗಿಯನ್ನು ಒಲಿಸಲು ಸೊಗಸುಗಾರನೊಬ್ಬ ಕಟ್ಟಿದ ಕವಿತೆ. ಆ ಬಳಿಕ ಒಂದರಮೇಲೊಂದು. ಹೊಸ ಕವಿಗಳ—ಹೊಸ ವಿಚಾರದ ಹಾಡುಗಳು. ಶೋಕ -ಸಂತಾಪದ, ಕ್ರೋಧ-ಆಹ್ವಾನದ ಗೀತೆಗಳು. ಸ್ವರವೇರಿತು. ಕಿಟಕಿಗಳಿಂದ ಹೊರಬಿದ್ದು, ಚಲಿಸುತ್ತಿದ್ದ ಗಾಡಿಗೆ ಹಿಮ್ಮುಖವಾಗಿ ಅದು ಹರಿಯಿತು. ಹಾದಿ ತಿರುಗಿಕೊಳ್ಳುತ್ತಿದ್ದಲ್ಲಿ ಇತರ ಪ್ರಯಾಣಿಕರಿಗೂ ಕೇಳಿಸಿತು—ಒಳಗೆ ಸಂಕೋಲೆಗಳಲ್ಲಿ ಬಂಧಿತರಾಗಿದ್ದವರನ್ನು ಒಂದಾಗಿ ಬೆಸೆಯಿತು.

ಇಬ್ಬರು ಮೂವರು ಪೋಲೀಸರು ಕೂಗಿದರು:

"ಇನ್ನು ಸಾಕು!"

"ಆಗಲಿ. ಕೊನೇದು ಒಂದೇ."

ಅದು ಮುನ್ನಡೆಯ ಗೀತ. ಕಣ್ಣನ ಕಂಠದೊಡನೆ ಎಲ್ಲ ಕೈದಿಗಳ ಸ್ವರಗಳೂ

ಬರೆತುವು.

ಪೋಲೀಸರು ಗಾಬರಿಯಾಗಿ, ಅದನ್ನು ನಿಲ್ಲಿಸಲೆಂದು ಕಿರಿಚಿದರು:

"ನಿಲ್ಲಿಸಿ ! ನಿಲ್ಲಿಸಿ! ಏನೂಂತ ತಿಳಕೊಂಡಿರಿ? ಕೈದಿಗಳು ನೀವೋ? ನಾವೋ?"

ಆ ರೈತರು ನಗುತ್ತ ಹಾಡಿದರು. ಉಕ್ಕೇರುತ್ತಿದ್ದ ಉತ್ಸಾಹದಿಂದ ಹಾಡಿದರು. ಸ್ವರ ಗಗನಕ್ಕೇರುವಂತೆ—ತಾವೆಲ್ಲ ಗಿಡುಗಗಳಾಗಿ ಸ್ವಚ್ಛಂದವಾಗಿ ಹಾರುವಂತೆ-ಹಾಡಿದರು.

ಅದು ಮುಗಿದೊಡನೆ ಪೋಲೀಸರ ಬಾಯಿಯಿಂದ ಬೈಗಳ ಮಂತ್ರಪಠನವಾಯಿತು. ರೈತರು ನಕ್ಕರು, ಅಷ್ಟೆ.

ಧಾಂಡಿಗ ಹೇಳಿದ:

"ಆಹಾ! ಕಣ್ಣ ಜತೇಲಿದ್ದರೆ ನಿಶ್ಚಿಂತೆಯಾಗಿ ಅಂಡಮಾನದವರೆಗೂ ಹೋಗ್ಬಹುದು."

......ಮಂಜೇಶ್ವರದಲ್ಲಿ ರೈಲು ನಿಂತಾಗ ಅಧಿಕಾರಿ ಆ ಡಬ್ಬಿಯ ಬಳಿ ಬಂದು ರೇಗಾಡಿದ:

"ಯಾವನೋ ಅದು ಹಾಡಿದ್ದು? ನೀವದನ್ನ ಕೇಳ್ತಾ ನಿಂತಿದ್ರೇನೋ ನಾಯಿ ಮಕ್ಕಳೆ? ಥೂ ನಿಮ್ಮಪ್ಪನ—"

ರೈತರಲ್ಲೊಬ್ಬನೆಂದ:

"ಆ ಹಾಡಿನಲ್ಲೆಲ್ಲಾ ಏನೂ ಇಲ್ಲಿಲ್ಲ ಸರ್. ಬೇಕಾದರೆ ಇನ್ನೊಮ್ಮೆ ಅಂದು ತೋರಿಸ್ತೇವೆ, ಕೇಳಿ!"

"ಮುಚ್ಚು ಬಾಯಿ !"

ಸಂಜೆಯ ಹೊತ್ತಿಗೆ ಮಂಗಳೂರು. ಆಗಿನ್ನೂ ಆರು ಘಂಟೆ.

ನಿಲ್ದಾಣದಿಂದ ನಗರಕ್ಕೆ ಏರಿಬಂದ ಹಾದಿಯ ತುಂಬಾ ಕೊರಕಲು ಕಲ್ಲು. ಎಡಭಾಗದ ಆಸ್ಪತ್ರೆಯಿಂದ ಹರಿದುಬರುತ್ತಿದ್ದ ತೆರೆದ ಗಟಾರದಿಂದ ಅಸಹ್ಯವಾದ ಕೆಟ್ಟ ವಾಸನೆ.

"ಇಸ್ಸಿ! ಥೂ !" ಎಂದ ಕುಟ್ಟಿಕೃಷ್ಣ.

ಪೋಲಿಸರಿಂದ ಸುತ್ತುವರಿಯಲ್ಪಟ್ಟು ಕೈದಿಗಳು ನಡೆದರು. ಹಂಪನಕಟ್ಟೆ-ಓಡಾಡುತ್ತಿದ್ದ ವಾಹನಗಳು ನಿಂತು ಪೋಲೀಸರೂ ಕೈದಿಗಳೂ ಬೀದಿ ದಾಟಲು ಆಸ್ಪದ ಮಾಡಿಕೊಟ್ಟುವು.

"ಇದು ಕೋರ್ಟು ರಸ್ತೆ" ಎಂದರು ಮಾಸ್ತರು, ತಾವು ನಡೆಯುತ್ತಿದ್ದ ಹಾದಿಯ ವಿಷಯವಾಗಿ.

"ನ್ಯಾಯದಿ ಹಾದಿ" ಎಂದು ಧಾಂಡಿಗ ಮಾಸ್ತರ ಮಾತಿಗೆ ಭಾಷ್ಯ ನುಡಿದ.

ಬೀದಿಯ ಅಂಗಡಿಗಳಿಂದೆಲ್ಲ ಈ ಮೆರವಣಿಗೆಯನ್ನು ಜನ ನೋಡಿದರು.

ಕಯ್ಯೂರಿನ ಆ ರೈತರಿಗಿದು ಅಪರಿಚಿತ ಊರು, ಅರ್ಥವಾಗದ ಭಾಷೆ, ನೋಡುತ್ತಿದ್ದವರೆಲ್ಲ ತಮಗಿಂತ ಭಿನ್ನರಾಗಿದ್ದ ಜನರು.

ತುಳು-ಕೊಂಕಣಿ-ಕನ್ನಡ ಭಾಷೆಗಳಲ್ಲಿ ಸುತ್ತುಮುತ್ತಲಿನಿಂದ ಮಾತುಗಳು ಕೇಳಿಸಿದುವು:

"ಇವರು ಯಾರು?"

"ಕೆಂಪು ಬಾವುಟದವರೊ?"

"ಕಳ್ಳರೋ ಏನೋ?"

ಅದು ಅರ್ಥವಾಗುತ್ತಿದ್ದ ಮಾಸ್ತರು ಪ್ರಭುವಿಗೆ ಹೇಳಿದರು:

"ನಾವು ಕಳ್ಳರಲ್ಲಾಂತ ಕನ್ನಡದಲ್ಲಿ ಸ್ವಲ್ಪ ಹೇಳಪ್ಪ."

ಬೇರೆ ಸಲಹೆಯೂ ಬಂತು.

"ಕಣ್ಣ ಒಂದು ಹಾಡು ಹೇಳ್ಲಿ. ಅವರಿಗೆ ಅರ್ಥವಾಗ್ತದೆ."

ಪ್ರಭು ಬಾಯಿ ತೆರೆಯುವುದಕ್ಕೆ ಮುಂಚೆ ಕಣ್ಣ ಹಾಡಿದ. ಅಧಿಕಾರಿ ಅವನೆಡೆಗೆ ನುಗ್ಗಿ ಆತನ ತಲೆಯ ಮೇಲೆ ಹೊಡೆದ, ಮುಖಕ್ಕೆ ಗುದ್ದಿದ. ಎರಡು ನಿಮಿಷ ಗದ್ದಲವಾಯಿತು. ಮತ್ತೆ ಶಾಂತಿ ನೆಲೆಸಿ ಮೆರವಣಿಗೆ ಜೈಲಿನತ್ತ ಸಾಗಿತ್ತು. ಆದರೆ ಅದಕ್ಕಿಂತ ಮುಂಚಿತವಾಗಿ, ಕಯ್ಯೂರಿನ ಕ್ರಾಂತಿಕಾರರನ್ನು ಸೆರೆಹಿಡಿದು ತಂದರೆಂಬ ಸುದ್ದಿ ನಗರದ ನಾಲ್ಕು ಮೂಲೆಗಳಿಗೆ ಧಾವಿಸಿತು....

..... ಆ ಅರವತ್ತು ಜನರಿಗೆ ಕೊಡಿಯಾಲಬೈಲಿನಲ್ಲಿದ್ದ ಸಬ್ ಜೈಲಿನ ಎತ್ತರದ ಗೋಡೆಗಳ ದರ್ಶನವಾದಾಗ ಕತ್ತಲಾಗಿತ್ತು. ಹೆಬ್ಬಾಗಿಲಿನ ಕಿಂಡಿಯೊಳಗಿನಿಂದ ಬಾಗಿಸಿ ಬಾಗಿಸಿ ಕೈದಿಗಳನ್ನು ಒಬ್ಬೊಬ್ಬರಾಗಿ ಒಳಕ್ಕೆ ತಳ್ಳಿದರು.

೫

ಸರಕಾರಕ್ಕೆ ಸಾವಿರ ಜವಾಬ್ದಾರಿ. ವಿವಿಧ ಯುದ್ಧರಂಗಗಳಿಗೆ ಭಾರತದ ಹೆಸರಿನಲ್ಲಿ ಸೈನ್ಯ-ಸಾಮಗ್ರಿ ಹೋಗಬೇಕು. ಅದನ್ನು ಸುಗಮಗೊಳಿಸಲು ಬೆಲ್ಲದಂತಹ ಮಾತನ್ನಾಡಿ ರಾಷ್ಟ್ರೀಯ ಮುಖಂಡರ ಮನ ಒಲಿಸಬೇಕು. ಅದು ಸಾಲದೆಂದು, ದೇಶದ ಹಲವು ನೂರು ಕಡೆ ಕಾನೂನು ನೆಮ್ಮದಿಯ ವಿಶೇಷ ರಕ್ಷಣೆ ಆಗಬೇಕು. ಸರಕಾರದ ದೃಷ್ಟಿಯಲ್ಲಿ ಕಯ್ಯೂರು ಪ್ರಕರಣಕ್ಕೆ ಅತ್ಯಂತ ಮಹತ್ವವಿತ್ತು. ಒಬ್ಬ ಪೋಲೀಸ ಸತ್ತನೆಂದೇನೂ ಅದು ತಲ್ಲಣಗೊಂಡಿರಲಿಲ್ಲ. ಸಾಮ್ರಾಜ್ಯಶಾಹಿಯ

ಉದ್ಯಾನದಲ್ಲಿ ಸುಬ್ಬಯ್ಯನೊಂದು ಗರಿಹುಲ್ಲು. ಗಾಬರಿಯಾದುದಕ್ಕೆ ನಿಜವಾದ ಕಾರಣ, ಭಾರತದ ನರಕುರಿ ಆ ಹುಲ್ಲನ್ನು ಮೂಸಿ ನೋಡಿತೆಂಬುದು.

ಈಗ ಆ ಕುರಿಯನ್ನು ದಂಡಿಸುವುದಗತ್ಯ. ಆದರೆ ಅದು ಸಾಮಾನ್ಯ ದಂಡನೆಯಾಗುವಂತಿಲ್ಲ. ಇನ್ನುಳಿದ ಕುರಿಮಂದೆಗೆಲ್ಲ ಆ ದಂಡನೆ ಮರೆಯಲಾಗದ ಪಾಠವಾಗಬೇಕು.

ಆದರೂ ದಂಡನೆಗೆ ಮುಂಚೆ ವಿಚಾರಣೆ ಅವಶ್ಯ. ತಾವೇ ಆರೋಪ ಹೊರಿಸಿ, ತಾವೇ ವಿಚಾರಣೆ ನಡೆಸಿ, ತಾವ್ವೇ ಶಿಕ್ಷಿಸುವುದು. ಆದರೆ ಏನಂತೆ? ಅದೇ ಕಾನೂನುಬದ್ಧ ದಂಡನೆ. ಆಗ ಲೋಕದ ಕಣ್ಣಲ್ಲಿ ಬ್ರಿಟಿಷರ ನ್ಯಾಯ ನೀತಿಯ ಹಿರಿಮೆಗೆ ಚ್ಯುತಿ ಬರುವುದುಂಟೆ?

ಸೆರೆಮನೆಯೊಳಗೆ ಸಹಬಾಂಧವರಿಗೆ ಮಾಸ್ತರು ಅದನ್ನೇ ವಿವರಿಸಿದರು:

"ನ್ಯಾಯಸ್ಥಾನ ಅನ್ನೋದೇನು ಆಕಾಶದಿಂದ ಬಿತ್ತೆ? ಅದನ್ನು ನಿರ್ಮಿಸಿರೋದು ಸರಕಾರವೇ. ಸರಕಾರದ ಉಪಯೋಗಕ್ಕಾಗಿಯೇ ನ್ಯಾಯಸ್ಥಾನ ಇರೋದು. ಅದು ರಾಜ್ಯಯಂತ್ರದ ಒಂದು ಗಾಲಿ. ಇದನ್ನು ನಾವು ಮೊದಲೇ ತಿಳಿದಿರೋದು ಮೇಲು."

.... ವಿಚಾರಣೆ ತಡವಾಯಿತು. ಕೈದಿಗಳು ಎರಡು ಸಾರೆ ಸಾಮಾನ್ಯ ನ್ಯಾಯಾಧೀಶರ ಮುಖ ನೋಡಿ ಬಂದರು. ಇನ್ನಿಬ್ಬರು ಆರೋಪಿಗಳಿಗಾಗಿ ಶೋಧನೆ ನಡೆದೇ ಇತ್ತು. ಇಬ್ಬರು—ಅದೇ ತಮಾಷೆ. ಶೇಖರ ಉರುಫ್ ಪಂಡಿತ; ಮತ್ತು ಮಾಧವನ್ ಉರುಫ್ ವರ್ಮ. ವಾಸ್ತವವಾಗಿ ಆ ನಾಲ್ಕೂ ಪಂಡಿತರ ವಿವಿಧ ಹೆಸರುಗಳೇ! ಆ ಪ್ರಸ್ತಾಪ ಬಂದಾಗಲೆಲ್ಲ ಕೈದಿಗಳು ಹೊಟ್ಟೆ ಹುಣ್ಣಾಗುವಂತೆ ನಗುತ್ತಿದ್ದರು. 'ಪಂಡಿತರು ಸಿಗದಿರಲಿ' ಎಂದು ದಿನವೂ ಅವರು ಆಶಯ ವ್ಯಕ್ತಪಡಿಸುತ್ತಿದ್ದರು.

ಎಡೆಬಿಡದೆ ಮಳೆ ಸುರಿಯಿತು.

ಅಪ್ಪುವಿನ ತಮ್ಮ ಬಂದು ಅಣ್ಣನನ್ನೂ ತಂದೆಯನ್ನೂ ಭೇಟಿ ಮಾಡಿದ. ಏನನ್ನು ಹೇಗೆ ಹೇಳಬೇಕೆಂದು ಸಿದ್ಧನಾಗಿಯೇ ಬಂದಿದ್ದ ಹುಡುಗನ ಮಾತಿನಿಂದ ಎಷ್ಟೋ ವಿಷಯಗಳು ತಿಳಿದುವು. ಜೇಲರು ತಮ್ಮನ್ನೇ ನೋಡುತ್ತಿದ್ದರೂ ಆತನೆಂದ:

"ನಂಟರು ಬಂದಿದ್ದವರೆಲ್ಲ ಹೋದರು. ಈಗ ಮಳೆಗಾಲ. ಆಗಲೆ ಐದಾರು ಮಳೆ ಜೋರಾಗಿ ಬಂತು. ಪುನಃ ಸಾಗುವಳಿ ಶುರುಮಾಡಿದ್ದೇವೆ. ಅತ್ತಿಗೆ ಅವರೆಲ್ಲ ಬಂದಿದ್ದಾರೆ."

ಅಂತೂ ಸಶಸ್ತ್ರದಳದ ಹಿಂಸೆ ಮುಕ್ತಾಯವಾಗಿತ್ತು. ಊರು ಬಿಟ್ಟಿದ್ದವರೆಲ್ಲ ಮರಳಿದ್ದರು, ಆ ಬಳಿಕ.

"ನಾನು ನೀಲೇಶ್ವರದ ಶಾಲೆಗೆ ಹ್ಯಾಗೆ ಹೋಗ್ಲಿ? ಮನೇಲಿ ಯಾರಿದ್ದಾರೆ ನೋಡ್ಕೊಳ್ಳೋರು? ಇಲ್ಲಿಗೆ ಸಾಕು. ಇನ್ನು ಹೋಗೋದಿಲ್ಲ. ಕುಂಞಂಬು ತಮ್ಮ ರಾಮ ಮಾತ್ರ ಹೋಗ್ತಾನಂತೆ."

ಅದು ಸ್ವಂತದ ವಿಷಯ. ಅನಂತರ:

"ಅಣ್ಣ, ನಿನಗೆ ಮೊದಲ್ನೆ ಸಲ ಕಾಯಿಲೆಯಾಗಿತ್ತು ನೋಡು. ಆಗ ಒಬ್ಬರು ವೈದ್ಯರು ಔಷಧಿ ಕೊಟ್ಟಿರ್ಲಿಲ್ವ? ಅವರು ಪುನಃ ಬಂದಿದ್ರು."

ಜೇಲರು ಕುಳಿತೇ ಇದ್ದ. ಆದರೂ ಪಂಡಿತರು ಕಯ್ಯೂರಿಗೆ ಬಂದು ಹೋಗಿದ್ದರೆಂಬ ಮುಖ್ಯ ಸುದ್ದಿ ಒಳಕ್ಕೆ ನುಸುಳಿಯೇಬಿಟ್ಟಿತು!

"ಅಮ್ಮನೂ ಬರ್ತೇನೆ ಅಂತ ಹಟ ಹಿಡೀತಾಳೆ. ಮುಂದಿನ ತಿಂಗಳು ಜತೇಲಿ ಕರಕೊಂಡ್ಬರ್ಲಾ?"

ಅಪ್ಪು ತಂದೆಯ ಮುಖ ನೋಡಿದ. ಅಲ್ಲಿ ಯಾವ ಪ್ರತಿಕ್ರಿಯೆಯನ್ನೂ ಕಾಣಲಿಲ್ಲ. ಉದ್ವೇಗ ತುಂಬಿದ ಧ್ವನಿಯಲ್ಲಿ ತಾನೇ ಹೇಳಿದ:

"ಬೇಡ. ನಾವೆಲ್ಲ ಚೆನ್ನಾಗಿದ್ದೇವೇಂತ ಹೇಳು. ವಿಚಾರಣೆ ಮುಗಿಸ್ಕೊಂಡು ಬೇಗನೆ ಬಂದ್ಬಿಡ್ತೇವೆ. ಓಣಂ ಹಬ್ಬದ ಹೊತ್ತಿಗೆ ಊರಲ್ಲಿರ್ತೇವೆ—ಅಂತ ಹೇಳು. ಮನೆಮನೆಗೂ ಹೋಗಿ ಹೇಳು."

"ಹೂಂ...."

....ಹಗಲು ಹೊತ್ತು ಕೊಠಡಿಗಳ ಹೊರಗೆ, ಚಚ್ಚೌಕವಾಗಿದ್ದ ಒಳ ಅಂಗಣದಲ್ಲಿ ಸೇರುತ್ತಿದ್ದ ಬಾಂಧವರಿಗೆಲ್ಲ ಅಪ್ಪು ತಮ್ಮ ತಂದ ಸುದ್ದಿಯನ್ನು ಮತ್ತೆ ಮತ್ತೆ ವಿವರಿಸಿ ಹೇಳಿದ. ಒಂದೊಂದು ಮಾತಿನ ಮೇಲೂ ವ್ಯಾಖ್ಯೆಯಾಯಿತು. "ಪಂಡಿತರು ಈ ಪರಿಸ್ಥಿತೀಲಿ ಹಳ್ಳಿಗೆ ಹೋಗಬಾರದಿತ್ತು" ಎಂದು ಆಕ್ಷೇಪಿಸಿದವರೇ ಹೆಚ್ಚು ಜನ. ಮಾಸ್ತರು ಮತ್ತು ಚಿರುಕಂಡ, "ಎಚ್ಚರಿಕೆಯಿಂದಲೇ ಹೋಗಿರ್ತಾರೆ. ಯಾರೂ ಹೋಗದೆ ಇದ್ದರೆ ಜನರಿಗೆ ಸಮಾಧಾನವಿರ್ತದೇನು?" ಎಂದು ಎಷ್ಟು ವಿವರಿಸಿದರೂ ಪ್ರಯೋಜನವಾಗಲಿಲ್ಲ.

ಆದರೆ ಕಯ್ಯೂರಿನಿಂದ ಅಂತಹ ಸಂದೇಶ ಪ್ರತಿದಿನವೂ ಬರುವುದು ಸಾಧ್ಯವಿತ್ತೆ? ಎಲ್ಲರಿಗೂ ಆಸೆ—ತಮ್ಮ ಸಂಬಂಧಿಕರು ಭೇಟಿಗೆ ಬಂದರಾಗುತ್ತಿತ್ತು ಎಂದು. ಆದರೆ ಅಷ್ಟೊಂದು ದೂರದಿಂದ ಅಷ್ಟೊಂದು ರೂಪಾಯಿ ಖರ್ಚು ಮಾಡಿ ಅವರೆಲ್ಲ ಬರುವಹಾಗಿತ್ತೆ?

ಅಂಥ ಮಾತು ಬಂದಾಗಲೆಲ್ಲ ಕೋರ ಹೇಳುತ್ತಿದ್ದ:

"ನಾನೇ ಪುಣ್ಯವಂತ. ಹೆಂಡತಿ ಬರಲಿಲ್ಲ, ಮಗ ಬರಲಿಲ್ಲ, ಅಂತ ಒಂದು ಯೋಚನೆಯಾದರೂ ನನಗುಂಟೆ?"

ಆದರೆ ವಾಸ್ತವವಾಗಿ ಅವರೆಲ್ಲರ ಯೋಚನೆಗಳೂ ಕಯ್ಯೂರಿಗೆ ಮೀಸಲಾಗಿದ್ದುವು. ಈ ವರ್ಷ ಎಷ್ಟು ಹೊಲಗಳಲ್ಲಿ ಎಷ್ಟು ಜನ ಸಾಗುವಳಿ ಮಾಡುವುದು ಸಾಧ್ಯವಾಗುವುದೊ? ಜಮೀನ್ದಾರರು ಇನ್ನೇನು ಅಕೃತ್ಯಗಳನ್ನು ಮಾಡುವರೊ?

ಹೆಚ್ಚು ಜನ ಸಪ್ಪಗಿದ್ದಾಗಲೆಲ್ಲ ಮಾಸ್ತರು ಕಣ್ಣನಿಗೆ "ಹಾಡು" ಎನ್ನುತ್ತಿದ್ದರು. ಆ ಗೀತೆಗಳ ಮುಲಾಮು ಎಲ್ಲರ ನೋವನ್ನೂ ಕಡಿಮೆ ಮಾಡುತ್ತಿತ್ತು..

ರಾತ್ರೆ ಹೊತ್ತು ಕೈದಿಗಳನ್ನು ಅಕ್ಕಪಕ್ಕದ ಹತ್ತು ಕೊಠಡಿಗಳಲ್ಲಿ ಹಾಕಿ ಬೀಗ ತಗಲಿಸುತ್ತಿದ್ದರು.

ಆ ಹೊಸ ಜೀವನಕ್ಕೆ ಬಲು ಬೇಗನೆ ಒಗ್ಗಿಕೊಂಡವರೇ ಹೆಚ್ಚು ಜನ. ಆದರೂ ಕೆಲವರು ಕಾಯಿಲೆ ಬಿದ್ದರು. ನಾಲ್ಕಾರು ಜನರಿಗೆ ವಾಂತಿ ಭೇದಿ. ಕುಟ್ಟಿಕೃಷ್ಣನಿಗೆ ಜ್ವರ. ಆದರೆ ಮಾಸ್ತರ ಆರೈಕೆಯ ಫಲವಾಗಿ ಎಲ್ಲರೂ ಗುಣಮುಖರಾದರು.

ಕೆಲವರಿಗೆ ಹೆಚ್ಚು ಬೇಸರವಾದಾಗ, ಅವರೊಳಗೆ ಮಾತು ತುಟಿಮೀರಿ ಜಗಳವಾಗುವುದಿತ್ತು. ಆಗಲೂ ಮಾಸ್ತರರ ಒಂದೋ ಎರಡೋ ಮಾತು ಕೇಳಿದೊಡನೆ ಅವರೆಲ್ಲ ಲಜ್ಜೆಯಿಂದ ತಲೆಬಾಗುತ್ತಿದ್ದರು.

ನಗರದ ಸಾಮಾಜಿಕ ಜೀವನದಿಂದ ಅನಿವಾರ್ಯವಾಗಿ ಬೇರ್ಪಟ್ಟು ಇರುತ್ತಿದ್ದ ಜೇಲರು, ಬಿಡುವಾದಾಗಲೆಲ್ಲ ಕೈದಿಗಳ ಬಳಿಗೆ ಬರುವುದಿತ್ತು. ಅಲ್ಲಿ ವಿದ್ಯಾವಂತರಾಗಿದ್ದವರೊಡನೆ ಅವರು ಮಾತನಾಡುತ್ತಿದ್ದರು. ಕಯ್ಯೂರು ಕೈದಿಗಳ ಗುಂಪಿನಲ್ಲಿ ಈ 'ವಿಶಿಷ್ಟ ಗೌರವ' ಪಡೆದವರು ಮಾಸ್ತರು. ಮುಗುಳುನಗೆಗೆ ಆತ್ಮೀಯತೆಗೆ ಅಲ್ಲಿ ಅವಕಾಶವಿರಲಿಲ್ಲವಾದರೂ ಆರೋಗ್ಯಕ್ಕೆ ಸಂಬಂಧಿಸಿಯೋ ಮಳೆಗೆ ಸಂಬಂಧಿಸಿಯೋ ಏನಾದರೂ ಮಾತುಕತೆಯಾಗುತ್ತಿತ್ತು. ಅಪ್ಪುವಿಗೆ ಈ ಸಂಭಾಷಣೆ ಇಷ್ಟವಾಗದೆ, "ಆತನ ಜತೇಲಿ ಮಾತಾಡೋದರಿಂದ ಏನು ಪ್ರಯೋಜನ? ಸುಮ್ಮನೆ ಸಮಯ ದಂಡ" ಎಂದು ಒಮ್ಮೆ ಟೀಕಿಸಿದ. "ನಮ್ಮದೇನು ಹೋಗ್ತದೆ! ಆತನಾಗಿಯೇ ಬರುವಾಗ ಮಾತಾಡೋದು ಮೇಲು. ಯಾವತ್ತಾದರೂ ಪ್ರಯೋಜನಕ್ಕೆ ಬೀಳ್ತದೆ" ಎಂದು ಆಗ ಮಾಸ್ತರು ಉತ್ತರವಿತ್ತರು.

ಆ ಮಾತಿನ ಸತ್ಯತೆಯನ್ನು ರುಜುಪಡಿಸುವ ಹಾಗೆ ಕೆಲ ದಿನಗಳಲ್ಲೆ ಒಂದು ಘಟನೆ ನಡೆಯಿತು.

ಒಮ್ಮೆ ಮಾಸ್ತರನ್ನು ಕಾಣಲು ಬಂದಾಗ ಜೇಲರು ಕೇಳಿದರು:

"ನಿಮ್ಗಿನ್ನೂ ವಿಷಯ ಗೊತ್ತಿಲ್ಲಾಂತ ತೋರ್‍ತದೆ."

ಮಾಸ್ತರು ಕುತೂಹಲ ತೋರಿದರು.

"ಇಲ್ಲ. ಏನು ವಿಷಯ?"

"ಕಲ್ಲಿಕೋಟೆಯಲ್ಲಿ ಕಯ್ಯೂರು ಕೈದಿಗಳ ರಕ್ಷಣಾ ಸಮಿತಿ ಅಂತ ಮಾಡಿದ್ದಾರೆ. ಪೇಪರಲ್ಲಿ ಬಂದಿದೆ."

ಮಾಸ್ತರ ಮುಖ ಅರಳಿತು.

"ಹಾಗೇನು?"

"ಸಮಿತಿಯವರು ಪ್ರಖ್ಯಾತ ವಕೀಲರನ್ನು ನೇಮಿಸ್ತಾರಂತೆ. ಅಂತೂ ಪ್ರಚಂಡರು ನೀವು. ಈ ಊರಲ್ಲಿ ಗೋರಿ ತೋಡಿದರೆ ಇನ್ನೆಲ್ಲೋ ಪ್ರತ್ಯಕ್ಷವಾಗ್ತೀರಲ್ಲ !"

ಮಾಸ್ತರು ನಕ್ಕರು:

"ಸ್ವಲ್ಪ ಆ ಪೇಪರು ಕಳಿಸ್ತೀರಾ ?"

ಜೇಲರು ಭುಜ ಕುಣಿಸಿ ಹೇಳಿದರು :

"ಇಲ್ಲ, ಅದೊಂದು ವಿಷಯ ಕೇಳ್ಬೇಡಿ:

... ಹಾಗೆ ಹೇಳಿದವರು ಒಂದು ಇಂಗ್ಲಿಷ್ ಪೇಪರಿನೊಡನೆ ಸಂಜೆ ಬಂದು, ಅದನ್ನು ಮಾಸ್ತರಿಗೆ ಕೊಟ್ಟರು.

"ಕೊನೇ ಕಾಲಮಿನಲ್ಲಿದೆ, ಓದಿ ನೋಡಿ."

"ಅಲ್ಲಿದ್ದುದು ಒಟ್ಟು ನಾಲ್ಕೇ ಸಾಲು. ಜೇಲರು ಎಷ್ಟು ಹೇಳಿದ್ದನೋ ಅಷ್ಟೆ. ಅದನ್ನೋದಿ ಬೇರೆಯೂ ಪುಟಗಳತ್ತ ಒಂದು ನಿಮಿಷ ಕಣ್ಣೋಡಿಸಿ ಪತ್ರಿಕೆಯನ್ನು ಮಾಸ್ತರು ಹಿಂದಿರುಗಿಸುತ್ತ "ಥ್ಯಾಂಕ್ಸ್!" ಎಂದರು.

ಜೇಲರು ಬಾಯ್ದೆರೆಯಾಗಿ ಹೇಳಿದ್ದ ವಾರ್ತೆಯನ್ನು ತಿಳಿದೇ ಕೈದಿಗಳಿಗೆ ಸಂತೋಷವಾಗಿತ್ತು. ಪತ್ರಿಕೆಯಲ್ಲಿ ಪ್ರಕಟವಾಗಿದ್ದುದು ನಿಜವೆಂದು ತಿಳಿದಾಗ ನೆಮ್ಮದಿಯಾಯಿತು. "ಸಮಿತಿ ಮಾಡಿದೋರು ಯಾರು? ಯಾರ ಹೆಸರಿದೆ?" ಎಂದು ಎಲ್ಲರೂ ಕೇಳಿದರು.

ಧಾಂಡಿದ ಹೇಳಿದ:

"ಆ ವಿವರವೆಲ್ಲ ಪತ್ರಿಕೆಯಲ್ಲಿ ಹಾಕ್ತಾರೇಂತ ತಿಳಿದಿರೇನು? ನಮ್ಮ ಸುದ್ದಿ ಯಾವಾಗಲೂ ಕೊನೇ ಪುಟದ ಕೊನೇಲೇ..."

....ಆದಾದ ಸ್ವಲ್ಪ ದಿನಗಳಲ್ಲೇ ಕಯ್ಯೂರಿನ ಮೊಕದ್ದಮೆಯ ವಿಚಾರಣೆಗಾಗಿ ವಿಶೇಷ ನ್ಯಾಯಾಧೀಶರೊಬ್ಬರ ನೇಮಕವಾಯಿತೆಂಬ ವಾರ್ತೆ ಬಂತು.

"ಇನ್ನು ವಿಚಾರಣೆ ತಡವಾಗಲಾರದು; ಅಲ್ಲವಾ ಮಾಸ್ತರೆ" ಎಂದು ಕುಂಞಂಬು ಕೇಳಿದ.

"ತಡವೇನೋ ಆಗಲಾರದು. ಆದರೆ ಇದೊಂದೇ ನ್ಯಾಯಸ್ಥಾನದಲ್ಲಿ ಮುಗೀತದೇಂತ ತಿಳೀಬೇಡಿ. ಇದು ಒಂದಂಕದ ನಾಟಕ ಅಲ್ಲವೇ ಅಲ್ಲ" ಎಂದರು ಮಾಸ್ತರು.

ಅಂತೂ ಈ ಮೊಕದ್ದಮೆ ಬೇಗನೆ ಇತ್ಯರ್ಥವಾಗದೆಂಬುದು ಎಲ್ಲರಿಗೂ ಸ್ಪಷ್ಟವಾಯಿತು. ಸುಳ್ಳು ಹೇಳಿ, ಇಲ್ಲದ ಆಸೆ ಹುಟ್ಟಿಸಿ, ನಿರಾಸೆಯಾದಾಗ ನೋವು ಹೆಚ್ಚಾಗಲು ಕಾರಣವಾಗುವುದರ ಬದಲು, ಕಹಿಯಾದ ನಿಜವನ್ನೇ ಹೇಳಿ ಅವರ ಹೃದಯಗಳನ್ನು ಮತ್ತಷ್ಟು ದೃಢಗೊಳಿಸಲು ಯತ್ನಿಸುವುದೇ ಸರಿ ಎಂದು ಮಾಸ್ತರು ನಂಬಿದ್ದರು.

ಬೇಸರದ ಮೋಡಗಳು ದಟ್ಟೈಸಿದಾಗ, ಅವರಿಗೆಲ್ಲ ಸಂಕಟವಾಗುತ್ತಿತ್ತು. ಈ ಮಂಗಳೂರು ಕಯ್ಯೂರಿನಿಂದ ಬಲು ದೂರ. ಅಲ್ಲೇ ಎಲ್ಲಾದರೂ ಸಮೀಪದಲ್ಲಿ ವಿಚಾರಣೆ ನಡೆದಿದ್ದರೆ, ಸಂಬಂಧಿಕರೊಡನೆ ಹೆಚ್ಚಿನ ಸಂಪರ್ಕ ಸಾಧ್ಯವಿರುತ್ತಿತ್ತು. ಕಯ್ಯೂರಿನ ಕಡೆಯಿಂದ ಬೀಸುವ ಗಾಳಿಯೇ ಸಾಕಾಗುತ್ತಿತ್ತು ಅವರಲ್ಲಿ ಚೈತನ್ಯ ತುಂಬಲು.

ಅಲ್ಲದೆ, ಆ ದಿನ ಬಂಧಿಸಿದಾಗ , ಹೆಚ್ಚಿನ ತಿಳಿವಳಿಕೆ ಇಲ್ಲದಿದ್ದ ಕೆಲ ರೈತರನ್ನೂ ಹಿಡಿದಿದ್ದರು. ಈಗ ಅವರ ವಿಷಯದಲ್ಲಿ ವಿಶೇಷ ಗಮನ ಕೊಡುವುದು ಅಗತ್ಯವಾಯಿತು. ಪ್ರಮುಖರೆಲ್ಲ ಅವರ ಜತೆಯಲ್ಲೇ ಹೆಚ್ಚಾಗಿ ಇರುತ್ತಿದ್ದು, ಅವರಲ್ಲಿ ಧೈರ್ಯವನ್ನೂ ಉತ್ಸಾಹವನ್ನೂ ತುಂಬಿದರು.

ಅಲ್ಲಿ ಜೀವನದ ಹಲವು ರಸ ನಿಮಿಷಗಳನ್ನು ಒದಗಿಸುತ್ತಿದ್ದವನು ಧಾಂಡಿಗ, ಪಹರೆಯವರೊಡನೆ ಸ್ನೇಹ ಬೆಳೆಸಿ, ಊರಿನವರು ಭೇಟಿಗೆ ಬಂದಾಗ ದುಡ್ಡು ಕೊಡಿಸುವೆನೆಂದು ಹೇಳಿ, ದಿನಕ್ಕೊಂದು ಕಟ್ಟು ಬೀಡಿ ದೊರೆಯುವಂತೆ ಆತ ಮಾಡಿದ. ಹಿಂದೆ ಅತಿಯಾಗಿ ಸೇದುತ್ತಿದ್ದ ಮಾಸ್ತರು ಈಗ ಮುಟ್ಟುತ್ತಲೇ ಇರಲಿಲ್ಲ. ಬೇರೆ ಕೆಲವರಿಗೆ ಸೇದುವ ಅಭ್ಯಾಸವಿರಲಿಲ್ಲ. ಅಂತೂ ಬೀಡಿ ಬೇಕೆನಿಸಿದವರಿಗೆ ಧಾಂಡಿಗ ನಾಯಕನಾದ. ಅತಿ ಕಡಿಮೆ ಬೀಡಿಗಳನ್ನು ಅತಿ ಹೆಚ್ಚು ಜನ -ಗುಪ್ತವಾಗಿ ಸೇದುವುದು ಸಾಧ್ಯವಾಗುವಂತೆ ಆತ ದಕ್ಷತೆಯಿಂದ ವ್ಯವಸ್ಥೆ ಮಾಡಿದ.

ಮನುಷ್ಯನ ಅನಿವಾರ್ಯ ಅವಶ್ಯಕತೆಗಳ ವಿಷಯ ಧಾಂಡಿಗ ಭಾಷಣ ಕೊಡುವುದಿತ್ತು.

"ದುಡಿಯುವ ಜೀವಕ್ಕೆ ಬೇರೇನು ಬೇಕು ಹೇಳಿ? ಒಂದು ಬೀಡಿ, ಒಂದು ಕಪ್ ಚಾ!"

ಅಲ್ಲಿದ್ದವರಿಗೆ ಚಹಾದ ನೆನಪಾಗಿ ಕೆಲವರು ಗೊಣಗಿದಾಗ, ಆತ ಗೋಗರೆಯುತ್ತ ಹೇಳುತ್ತಿದ್ದ:

"ಪೋಲೀಸರು ಎಲ್ಲಾ ಸರಿ. ಆದರೆ ಒಂದು ವಿಷಯದಲ್ಲಿ ಮೋಸ ಮಾಡಿದ್ರು. ಆ ಹೋಟೆಲು ರಾಮುಣ್ಣೀನ ಅವರು ಹಾಗೇ ಬಿಡೋದೆ? ಆತನನ್ನೂ ಇಲ್ಲಿಗೆ ಕಳಿಸಿದ್ದಿದ್ರೆ, ಆಗ ತೋರಿಸ್ತಿದ್ದೆವು ! ಏನು ಮಾಡೋಣ?"

೬

ಚಿರುಕಂಡ, ಅಪ್ಪು, ಮಾಸ್ತರು—ಈ ಮೂವರಿಗೆ ಕರೆ ಬಂತು, ಯಾರೋ ಭೇಟಿಗೆ ಬಂದಿದ್ದರು. ಭೇಟಿಯ ಕೊಠಡಿಗೆ ಹೊರಡುತ್ತ ಮೂವರೂ ಯೋಚಿಸಿದರು; ಯಾರಿರಬಹುದು? ಹಿಂದಿನ ದಿನವಷ್ಟೇ ಕಯ್ಯೂರಿನಿಂದ ಮಗಳೊಡನೆ ದೇವಕಿಯೂ, ಮಗವನ್ನೆತ್ತಿಕೊಂಡು ಜಾನಕಿಯೂ ಬಂದಿದ್ದರು.

ಈಗ ಇಷ್ಟರಲ್ಲೆ ಮತ್ತೆ ಯಾರು?

ರಕ್ಷಣಾ ಸಮಿತಿಯವರು ಬಂದಿದ್ದರೂ ಇರಬಹುದೆಂದು ಊಹಿಸುತ್ತಲೇ ಆ ಮೂವರು ಕೊಠಡಿಯನ್ನು ಹೊಕ್ಕರು. ಜೇಲರು ಆಗಲೇ ಕುಳಿತಿದ್ದರು. ಆ ಭೇಟಿಯ ಮಟ್ಟಿಗೆ ತರಿಸಿದ್ದ ಕುರ್ಚಿಯ ಮೇಲೊಬ್ಬರಿದ್ದರು—ಎತ್ತರದ ದೇಹ, ಕೆಂಪು ಕೆಂಪಗಿನ ತುಂಬುಮುಖ, ಗುಂಗುರು ಕೂದಲು, ತೆರೆದುಕೊಂಡು ನಗುತ್ತಲೇ ಇದ್ದ ತುಟಿಗಳು, ಕರಿಯ ಕೋಟು, ವಕೀಲರೆಂಬುದರಲ್ಲಿ ಸಂದೇಹವಿರಲಿಲ್ಲ. ಅವರ ಕೈಯಲ್ಲಿ ತೊಗಲಿನ ಚೀಲವಿತ್ತು.

ಆ ಮೂವರು ಬಂದೊಡನೆ ವಕೀಲರು ಎದ್ದುನಿಂತು ತಮ್ಮ ಪರಿಚಯ ಮಾಡಿಕೊಟ್ಟರು:

"ನಾನು ರಾಜಾರಾವ್, ವಕೀಲ, ನಿಮ್ಮ ಕಡೆಯ ವಕೀಲ..."

ಮೂವರು ಅವರಿಗೆ ಕೈಮುಗಿದು ನಮಸ್ಕರಿಸಿದರು.

ವಕೀಲರು ಎದ್ದು ನಿಂತುದು ಜೇಲರಿಗೆ ಸರಿಬೀಳಲಿಲ್ಲ. ಅವರು ಹೇಳಿದರು:

"ನೀವು ಕೂತ್ಕಳ್ಳಿ ಮಿಸ್ಟರ್ ರಾಜಾರಾವ್."

ಜೇಲರತ್ತ ನೋಡಿ ರಾಜಾರಾಯರು ವಿನಯದಿಂದ ಅಂದರು:

"ಹೇಳೋದಕ್ಕೆ ಸಂಕೋಚವಾಗ್ತದೆ ಇವರೆ. ಇದು ಖಾಸಗಿ ಭೇಟಿಯಲ್ಲ. ವಕೀಲನಾಗಿ ಕಕ್ಷಿಗಳನ್ನ ನೋಡೋದಕ್ಕೆ ಬಂದಿದ್ದೇನೆ. ಈ ಸಂಭಾಷಣೆ ನೀವು

ಕೇಳಬಾರದು. ಕಾನೂನು ಪ್ರಕಾರ—"

ಜೇಲರಿಗೆ ಕಾನೂನು ಗೊತ್ತಿತ್ತು. ಜೋರಾದ ಕರಿ ಇರುವೆ ಬೆರಳಿಗೆ ಕುಟುಕಿದಂತಾಗಿ, ಅವರೆದ್ದು ಹೊರಹೋದರು.

"ಈ ಭೇಟಿಗೆ ಸಮಯ ನಿರ್ಬಂಧವಿಲ್ಲ, ನೀವು ಕೂತ್ಕೊಳ್ಳೋದೇ ವಾಸಿ" ಎಂದರು ರಾಜಾರಾಯರು.

ಚಿರುಕಂಡ, ಅಪ್ಪು ಮತ್ತು ಮಾಸ್ತರು ಗೋಡೆಗೊರಗಿ ಕುಳಿತರು. ಅವರ ಎದುರು. ಕುರ್ಚಿಯ ಮೇಲೆ ಕೂತುಕೊಂಡು ವಕೀಲರು ಆ ಮೂವರು ಯಾರು ಯಾರೆಂದು ಕೇಳಿ ತಿಳಿದರು.

"ಮೊದಲು ಒಂದನೆಯ ಮತ್ತು ಎರಡನೆಯ ಆರೋಪಿಗಳಾಗಿ ಶೇಖರ ಉರುಫ್ ಪಂಡಿತ, ಮಾಧವನ್ ಉರುಫ್ ವರ್ಮ ಅಂತ ಹಾಕಿದ್ದರು. ಹಾಗೆ ಇಬ್ಬರಿಲ್ಲಾಂತ ನನಗೆ ತಿಳಿದಿದೆ. ಗುಟ್ಟು ಬಿಡಬಾರದು. ಮುಂದೆ ಮೊಕದ್ದಮೆಯಲ್ಲಿ ಅದನ್ನು ಉಪಯೋಗಿಸೋಣ. ಈಗ ಪಟ್ಟೀಲಿ, ಆ ಎರಡು ಹೆಸರುಗಳನ್ನು ಕೊನೇದಾಗಿ ಹಾಕಿದ್ದಾರೆ. ಮೊದಲ್ನೇ ಆರೋಪಿ ಅಪ್ಪು, ಎರಡನೆಯದಾಗಿ ಮಾಸ್ತರ್, ನಂಬರ್ ಮೂರು ಚಿರುಕಂಡ, ನಾಲ್ಕು ಪ್ರಭು, ಐದು ಕೋರ ಆರು ಕಣ್ಣ, ಏಳು ಕುಟ್ಟಿಕೃಷ್ಣ, ಎಂಟು ಅಬೂಬಕರ್ ಹೀಗೆ...."

ವಕೀಲರ ಕೈಯಲ್ಲಿದ್ದ ಕಾಗದದಲ್ಲಿ ಆ ವಿವರವಿತ್ತು.

ಮಾಸ್ತರ ಪ್ರಶ್ನೆಗಳಿಗೆ ಉತ್ತರವಾಗಿ ಅವರೆಂದರು:

"ಈ ತಿಂಗಳ ಕೊನೇಲಿ ವಿಚಾರಣೆ ಶುರುವಾಗ್ಬಹುದು. ತಮ್ಮ ಕಡೆಯಿಂದ ಅವರು ಮೂವತ್ತು ನಾಲ್ವತ್ತು ಜನ ಸಾಕ್ಷಿಗಳ ಹೆಸರು ಕೊಟ್ಟಿದ್ದಾರೆ."

"ಅಷ್ಟು ಜನ! ಸಾಧ್ಯವೇ ಇಲ್ಲ. ನಮ್ಮ ವಿರುದ್ಧ ಅಷ್ಟು ಜನ ಸಾಕ್ಷಿ ಕೊಡಲಾರರು" ಎಂದ ಅಪ್ಪು.

ಮಾತಿನ ಆ ರೀತಿ ರಾಜಾರಾಯರಿಗೆ ಹಿಡಿಸಲಿಲ್ಲ. ಅವರು ಸ್ವರವೇರಿಸಿ ಅಂದರು:

"ಹುಂ! ನಿಮ್ಮ ಪರವಾಗಿ ಸಾಕ್ಷಿ ಹೇಳೋರು ಎಷ್ಟು ಜನ ಸಿಗಬಹುದು?"

"ಇಡೀ ಕಯ್ಯೂರೇ ನಮ್ಮ ಕಡೆ!"

ಅಪ್ಪುವನ್ನು ತಡೆದು ಮಾಸ್ತರೆಂದರು:

"ದಬ್ಬಾಳಿಕೆಯಿಂದಾಗಿ ಸಾಕ್ಷಿಗಳು ಸಿಗೋದು ಸ್ವಲ್ಪ ಕಷ್ಟವಾದೀತು." ವಕೀಲರು ತಾವು ಗೆದ್ದೆವೆಂದು ನಕ್ಕು ನುಡಿದರು:

"ಸ್ವಲ್ಪ ಎಂಥದು? ಪೂರಾ ಕಷ್ಟವೇ, ಆ ಊರಿನಲ್ಲಿ, ಏನಾಗಿದೇಂತ ನಿಮಗೆ ಗೊತ್ತುಂಟೊ? ಸಾಕ್ಷಿ ತರಬೇಕಾದರೂ ನಾನೇ ಅಲ್ಲಿಗೆ ಹೋಗಬೇಕಾದೀತು."

"ಅದು ನಿಜ."

"ಚರ್ವತ್ತೂರಿನಿಂದ ನಡೆದುಕೊಂಡು ಹೋಗಬೇಕು, ಅಲ್ಲವೊ?"

"ಹೌದು. ಆದರೆ ಬೇರೆ ಅನು ಕೂಲವೆಲ್ಲ ನಮ್ಮವರು ಮಾಡ್ತಾರೆ."

"ಆಗಲಿ, ಆಗಲಿ. ನನ್ನ ಅನುಕೂಲದ ವಿಷಯ ಆಮೇಲೆ ಮಾತಾಡೋಣ. ಮೊದಲು ಈ ಕೇಸು ನಾವು ಗೆಲ್ಬೇಕು."

ಚಿರುಕಂಡ ಕೇಳಿದ:

"ಈ ಕೋರ್ಟಿನಲ್ಲಿ ಕೇಸು ಎಷ್ಟು ತಿಂಗಳು ನಡೀಬಹುದು?"

ವಕೀಲರು ಚಿರುಕಂಡನತ್ತ ಆಸಕ್ತಿಯಿಂದ ನೋಡಿ ಹೇಳಿದರು:

"ಕಡೇ ಪಕ್ಷ ನಾಲ್ಕು ತಿಂಗಳಾದರೂ ಆದೀತು. ಸ್ಪೆಷಲ್ ಕೋರ್ಟು ನ್ಯಾಯಾಧೀಶರು ಬೇಗನೆ ಯಾಕೆ ಮುಗಿಸ್ತಾರೆ ಹೇಳಿ?"

"ಈ ಕೋರ್ಟು ಆದ್ಮೇಲೆ?" ಎಂದ ಅಪ್ಪು.

ಈತನಿಗೆ ನ್ಯಾಯ ವ್ಯವಹರಣೆಯ ವಿಷಯ ಹೆಚ್ಚು ತಿಳಿಯದೆಂದು ಖಚಿತವಾಗಿ ವಕೀಲರೆಂದರು:

"ಈ ನ್ಯಾಯಾಧೀಶರು ಆರೋಪ ನಿರ್ದಿಷ್ಟಪಡಿಸಿ ಸೆಷನ್ಸ್‌ಗೆ ಹಾಕ್ತಾರೆ. ಸೆಷನ್ಸ್ ವ್ಯವಹರಣೆಗೆ ನಮ್ಮ ಕಡೆಗೆ ಮದರಾಸಿನಿಂದ ಪಿಳ್ಳೆಯೂ ಬರ್ತಾರಂತೆ. ಪಿಳ್ಳೆ ಹೆಸರು ಕೇಳಿದ್ದೀರೋ?"

ಅದು ಯಾರೋ, ಅಪ್ಪು-ಚಿರುಕಂಡರಿಗೆ ಗೊತ್ತಿರಲಿಲ್ಲ. ಮಾಸ್ತರೆಂದರು:

"ಹೂಂ. ಅವರು ಪ್ರಖ್ಯಾತ ವಕೀಲರೂಂತ ಗೊತ್ತು."

"ಸರಿ. ನೀವೇನೂ ಹೆದರ್ಬೇಡಿ."

ವಕೀಲರು ಹೆದರಿಕೆಯ ಪ್ರಸ್ತಾಪಮಾಡಿದರೆಂದು ಅಪ್ಪುವಿಗೆ ನಗು ಬಂತು. ಆದರೆ ನಗುವುದು ಅಭಾಸವೆನಿಸೀತೆಂದು ಆತ ತುಟಿಗಳನ್ನು ಬಿಗಿಹಿಡಿದ.

ತಾವು ಚಿತ್ರಿಸಿಕೊಂಡಿದ್ದ ಮೊಕದ್ದಮೆಯ ಬೆಳವಣಿಗೆಯ ಸೂಕ್ಷ್ಮ ರೂಪವನ್ನು ಆ ಮೂವರ ಮುಂದಿಡುತ್ತ, ವಕೀಲ ರಾಜಾರಾಯರೆಂದರು:

"ಆ ಪೋಲೀಸಿನವರು—ಏನು ಅವನ ಹೆಸರು? ಸುಡುಗಾಡಿಂದು..... ಹಾಂ.... ಸುಬ್ಬಯ್ಯ—ಅವನು ಸತ್ತದ್ದು ಆಕಸ್ಮಿಕ ಅಂತಲೇ ನಮ್ಮ ಡಿಫೆನ್ಸ್ ವಾದ. ಅದೇ ಸರಿಯಾದದ್ದು...."

ಇವರ ಮಾತುಕತೆ ಇನ್ನೂ ಮುಗಿದಿಲ್ಲವೇನೋ ಎಂದು ನೋಡುತ್ತ ಅತ್ತ ಸುಳಿದ ಜೇಲರನ್ನು ಕಂಡು, ತಗ್ಗಿದ ಸ್ವರದಲ್ಲಿ ವಕೀಲರು ಕೇಳಿದರು:

"ಇಲ್ಲಿ ನಿಮಗೆಲ್ಲ ಅನುಕೂಲವಾಗಿದೆಯೋ? ನೀವು ರಾಜಕೀಯ ಕೈದಿಗಳಲ್ಲ,

ಇಲ್ಲದೆ ಹೋದರೆ ಏನಾದರೂ ಮಾಡಬಹುದಿತ್ತು...."

"ಏನೂ ದೊಡ್ಡದಲ್ಲ. ಊರಿನಲ್ಲಿ ನಮ್ಮ ಜನ ಅನುಭವಿಸ್ತಿರೋ ಕಷ್ಟದ ಎದುರಲ್ಲಿ ನಮ್ಮದೇನೂ ದೊಡ್ಡ ವಿಷಯವಲ್ಲ" ಎಂದರು ಮಾಸ್ತರು.

ವಕೀಲರೆದ್ದು, "ವಿಚಾರಣೆಗೆ ಮುಂಚೆ ಇನ್ನೊಂದ್ಸಲ ಬರ್ತೇನೆ" ಎಂದು ಹೇಳಿ ಹೊರಬಿದ್ದರು

ಒಳಗೆ, ಎಡೆಬಿಡದ ಪ್ರಶ್ನೆಗಳಿಗೆ ಕಾರಣವಾಯಿತು. ವಕೀಲನ ಆಗಮನದ ವಾರ್ತೆ.

"ಅವರು ನಮ್ಮವರೆ?"

ಅದನ್ನು ಉತ್ತರಿಸುವುದು ಸುಲಭವಾಗಿರಲಿಲ್ಲ. ಮಾಸ್ತರೆಂದರು:

"ನಮ್ಮವರೆ ಅಂತ ಕೇಳಿದರೆ ಏನು ಹೇಳೋಣ? ನಮ್ಮ ಮಕ್ಕಳನ್ನು ಕಾಲೇಜಿಗೆ ಕಳಿಸಿ ವಕೀಲರಾಗಿ ಮಾಡೋ ಯೋಚನೆ ಹಿಂದೆಯೇ ನಮಗೆ ಇದ್ದಿದ್ರೆ ನಮ್ಮ ವಕೀಲರೇಂತ ಈಗ ಹೇಳೋದು ಸಾಧ್ಯವಾಗ್ತಿತ್ತು. ಇವರು ಶಹರದವರು. ಹತ್ತು ವರ್ಷಕ್ಕೆ ಹಿಂದೆ ಅವರೂ ಒಮ್ಮೆ ರಾಷ್ಟ್ರೀಯ ಹೋರಾಟದಲ್ಲಿ ಜೈಲು ನೋಡಿದ್ರು. ನಮ್ಮ ಮೇಲೆ ಸಹಾನುಭೂತಿ ಇರೋದರಿಂದಲೇ ನಮ್ಮ ಪರ ವಕಾಲತಿಗೆ ಒಪ್ಪಿದ್ದಾರೆ. ನಮ್ಮವರು ಜನರಿಂದ ಕೂಡಿಸಿಕೊಡೋ ಫೀಸು ಅಷ್ಟರಲ್ಲೇ ಇದೇಂತ ಅವರಿಗೆ ಗೊತ್ತೇ ಇದ್ದೀತು. ಮದರಾಸಿನ ಪಿಳ್ಳೆ ಅನ್ನೋರೂ ಅಷ್ಟೆ....."

.....ಮಾಸ್ತರು ಊಹಿಸಿ ಹೇಳಿದ್ದಂತೆಯೇ ಹೊರಗೆ ರಕ್ಷಣಾ ಸಮಿತಿಯವರು ಕರಪತ್ರಗಳನ್ನು ಹೊರಡಿಸಿದರು. ನ್ಯಾಯಾಸ್ಥಾನದ ವೆಚ್ಚಕ್ಕೋಸ್ಕರ ಸಹಾಯಧನ ಯಾಚನೆ; ಬಂಧಿತರ ಕುಟುಂಬಗಳಿಗಾಗಿ ನೆರವು ನೀಡಬೇಕೆಂದು ವಿನಂತಿ. ಈ ಕರಪತ್ರಗಳ ವಿಷಯ ಸೂಕ್ಷ್ಮವಾಗಿ ತಿಳಿಸಿದವಳು ಚಿರುಕಂಡನ ಹೆಂಡತಿ—ಭೇಟಿಗೆ ಬಂದಾಗ.

"ಹಿಂದೆ ಅಪ್ಪು ಅಣ್ಣನ ಕೈಲಿ ನೀವು ಸೀರೆ ಕಳಿಸ್ತಿರ್ಲಿಲ್ವ? ಅಂಥದೇ ಎರಡು ಮೂರು ಪುನಃ ಬಂದಿದೆ."

ತಾನು ಕಳುಹಿಸಿದ್ದ ಸೀರೆ.... ಚಿರುಕಂಡನಿಗೆ ಅದೇನೆಂದು ಮೊದಲು ಅರ್ಥವಾಗಲಿಲ್ಲ. ಬಳಿಕ, ವರ್ಷಗಳ ಹಿಂದೆ ತಾನು ಬರೆಯುತ್ತಿದ್ದ ಕರಪತ್ರಗಳನ್ನು ಅಪ್ಪು ತ್ರಿಕರಪುರಕ್ಕೊಯ್ದು ಚಂದುವಿಗೆ ಕೊಡುತ್ತಿದ್ದುದು ನೆನಪಾಗಿ ಹೆಂಡತಿಯ ಮಾತು ಅರ್ಥವಾಯಿತು.

ಮಿನುಗಿದ ಆತನ ಕಣ್ಣುಗಳನ್ನು ನೋಡಿ ಆಕೆಯೆಂದಳು:

"ಈಗ ದೂರದಿಂದ ಬರ್‍ತದೆ. ಈ ಸೀರೆಯೋರು ದುಡ್ಡು ಕೂಡಿಸ್ತಿದ್ದಾರೆ.

"ಅತ್ತೆಯೊಡನೆ ಬಂದಿದ್ದಳು ಆಕೆ. ಆ ಇಬ್ಬರು ಚಂದುವನ್ನೂ ಕಂಡರು. ಚಿರುಕಂಡನ ತಂದೆಯನ್ನೂ ಕಂಡರು. ತಾಯಿ ರೋದಿಸಬಹುದೆಂದು ಚಿರುಕಂಡ ಭಾವಿಸಿದ್ದ. ಕಂಬನಿಯೂ ವಯಸ್ಸಾದ ಆ ಕಣ್ಣುಗಳಲ್ಲಿ ಒತ್ತರಿಸಿ ಬಂದ ಹಾಗಿತ್ತು. ಅಷ್ಟನ್ನೆ ಸೆರಗಿನಿಂದೊತ್ತಿ ಆಕೆ ಹಿಂದಕ್ಕೆ ತಳ್ಳಿದಳು.....ಇನ್ನು ಏಕಾಕಿನಿಯಾಗಿ ಆ ಹೆಂಡತಿ ಪಡುತ್ತಿದ್ದ ಸುಖವೊ!

ಚಿರುಕಂಡನಿಗೆ ಹಿಡಿಸಲಾರದ ದುಃಖವಾಯಿತು. ಆದರೆ ಅದನ್ನೆಲ್ಲ ಹತ್ತಿಕ್ಕಿ ಆತ ನಗುನಗುತ್ತ ಮಾತನಾಡಿದ.

.......ಸುಮ್ಮನಿರುವಾಗಲೂ ನಗುವಂತೆಯೇ ಕಾಣುತ್ತಿದ್ದ ವಕೀಲರೂ ಬಂದು ಕರಪತ್ರಗಳ ವಿಷಯ ಹೇಳಿದರು.

"ನಿಮ್ಮವರು ಧೈರ್ಯವಂತರು! ಇಷ್ಟೊಂದು ದಬ್ಬಾಳಿಕೆ ನರಬೇಟೆ ಎಲ್ಲಾ ಕಡೆ ನಡೀತಿದ್ದರೂ ಚಟುವಟಿಕೆ ಸಾಗಿಸ್ತಾನೆ ಇದ್ದಾರಲ್ಲಾ!"

ಹಾಗೆ, ಎಲ್ಲಿಯೋ ಇದ್ದ ಯಾರನ್ನೋ ಹೊಗಳಿದ್ದರು ವಕೀಲರು. ಆದರೆ ಅಲ್ಲಿ ಬಂಧಿತರಾಗಿದ್ದ ಅವರೆಲ್ಲರಿಗೆ ಅದರಿಂದ ಸಂತೋಷವೆನಿಸಿತು.

....ಅಂತೂ ಕೊನೆಗೊಮ್ಮೆ ವಿಚಾರಣೆ ಶುರುವಾಯಿತು. ಜೈಲಿನಿಂದ ಕಯ್ಯೂರು ರೈತರು ಕೊಡಿಯಾಲಬೈಲಿನ ದಾರಿಯಲ್ಲಿ ಹಂಪನಕಟ್ಟೆ ಸೇರಿ ಮೈದಾನ ದಾಟಿ, ಕೆಂಪುಗೋಡೆಯ ಕೆಂಪು ಹಂಚಿನ ತಗ್ಗಾದ ಭಾವಣೆಯ ನ್ಯಾಯಾ ಸ್ಥಾನದತ್ತ ಸಾಗಿದರು.

ಅಲ್ಲಿ ನಡುವಯಸ್ಸಿನ ಕುಳ್ಳನೆಯ ನ್ಯಾಯಾಧೀಶರೊಬ್ಬರು ಯಾವನೋ ನರೆಗೂದಲಿನ ಉಪಾಧ್ಯಾಯನಂತೆ ತಮ್ಮ ಎತ್ತರದ ಸ್ಥಾನದಲ್ಲಿ ಕುಳಿತರು... ಅವರೆದುರು ಆರು ಸಾಲುಗಳಲ್ಲಿ ಕೈದಿಗಳು ನಿಂತರು. ಗದ್ದಲವೇ ಇಲ್ಲದ ವಾತಾವರಣ. ಮಳೆಗಾಲದ ಕೊನೆಯಲ್ಲಿ ಕಾಣುತ್ತಿದ್ದ ಬಿಸಿಲು, ಸೆಕೆ, ಬೆವರು. ಬಾಗಿಲ ಆಚೆಗೆ ಇದ್ದ ಜವಾನ ರಾಟೆಯ ಹಗ್ಗವನ್ನೆಳೆಯತೊಡಗಿದ. ನ್ಯಾಯಾಧೀಶರ ಮೇಲುಗಡೆ ಅರಿವೆಯ ಜಾಲರಿ ಪಂಕ ಚಲಿಸಿತು. ನ್ಯಾಯಾಧೀಶರ ಹಿಂಬದಿಯಲ್ಲಿ ಗೋಡೆಯನ್ನಲಂಕರಿಸಿತ್ತು, ಗತಿಸಿದ ವಿಕ್ಟೋರಿಯಾ ರಾಣಿಯ ಭಾವಚಿತ್ರ. ಕೆಳಗೆ ನ್ಯಾಯಾಧೀಶರೆದುರಲ್ಲಿ ಒಂದೆಡೆ ಪೋಲೀಸ್ ವಕೀಲರು, ಪೋಲೀಸ್ ಅಧಿಕಾರಿ: ಇನ್ನೊಂದೆಡೆ ರಾಜಾರಾಯರು, ಬೇರೆ ಕೆಲಸವಿಲ್ಲದೆ ವಿಚಾರಣೆ ನೋಡಲೆಂದು ಬಂದಿದ್ದ ಇಬ್ಬರು ಯುವಕ ವಕೀಲರು; ಅವರ ನಡುವೆ ನ್ಯಾಯಾಸ್ಥಾನದ ಗುಮಾಸ್ತೆಯರು; ಕಂದು ಹಾಳೆಗಳು, ಮಸಿ ಕುಡಿಕೆ, ಲೇಖನಿ.

ನ್ಯಾಯಾಧೀಶರು ಕೇಳಿದರು:

"ಶುರು ಮಾಡೋಣವೆ?"

ಕ್ಷೀಣ ಸ್ವರ. ಒಡಲ ಒಳಗಿಂದ ಬಂದುದಲ್ಲ. ವಿಚಾರಣೆಯ ದರ್ಪ-ವೈಭವ-ಭಯೋತ್ಪಾದಕ ಗಾಂಭೀರ್ಯಗಳನ್ನು ಚಿತ್ರಿಸಿ ಬಂದಿದ್ದ ಹಲವರು ಕೈದಿಗಳಿಗೆ ಇದೆಲ್ಲ ಸಪ್ಪೆಯಾಗಿ ತೋರಿತು. ಈ ವಿಚಾರಣೆಯಲ್ಲಿ ಹೆದರುವಂಥದೇನೂ ಇಲ್ಲ. ಕೆಲವು ದಿನಗಳಲ್ಲಿ ತಾವೆಲ್ಲ ಇಲ್ಲಿಂದ ಹೊರಗೆ ನಡೆದುಹೋಗಬಹುದು—ಎಂದು ಅವರು ಭಾವಿಸಿದರು. ಆದರೆ ಅಪ್ಪು ಮತ್ತಿತರರನ್ನು ಬೇರೆ ಸಂಕಟಗಳು ಬಾಧಿಸುತ್ತಿದ್ದುವು; ಇಲ್ಲಿ ತಮ್ಮವರು ಯಾರೂ ಇಲ್ಲ. ಕಯ್ಯೂರಲ್ಲೇ ಈ ವಿಚಾರಣೆ ನಡೆದಿದ್ದರೆ ಆಗ ಸಾಧ್ಯವಿತ್ತು, ಜನ ಬಂದು ಕಿಕ್ಕಿರಿದು ನೆರೆದ ನ್ಯಾಯಸ್ಥಾನ! ಇಲ್ಲಿ ಏನೂ ಇಲ್ಲ. ಬಲು ಮುಖ್ಯವಾದ ಐತಿಹಾಸಿಕವಾದ ವಿಚಾರಣೆಯೊಂದು, ನೋಡುವವರಿಲ್ಲದೆ ಕೇಳುವವರಿಲ್ಲದೆ ಆರಂಭವಾಗಿತ್ತು. ಮಾಸ್ತರು-ಚಿರುಕಂಡ ಬೇರೆ ಯೋಚನೆ ಮಾಡುತ್ತಿದ್ದರು. ಇನ್ನು ದಿನವೂ ತಾವಿಲ್ಲಿಗೆ ಬರಬೇಕು. ಆಗ ಕಯ್ಯೂರಿನ ತಮ್ಮವರೊಡನೆ ನಿತ್ಯ ಸಂಪರ್ಕ ಬೆಳೆಸಲು ತಾವೇನಾದರೂ ಮಾಡಬಹುದೆ? ಇಲ್ಲಿ ಯಾರೂ ಬಂದೇ ಇಲ್ಲವೆ? ಕಟ್ಟಡದ ಹೊರಗೆ ಅಲ್ಲಿ ಇಲ್ಲಿ ಕೆಲವರಿದ್ದರು. ಅವರಲ್ಲಿ ಕೆಲವರು ಗೂಢಚಾರರಿರಬಹುದು. ಉಳಿದವರು? ಪೋಲೀಸರಿಗೂ ಅಂಜದೆ ಇಲ್ಲಿ ತಮ್ಮೊಡನೆ ಮಾತನಾಡಬಲ್ಲವರು ಯಾರು—ಯಾರು?

ಇದು ಕಯ್ಯೂರು ಪೋಲೀಸು ಕೊಲೆ ಮೊಕದ್ದಮೆ.

ಶಾಲೆಯಲ್ಲಿ ಹಾಜರಿ ತೆಗೆದುಕೊಳ್ಳುವ ಹಾಗೆ ಅರವತ್ತು ಕೈದಿಗಳ ಹೆಸರುಗಳನ್ನೂ ಓದಿದ್ದಾಯಿತು. ಮುಂದಿನ ಎರಡು ಹೆಸರುಗಳನ್ನು ನ್ಯಾಯಸ್ಥಾನದ ಗುಮಾಸ್ತೆ ಓದಿದಾಗ, ಕೆಲ ಕೈದಿಗಳು ಪರಸ್ಪರ ಮುಖ ನೋಡಿಕೊಂಡು ನಸುನಕ್ಕರು.

ಇಂಗ್ಲೀಷಿನಲ್ಲಿ ನ್ಯಾಯಾಧೀಶರೆಂದರು:

"ಅಪಾದನೆಯ ವಿವರನ್ನೋದಿ."

ಅಷ್ಟು ಜನರ ಮೇಲೆ ಸರಕಾರದ ಪೋಲೀಸರು ನ್ಯಾಯಸ್ಥಾನಕ್ಕೆ ಕೊಟ್ಟ ದೂರು. ಸರಕಾರಿ ವಕೀಲರು ಮೂವತ್ತು ನಾಲ್ವತ್ತು ಪುಟಗಳಷ್ಟು ಬರೆದು ತಂದಿದ್ದುದನ್ನು ನಿಧಾನವಾಗಿ ಒಂಟಿ ಧ್ವನಿಯಲ್ಲಿ ಓದತೊಡಗಿದರು. ಇಂಗ್ಲಿಷ್ ಭಾಷೆ.

ಕೈದಿಗಳ ಪರ ವಕೀಲರು ಆಕ್ಷೇಪವೆತ್ತಿದರು:

"ಇದಕ್ಕೆ ನನ್ನ ಆಕ್ಷೇಪವಿದೆ, ಖಾವಂದರೆ. ಆಪಾದನೆಯ ವಿವರ ಏನು ಎಂಬೋದು ಆರೋಪಿಗಳಿಗೆ ಅರ್ಥವಾಗ್ತಾ ಇಲ್ಲ."

"ನೀವು ವಿವರಿಸಬಹುದಲ್ಲಾ!" ಎಂದರು ನ್ಯಾಯಾಧೀಶರು.

"ಮೂಲ ವಿಷಯ ಏನಂಬೋದು—ಆ ಒಕ್ಕಣೆ—ಇದ್ದಕ್ಕಿದ್ದ ಹಾಗೇ ಕೈದಿಗಳಿಗೆ ಅರ್ಥವಾಗಬೇಕಾದ್ದು ಆಗತ್ಯ ಖಾವಂದರೆ."

"ಮಲೆಯಾಳದಲ್ಲಿ ವಿಷಯ ಕೊಟ್ಟರೆ ನಮಗೆ ಅರ್ಥವಾಗದಲ್ಲ!"

ರಾಜರಾಯರು ಸಪ್ಪಗಿದ್ದರು. ಅದನ್ನು ಕಂಡು ನ್ಯಾಯಾಧೀಶರು ಹೇಳಿದರು:

"ಹೊಸದಾಗಿ ಈ ಸಲ ನೀವು ಹೇಗೆ ಹೇಳ್ತಿರೋದು ಆಶ್ಚರ್ಯವೇ! ಇಂಗ್ಲಿಷಿನಲ್ಲಿ ನಾವು ದಾಖಲೆಗಳನ್ನು ಬರೆದಿಡೋದು ಪದ್ಧತಿ. ನಿಮ್ಮ ಆಕ್ಷೇಪವನ್ನು ತಳ್ಳಿಹಾಕಿದೆ !"

ಪೋಲೀಸು ವಕೀಲರತ್ತ ನೋಡಿ, "ಮುಂದುವರಿಸಿ" ಎಂದು ನ್ಯಾಯಾಧೀಶರು ಸೂಚನೆ ಇತ್ತರು.

ಮತ್ತೆ ನಿಧಾನವಾದ ಒರಟು ಧ್ವನಿ ಕೇಳಿಸಿತು.

ರಾಜಾರಾಯರು ನಗುತ್ತ ಕುಳಿತರೂ ಹೆಚ್ಚಿನ ಕೈದಿಗಳು ತವುಗೆ ಸೋಲಾಯಿತೆಂದು ಸಿಟ್ಟಾದರು. ಮೊದಲ ಸಾಲಿನಲ್ಲೇ ಇದ್ದ ಅಪ್ಪು ಈ ಪ್ರಹಸನವನ್ನು ಕಂಡು ತುಚ್ಛೀಕಾರದ ನೋಟ ಬೀರುತ್ತ, ಎಡಕ್ಕೂ ಬಲಕ್ಕೂ ಸುತ್ತಲೂ ನೋಡಿದ.

ನ್ಯಾಯಾಧೀಶರು ಕುರ್ಚಿಯ ಬೆನ್ನಿಗೊರಗಿ, ಅದರ ಕೈಗಳ ಮೇಲೆ ತಮ್ಮ ಮೊಣಕೈಗಳನ್ನಿಟ್ಟರು. ಬಲ ಅಂಗೈಯ ಮೇಲೆ ಗಲ್ಲವನ್ನೂರಿದರು. ಈಗ ಅವರು ಮತ್ತೂ ಕುಳ್ಳಾಗಿ ತೋರಿ, ಕುರ್ಚಿಯ ಮೇಲಿರಿಸಿದ ಕರ್ಪೂರದ ಬೊಂಬೆಯಂತೆ ಕಂಡರು.

ಆ ವಿವರದಲ್ಲಿ, ಕಯ್ಯೂರು ಘಟನೆಯನ್ನು ಕುರಿತು ಪುನಃಪುನಃ ಬೇಸರ ಹುಟ್ಟಿಸುವಂತೆ ಬರೆದ ವರದಿಗಳಿದ್ದುವು. ಸರ್ಕಾರವನ್ನು ಉರುಳಿಸುವುದಕ್ಕೂ ಜಮೀನ್ದಾರರನ್ನು ಕೊಲೆಮಾಡುವುದಕ್ಕೂ ನಡೆಸಿದ ಒಳಸಂಚಿನ ಕತೆಯಿತ್ತು. ಈ ಪಿತೂರಿಯಲ್ಲಿ ಕಯ್ಯೂರಿನವರು ಮಾತ್ರವಲ್ಲದೆ ಸುತ್ತುಮುತ್ತಲಿನ ವಿಸ್ತಾರ ಪ್ರದೇಶದ ಜನರೂ ಪಾಲುಗೊಂಡಿದ್ದರೆಂಬ ಅಂಶವಿತ್ತು....

ರಾಜಾರಾಯರ ಹೊರತಾಗಿ ಆ ಫಿರ್ಯಾದು ಏನೆಂದು ಪೂರ್ಣ ತಿಳಿದವರು ಮಾಸ್ತರೊಬ್ಬರೆ. ಅವರು ಪ್ರತಿಯೊಂದು ಅಂಶವನ್ನೂ ಕಿವಿಗೊಟ್ಟು ಕೇಳಿದರು . ಉಳಿದವರು ಬೇಸರಗೊಂಡು ಆಕಳಿಸಿದರು. ಬೇಡಿಗಳನ್ನು ಬಿಟ್ಟಿದ್ದ ಕೈಗಳನ್ನೆತ್ತಿ ಗಡ್ಡ ತಲೆಗಳನ್ನು ತುರಿಸಿಕೊಂಡರು.

ವಿರಾಮದ ಹೊತ್ತಿಗೆ ಅದನ್ನೋದುವುದು ಮುಗಿಯಿತು. ಆದರೆ ಬೆಳಗ್ಗೆ ಗಂಜಿ ಕುಡಿದು ಬಂದಿದ್ದ ಕೈದಿಗಳು, ಸಶಸ್ತ್ರ ಪೋಲೀಸರ ಸರ್ಪಗಾವಲಿನಲ್ಲಿ

ನ್ಯಾಯಸ್ಥಾನದ ನೆಲದ ಮೇಲೆ ಕುಳಿತರು.

ಮಾಸ್ತರೊಡನೆ ಎರಡು ನಿಮಿಷ ಮಾತನಾಡಿ ರಾಜಾರಾಯರು ಹೊರ ಹೋಗಿ ಚಹ ಕುಡಿದು ಬಂದರು.

ಮತ್ತೊಮ್ಮೆ ನ್ಯಾಯಾಧೀಶರು ವೇಗವಾಗಿ ಪುಟ್ಟ ಹೆಜ್ಜೆಗಳನ್ನಿಡುತ್ತ ವೇದಿಕೆಯನ್ನೇರಿದಂತೆ, ಕೈದಿಗಳೆಲ್ಲ ಎದ್ದು ನಿಂತರು. ಅಭ್ಯಾಸಬಲದಿಂದ ಅಬೂಬಕರ್ ತಾವು ನಿಂತ ಸಾಲು ಸರಿಯಾಗಿದೆಯೇ ಎಂದು ನೋಡಿದ.

ಬಳಿಕ ನಡೆದುದು ಪೋಲೀಸ್ ಅಧಿಕಾರಿಯ ಸಾಕ್ಷ್ಯ. ಆತ, ಧೂರ್ತನಾಗಿ ಕ್ರೂರಿಯಾಗಿ ಕಯ್ಯೂರಿನಲ್ಲಿ ವರ್ತಿಸಿದ್ದ ವ್ಯಕ್ತಿ. ಸರಕಾರವನ್ನು ರೈತರ ಬಂಡಾಯದಿಂದ ಪಾರುಮಾಡಿದ ವೀರ ತಾನೆಂಬ ಅಹಂಭಾವದ ನೋಟದಿಂದಲೆ ಆತ ನ್ಯಾಯಾಧೀಶರು ಮತ್ತು ವಕೀಲರ ಕಡೆ ನೋಡಿದ. ಅಲ್ಲಿ ಬಂದು ಹಾಗೆ ಹೇಳಿಕೆ ಕೊಡಲು ತಾನು ಉದಾರ ಮನಸ್ಸಿನಿಂದ ಒಪ್ಪಿಕೊಂಡ ಮಹಾನ್ ವ್ಯಕ್ತಿಯೆಂಬಂತೆ ವರ್ತಿಸಿದ.

ಈಗ ನ್ಯಾಯಾಧೀಶರು ಮೇಜಿನ ಮೇಲೆ ಬಾಗಿ, ಸರಕಾರಿ ವಕೀಲರ ಪ್ರಶ್ನೆಗಳಿಗೆಲ್ಲ ಪೋಲೀಸ್ ಅಧಿಕಾರಿ ಕೊಟ್ಟ ಉತ್ತರಗಳನ್ನು ತಾವೂ ಬರೆದು ಕೊಂಡರು.

ಅಷ್ಟು ಹೊತ್ತಿಗಾಗಲೆ ಸಂಜೆಯಾಯಿತು. ಆ ದಿನದ ವಿಚಾರಣೆ ಮುಗಿದು, ಕೈದಿಗಳು ಮತ್ತೆ ನಗರದ ಬೀದಿಗಳನ್ನು ಹಾದು ಜೈಲು ಸೇರಿದರು.

.....ಮಾರನೆಯ ದಿನ ಆರೋಪಿಗಳ ಕಡೆ ವಕೀಲರು ಪೋಲೀಸ್ ಅಧಿಕಾರಿಯನ್ನು ಕುರಿತು ಪಾಟೀಸವಾಲು ನಡೆಸಿದರು. ರಾಜಾರಾಯರು ಕುಣಿ ಕುಣಿದು ಪ್ರಶ್ನೆಯ ಬಾಣಗಳನ್ನೆಸೆಯುತ್ತಿದ್ದ ವೈಖರಿ, ಅಧಿಕಾರಿ ಸಿಟ್ಟಗೆದ್ದು ಆತನ ಕರಿಯ ಮುಖವೂ ಕೆಂಪಗಾಗುತ್ತಿದ್ದುದು, ನೋಡುವ ಹಾಗಿದ್ದುವು. ಅದೇನೆಂಬುದೆಲ್ಲ ಅರ್ಥವಾಗದಿದ್ದರೂ ಕೈದಿಗಳು ಬೇಸರಗೊಳ್ಳದೆ ಉತ್ಸಾಹದಿಂದಲೇ ಇದ್ದರು. ಕೋಳಿಯ ಅಂಕದಲ್ಲಿನ ಪ್ರೇಕ್ಷಕರಾದರು ಅವರು. ಸರಕಾರಿ ವಕೀಲ ದುಗುಡದಿಂದ ಮಾತನಾಡಿದಾಗಲೆಲ್ಲ ಕೈಚಪ್ಪಾಳೆ ತಟ್ಟೋಣವೆ ಎನ್ನುವಷ್ಟು ಆ ಪ್ರೇಕ್ಷಕರು ಸಂತೋಷಪಟ್ಟರು.

ಆ ಸಂಜೆ, ಸಾಕ್ಷ್ಯಗಳನ್ನು ತರಲು ಹತ್ತು ದಿನಗಳ ಅವಧಿ ಬೇಕೆಂದು ಸರಕಾರಿ ವಕೀಲರು ನ್ಯಾಯಸ್ಥಾನವನ್ನು ಕೇಳಿಕೊಂಡರು.

ರಾಜಾರಾಯರ ಆಕ್ಷೇಪವನ್ನು ತಳ್ಳಿಹಾಕಿ ಸರಕಾರಿ ವಕೀಲರ ಅಪೇಕ್ಷೆಯನ್ನು ನ್ಯಾಯಸ್ಥಾನ ಮಂಜೂರು ಮಾಡಿತು.

ಹೊರಡುತ್ತ ರಾಜಾರಾಯರು ಮಾಸ್ತರಿಗೆಂದರು:

"ನೋಡಿದಿರಾ? ಹ್ಯಾಗಿದೆ? ಈ ಹತ್ತು ದಿವಸ ಸಾಕ್ಷಿಗಳನ್ನು ತರಬೇತಿ ಮಾಡ್ತಾರೆ!"

....ಹತ್ತು ದಿನಗಳ ಮೇಲೆ ವಿಚಾರಣೆಯ ಇನ್ನೊಂದು ದೃಶ್ಯ ಶುರುವಾದಾಗ ಎಲ್ಲ ಸಾಕ್ಷಿಗಳೂ ಬರಲಿಲ್ಲ. ದಿನವೂ ಇಬ್ಬರು ಮೂವರು ಬಂದರು. ಪ್ರತಿಯೊಂದು ಸಲವೂ ಯಾರು ಬರುವರೆಂದು ಕೈದಿಗಳು ತವಕಗೊಳ್ಳುವಂತಾಯಿತು. ನಾಲ್ವತ್ತು ಜನ ಇದ್ದರು ನಿಜ. ಆದರೆ ಆ ಸಂಖ್ಯೆಯಲ್ಲಿ ಅರ್ಧಕ್ಕಿಂತ ಹೆಚ್ಚು ಜನ ಕಯ್ಯೂರಿನವರಾಗಿರಲಿಲ್ಲ! ಉಳಿದವರಲ್ಲಿ ಕೆಲವರು ಊರಿನ ಇಬ್ಬರು ಜಮೀನ್ದಾರರ ಆಳುಗಳು; ಒಬ್ಬಿಬ್ಬರು ಸಂಘವನ್ನು ಒಪ್ಪದೆ ಇದ್ದ ಶ್ರೀಮಂತ ರೈತರು; ಒಬ್ಬಿಬ್ಬರು ಆಸೆ ಆಮಿಷಗಳಿಗೆ ಒಳಗಾದ ಬಡವರು.

ಪ್ರತಿ ದಿನ ಬಂದವರನ್ನು ಕೈದಿಗಳು ಕೆಂಗಣ್ಣಿನಿಂದ ದಿಟ್ಟಿಸಿದರು. ಆ ಸಾಕ್ಷಿಗಳು ಕೈದಿಗಳತ್ತ ನೇರವಾಗಿ ನೋಡಲೂ ಇಲ್ಲ.

'ದೇವರಾಣೆ ಮಾಡಿ ಸಾಕ್ಷ್ಯ ಹೇಳುತ್ತೇನೆ' ಎನ್ನುತ್ತ ಸುಳ್ಳಿನ ಗಿಳಿಪಾಠ ಒಪ್ಪಿಸಿದ ಅವರನ್ನೆಲ್ಲ ರಾಜಾರಾಯರು ಪಾಟೀಸವಾಲಿನಲ್ಲಿ ಹಣಿಸಿದರು; ಒಂಟಿ ಕಾಲಮೇಲೆ ನಿಲ್ಲಿಸಿ ಕುಣಿಸಿದರು. ಆಪಾದನೆಗಳನ್ನು ಸಮರ್ಥಿಸುವಂತೆ ಅವರು ಸುಳ್ಳಾಡಿದ್ದರೆಂಬುದನ್ನು ಎಳೆಯ ಮಗುವೂ ತಿಳಿಯುವ ಹಾಗಿತ್ತು. ಇಷ್ಟೆಲ್ಲ ಆದ ಮೇಲೆ ನ್ಯಾಯಾಧೀಶರು ವಿಚಾರಣೆ ಇಲ್ಲಿಗೆ ಸಾಕೆನ್ನಬಹುದು, ತಮ್ಮನ್ನು ಬಂಧವಿಮುಕ್ತಗೊಳಿಸಬಹುದು—ಎಂದು ಕೆಲ ರೈತರು ಭಾವಿಸಿದರು. ಮಲೆಯಾಳ ಭಾಷೆಯಲ್ಲೆ ಇದ್ದ ಸಾಕ್ಷಗಳನ್ನೆಲ್ಲ ಕೇಳಿದ್ದ ಅವರಿಗೆ, ಆಪಾದನೆ ಸುಳ್ಳೆಂದು ರುಜುವಾತಾಗಲು ಬೇರೇನೂ ಬೇಕೆನಿಸಲಿಲ್ಲ. ಆದರೆ ನ್ಯಾಯಾಧೀಶರು ಮೌನವಾಗಿದ್ದು, ಆಗಾಗ್ಗೆ ಪ್ರಶ್ನೋತ್ತರಗಳನ್ನು ಕೇಳಿ ತಿಳಿಯುತ್ತ, ಅದೆಲ್ಲವನ್ನೂ ಬರೆದುಕೊಳ್ಳುತ್ತಲೇ ಇದ್ದರು.

ನಡುನಡುವೆ ಭಾನುವಾರಗಳೂ ಬೇರೆ ರಜಾದಿನಗಳೂ ಬಂದವು. ಎರಡನೆಯ ತಿಂಗಳ ಹೊತ್ತಿಗೆ ಸರಕಾರೀ ಸಾಕ್ಷ್ಯ ಮುಗಿಯಿತು.

ತಮ್ಮ ಪರವಾಗಿ ಕಯ್ಯೂರೇ ಸಾಕ್ಷ್ಯ ನುಡಿಯುವುದು ಎಂದಿದ್ದ ಅಪ್ಪು. ಆದರೆ ವಸ್ತುಸ್ಥಿತಿ ಹಾಗಿರಲಿಲ್ಲ. ಆರೋಪಿಗಳ ವಿರುದ್ಧ ಸಾಕ್ಷ್ಯ ಹೇಳಿದವರಿಗೆ ಸರಕಾರ ಪ್ರಯಾಣಭತ್ತೆ ಕೊಡುತ್ತಿತ್ತು. ಆದರೆ, ಪರವಾಗಿ ಬರುವವರಿಗೆ ದೊರೆಯುತ್ತಿದ್ದುದು ಗೂಢಚಾರರ ವಕ್ರಕಟಾಕ್ಷ ಮಾತ್ರ. ಅಂಥ ಸ್ಥಿತಿಯಲ್ಲೂ ರೈತರು ಬರಲು ಸಿದ್ಧರಿದ್ದರು; ಆದರೆ ಅವರನ್ನು ಕರೆದುತರಲು ಕಾರ್ಯಕರ್ತರಿರಲಿಲ್ಲ.

ರಾಜಾರಾಯರು ಎದುರು ಪಕ್ಷದವರಿಗೆ ತಮ್ಮ ತೊಂದರೆಗಳ ಗುಟ್ಟು ಬಿಡದೆ ಇದ್ದರೂ ಮಾಸ್ತರು—ಚಿರುಕಂಡ—ಅಪ್ಪು ಇವರೊಡನೆ ಸಪ್ಪೆಮೋರೆಯಿಂದ ಮಾತಾಡಿದರು.

"ಸೆಷನ್ಸ್‌ನಲ್ಲಿ ನೋಡಿಕೊಳ್ಳೋಣ. ನಮ್ಮ ಸಾಕ್ಷಿಗಳನ್ನು ಸೆಷನ್ಸ್‌ಗೆ ತರ್‍ತೇವೆಂತ ಹೇಳ್ತೇನೆ, ಆಗದೆ?"

ಬೇರೆ ಯಾವ ಹಾದಿಯೂ ಇಲ್ಲದೇ ಮಾಸ್ತರೆಂದರು:

"ಹಾಗೇ ಮಾಡಿ."

ಆದರೆ ಒಂದು ತಮಾಷೆ ನಡೆಯಿತು. ತಮ್ಮ ಕೆಲಸ ಸುಲಭವಾಗಲೆಂದು ನ್ಯಾಯಾಧೀಶರು ರಾಜಾರಾಯರನ್ನು ಕರೆದು ಹೇಳಿದರು:

"ಯಾಕಪ್ಪಾ ಸುಮ್ಮನೆ ಉದ್ದ ಬೆಳಸ್ತೀರಾ? ಸೆಷನ್ಸ್‌ಗೆ ದಾಟಿಸಿದರೆ ಮುಗಿದು ಹೋಯ್ತು ನನ್ನ ಕೆಲಸ; ಅಲ್ಲಿ ಏನು ಬೇಕಾದರೂ ಮಾಡ್ಕೊಳ್ಳಿ. ಡಿಫೆನ್ಸ್ ಸಾಕ್ಷಿಗಳನ್ನು ಇಲ್ಲಿಗೇ ತರಬೇಕೂಂತ ಯಾಕೆ ಹಟ ಹಿಡಿತೀರಿ? ನಿಮ್ಮವರಿಗೆ ಸ್ವಲ್ಪ ಹೇಳಿ. ಎಲ್ಲರೂ ಸೇರಿ ಇದನ್ನು ಬೇಗನೆ ಮುಗಿಸೋಣ."

ರಾಜಾರಾಯರು ಈ ಸಲ ಮನಸ್ಸಿನೊಳಗೇ ನಕ್ಕು, ಒಂದು ಕ್ಷಣ ಗಂಭೀರವಾಗಿದ್ದು ಯೋಚಿಸಿದವರಂತೆ ನಟಿಸಿ ಅಂದರು:

"ಆಗಲಿ, ಹಾಗೇಂತ ತಮ್ಮ ಅಪೇಕ್ಷೆಯಾದರೆ ನನ್ನ ಆಕ್ಷೇಪವಿಲ್ಲ!"

....ನ್ಯಾಯಸ್ಥಾನ ಆಪಾದನೆಗಳನ್ನು ರೂಪಿಸಿತು.

ಮತ್ತೊಂದು ದಿನ ರಾಜಾರಾಯರ 'ಆಕಸ್ಮಿಕ'ದ ವಾದ ನಡೆಯಿತು. ಅದನ್ನು ಸಮರ್ಥಿಸಿ, ತಾವು ಅಪರಾಧಿಗಳಲ್ಲವೆಂದು ಕೈದಿಗಳು ಕೊಟ್ಟ ಹೇಳಿಕೆ ದಾಖಲಾಯಿತು.

ಕಯ್ಯೂರು ಪೋಲೀಸ್ ಕೊಲೆ ಮೊದ್ದಮೆಯನ್ನು 'ಸೆಷನ್ಸ್' ನ್ಯಾಯಸ್ಥಾನಕ್ಕೆ ಒಪ್ಪಿಸಿ, ವಿಶೇಷ ನ್ಯಾಯಾಧೀಶರು ಆಜ್ಞೆ ಬರೆದರು.

.... ಆ ಆಜ್ಞೆ ಏನೆಂಬುದನ್ನು ಮಾಸ್ತರು ವಿವರಿಸಿದಾಗ ಕೋರನೆಂದ:

"ಇನ್ನೊಂದು ಕೋರ್ಟಿನಲ್ಲಿ ಇದೇ ನಾಟಕ ಪುನಃ ಆಡ್ಬೇಕಾ? ಥೂ ಇವರ! ಇದೆಂಥ ವಿಚಾರಣೆಯೋ!"

2

ಆ ವರ್ಷ ಓಣಂ ಹಬ್ಬಕ್ಕೆ ಊರಿಗೆ ಮರಳುವೆವು—ಎಂದು ಹೇಳಿದ್ದ ಅಪ್ಪು, ಮೊದಲ ಬಾರಿ ತನ್ನ ತಮ್ಮ ಭೇಟಿಗೆ ಬಂದಿದ್ದಾಗ. ಆದರೆ ಕಯ್ಯೂರಿನಲ್ಲಿ ಈ ಸಾರೆ, ಅಪ್ಪು-

ಚಿರುಕಂಡರಾಗಲೀ ಅವರ ಸಂಗಡಿಗರಾಗಲೀ ಇಲ್ಲದೆಯೇ ಹಬ್ಬ ಕಳೆಯಿತು. ಕಯ್ಯೂರು ಚೇತರಿಸಿಕೊಂಡಿತ್ತು, ನಿಜ. ಪತ್ರಿಕೆಯೋದುವ, ಚರ್ಚಿಸುವ, 'ಸಾಹಿತ್ಯ'ವನ್ನು ಪ್ರಸಾರಮಾಡುವ ಚಟುವಟಿಕೆಗಳು ಗುಪ್ತವಾಗಿ ಮತ್ತೆ ನಡೆಯುತ್ತಿದ್ದುದೂ ನಿಜ. ಆದರೂ ತಮ್ಮವರೇ ಆದ ಅರವತ್ತು ಜನರಿಲ್ಲದೆ ಕಯ್ಯೂರು ಬಡವಾಗಿತ್ತು.

.... ಆ ಅರವತ್ತು ಜನ ಮಂಗಳೂರಿನ ಸೆರೆಮನೆಯಲ್ಲಿ ದಿನಕಳೆಯುತ್ತಿದ್ದರು, ಮೇಲಿನ ನ್ಯಾಯಸ್ಥಾನದ ವಿಚಾರಣೆಯನ್ನು ಇದಿರುನೋಡುತ್ತ. ಆ ದಿನ ಒಂದಲ್ಲ ಒಂದು ಕಾರಣಕ್ಕಾಗಿ ಮುಂದೆ ಬೀಳುತ್ತಿತ್ತು. ಇನ್ನೇನು ವಿಚಾರಣೆ ಮೊದಲಾಗಬೇಕು ಎನ್ನುವಷ್ಟರಲ್ಲಿ ವೃದ್ಧ ನ್ಯಾಯಾಧೀಶರು ನಿವೃತ್ತಿಗೆ ಮುನ್ನ ರಜೆ ಪಡೆದರು. ಬಳಿಕ ಕ್ರಿಸ್‌ಮಸ್ ಬಂತು. ಹೊಸ ವರ್ಷದಲ್ಲಿ ಹೊಸ ನ್ಯಾಯಾಧೀಶರು ತಡವಾಗಿ ಬಂದರು. ಬಂದವರೂ ಮೊದಲು, ಬೇರೆ ಮೂರು ನಾಲ್ಕು ಮೊಕದ್ದಮೆಗಳನ್ನು ಮುಗಿಸಿದರು.

ಈ ಸಲ ಕಯ್ಯೂರು ಕೈದಿಗಳು ನ್ಯಾಯಸ್ಥಾನ ಸೇರಿದುದು ಬೆಟ್ಟವನ್ನೇರಿ. ಅದು ಬಾವುಟ ಗುಡ್ಡ. ಅಲ್ಲಿ ನಿಂತರೆ, ಮರಗಳ ಕೆಳಗೆ ವಿರಮಿಸುತ್ತಿದ್ದ ಉದ್ಯಾನದ ಊರಿನಂತಿತ್ತು ಮಂಗಳೂರು. ಪಶ್ಚಿಮದಲ್ಲಿ, ವಿಶಾಲವಾದ ಬೋರ್ಗರೆಯುವ ನೀಲಿ ಸಮುದ್ರ. ಅಂತೂ ಆ ಜಾಗ ನ್ಯಾಯದಾನದ ಕೈಲಾಸ ಪರ್ವತವೇ!

ಕೈದಿಗಳಿಗೆ ಈ ಅನುಭವ ಹಿಂದಿನದಕ್ಕಿಂತ ಭಿನ್ನವಾಗಿತ್ತು. ಇಲ್ಲಿ ಹೆಚ್ಚು ಚಟುವಟಿಕೆಯನ್ನು ಅವರು ಕಂಡರು. ಮೊದಲ ದಿನ ಆ ಊರಿನ ವಿದ್ಯಾರ್ಥಿಗಳು, ಬೇರೆ ಹಲವರು, ಕೆಲ ಕಾರ್ಮಿಕರು, ಕಯ್ಯೂರಿನಿಂದ ಬಂದಿದ್ದ ಕೆಲವರು ರೈತರು, ನ್ಯಾಯಸ್ಥಾನದ ಹೊರಗೆ ಗುಂಪುಕಟ್ಟನಿಂತ ಪ್ರೇಕ್ಷಕರಾದರು. ಪತ್ರಿಕಾಪ್ರತಿನಿಧಿಗಳೂ ಅಲ್ಲಿದ್ದರು. ನ್ಯಾಯಸ್ಥಾನ—ಅಂದರೆ ಸರಕಾರವೇ—ನೇಮಿಸಿದ ಜ್ಯೂರಿಗಳು ಬೇರೆ. ಇದರಿಂದ ವಿಚಾರಣೆಯ ಮೊದಲ ದಿನ ಕಳೆ ಕಟ್ಟಿತು.

ಆದರೆ ಹೀಗಾದುದು ಅದೊಂದು ದಿನ ಮಾತ್ರ. ಅನಂತರದ ದಿನಗಳು ಮತ್ತೆ ಬೇಸರಕ್ಕೆ ಕಾರಣವಾದುವು. ಪ್ರೇಕ್ಷಕರು ಕಡಮೆಯಾದರು. ಅಲ್ಲಿ ನಡೆದುದೆಲ್ಲ ಹಿಂದಿನ ನ್ಯಾಯಸ್ಥಾನದ ಪುನರಾವೃತ್ತಿಯೇ.

ಆರೋಪಿಗಳ ಪರವಾಗಿ ವಕಾಲತ್ತು ವಹಿಸಲು ಈಗ ಮದರಾಸಿನಿಂದ ಪಿಳ್ಳೆಯೂ ಬಂದಿದ್ದರು. ಓರಣವಾಗಿ ಪೋಷಾಕು ಧರಿಸುವ ಅವರ ರೀತಿ, ಇಬ್ಬಾಗಮಾಡಿ ಹಿಂದಕ್ಕೆ ಬಾಚಿದ ಕ್ರಾಪು, ಸದಾ ಎಚ್ಚರವಿರುತ್ತಿದ್ದ ಕಣ್ಣುಗಳು ಎಲ್ಲರ ಗಮನವನ್ನೂ ಸೆಳೆಯುವಹಾಗಿದ್ದುವು. ರಾಜಾರಾಯರ ಜತೆ ಕೂಡಿ ದಕ್ಷತೆಯಿಂದ ಅವರು ಕೈದಿಗಳ

ರಕ್ಷಣೆಯಲ್ಲಿ ನಿರತರಾದರು.

ಈ ಮೇಲಣ ನ್ಯಾಯಾಧೀಶರ ಹಿಂದೆ ಗೋಡೆಯ ಮೇಲೆ, ಪಂಚಮ ಜಾರ್ಜರ ಚಿತ್ರವಿತ್ತು. ತಲೆಯ ಮೇಲುಗಡೆ ಶ್ರೀಮಂತವಾಗಿ ತೋರುತ್ತಿದ್ದ ಅರಿವೆಯ ಜಾಲರಿ ಪಂಕ. ನ್ಯಾಯಾಧೀಶರ ತುಂಬಿಕೊಂಡಿದ್ದ ಆಗಲ ಮುಖಕ್ಕಿಂತ ಹಿರಿದಾಗಿತ್ತು ಅವರ ಶುಭ್ರ ರುಮಾಲು. ಹಣೆಯ ಮೇಲೆ ಮೂರುನಾಮ. ಅವು ಮೇಲಕ್ಕೇರಿ ರುಮಾಲಿನೊಳಗೆ ಅವಿತಂತೆ ಕಾಣಿಸುತ್ತಿತ್ತು. ಯಾರು ಏನೇ ಅಂದರೂ ಅವರು, "ಹೌದು, ಹೌದು" ಎಂದು ತಲೆಯಾಡಿಸಿ ಸುಮ್ಮನಾಗುತ್ತಿದ್ದರು.

ಈ ಸಲ ಪೋಲೀಸರ ಪರ ಸಾಕ್ಷಿಗಳ ಸಂಖ್ಯೆ ಇಳಿಮುಖವಾಯಿತು. ಹಿಂದೆ ಹೇಳುದುದಕ್ಕೆ ವ್ಯತಿರಿಕ್ತವಾಗಿ ಸಾಕ್ಷ್ಯ ನುಡಿಯಬಹುದೆಂಬ ಶಂಕೆಯಿಂದ, ಕೆಲವರನ್ನು ಅವರು ಬಿಟ್ಟುಬಿಟ್ಟಿದ್ದರು. ಆರೋಪಿಗಳ ಪರವಾಗಿ ಹತ್ತು ಜನ ಗಂಡಸರು ಮತ್ತು ಹೆಂಗಸರು ಸಾಕ್ಷ್ಯಕೊಟ್ಟರು. ಅವರ ಮಾತಿನಲ್ಲಿ ದೃಢತೆಯಿತ್ತು. ಘಟನೆಯಾದಾಗ ಆ ಜಾಗದಲ್ಲಿ ಎಷ್ಟೋ ಜನ ಆರೋಪಿಗಳು ಇರಲೇ ಇಲ್ಲವೆಂದು, ಪೋಲೀಸನ ಸಾವು ಆಕಸ್ಮಿಕವೆಂದು, ರೈತ ಸಂಘಟನೆ ಕ್ರಮಬದ್ಧ ವಾಗಿತ್ತೆಂದು ವಕೀಲದ್ವಯರು ತೋರಿಸಿಕೊಟ್ಟರು.

ಸರಕಾರದ ವಕೀಲರ ಮರುಸವಾಲುಗಳಿಗೆ, ಬೆದರಿಕೆ-ಗರ್ಜನೆಗಳಿಗೆ, ಆ ಸಾಕ್ಷಿಗಳು ಯಾರೂ ಮಣಿಯಲಿಲ್ಲ.

ಅಂತಹ ಘಳಿಗೆಯಲ್ಲೆಲ್ಲ ಹೆಚ್ಚಿನ ಕೈದಿಗಳಿಗೆ ಅನಿಸುತ್ತಿತ್ತು:

"ನಮಗೆ ಜಯ ಖಂಡಿತ. ಬೇಗನೆ ನಾವೆಲ್ಲ ವಾಪಸಾಗುವುದು ಖಂಡಿತ!"

ಆದರೆ ಮಾಸ್ತರು, ಚಿರುಕಂಡ, ಅಪ್ಪು ಮತ್ತಿತರರು ಮೌನವಾಗಿಯೇ ಇದ್ದರು. ಅವರು ಹೊರಗೆ ಹಸನ್ಮುಖಿಗಳಾಗಿ ತೋರುತ್ತಿದ್ದರೂ ಒಳಗೆ ಅಂಥದೇ ಎಂದು ಹೇಳಲಾಗದ ಕೊರಗು ಅವರನ್ನ ಬಾಧಿಸುತ್ತಿತ್ತು.

ವಿಚಾರಣೆ ಮುಕ್ತಾಯವಾಗುವ ದಿನ ಬಂತು. ಆ ದಿನ ಆರೋಪಿಗಳ ಪರವಾಗಿ ಪಿಳ್ಳೆ, ಎಣೆ ಇಲ್ಲದ ವಾಕ್ಪ್ರೌಢಿಮೆಯನ್ನು ತೋರಿದರು. ಸೂಜಿ ಬಿದ್ದರೂ ಸದ್ದಾಗುವ ಹಾಗೆ ನ್ಯಾಯಸ್ಥಾನ ನಿಶ್ಶಬ್ದವಾಗಿತ್ತು. ಇಂಗ್ಲಿಷಿನಲ್ಲಿದ್ದ ಆ ವಾದ ಕೈದಿಗಳಲ್ಲಿ ಮಾಸ್ತರೊಬ್ಬರಿಗೇ ಅರ್ಥವಾಯಿತು. ಉಳಿದವರು ಆಗಾಗ್ಗೆ ಮಾಸ್ತರ ಮುಖ ನೋಡಿದರು. ಹಾಗೆ ನೋಡಿ ಅಲ್ಲಿ ಕಂಡ ಪ್ರತಿಕ್ರಿಯೆಯ ಆಧಾರದ ಮೇಲೆ ಅವರು ಪಿಳ್ಳೆ ಹೇಳುತ್ತಿದ್ದುದನ್ನು ಅರ್ಥಮಾಡಿಕೊಂಡರು.

ಪಿಳ್ಳೆಯ ವಾದದಲ್ಲಿ ಎದೆಗಾರಿಕೆಯಿತ್ತು. ಮೊನಚಾದ ಬಾಣದ ಹಾಗಿತ್ತು ಒಂದೊಂದು ಮಾತೂ.... ಅವರೆಂದರು:

"ಜಮೀನ್ದಾರರು ನಡೆಸುವ ಸುಲಿಗೆಯ ರಕ್ಷಣೆಗಾಗಿ ಪೋಲೀಸರು ಹೂಡಿರುವ ಒಳಸಂಚೇ ಈ ಪ್ರಕರಣ. ಪೋಲೀಸನೊಬ್ಬನ ಆಕಸ್ಮಿಕ ಸಾವನ್ನು ಆಧಾರವಾಗಿ ಮಾಡಿ, ಈ ಪ್ರಾಂತದ ರೈತ ಸಂಘಟನೆಯನ್ನೇ ನಿರ್ನಾಮಗೊಳಿಸಲು ಈ ಮೊಕದ್ದಮೆ ಮೂಲಕ ಯತ್ನಿಸಲಾಗಿದೆ. ಘಟನೆಯ ದಿನ ತಲಚೇರಿಯ ರಾತ್ರಿ ಶಾಲೆಯಲ್ಲಿ ಪಾಠ ಹೇಳಿಕೊಡುತ್ತಿದ್ದರೆಂದು ಯಾವ ಸಂದೇಹಕ್ಕೂ ಆಸ್ಪದವಿಲ್ಲದಂತೆ ಸಾಬೀತಾಗಿರುವ ಮಾಸ್ತರು, ಪೋಲೀಸನ ಕೊಲೆ ಮೊಕದ್ದಮೆಯಲ್ಲಿ ಆರೋಪಿ! ಹಲವಾರು ಮೈಲುಗಳಾಚೆ ಇದ್ದ ಪ್ರಭು ಮತ್ತಿತರರು ಆರೋಪಿಗಳು! ಘಟನೆ ನಡೆದ ಸ್ಥಳದಲ್ಲೇ ಇರದಿದ್ದ ಚಿರುಕಂಡ-ಅಪ್ಪು ಮತ್ತು ಅವರಿಗೆ ಜನ್ಮಕೊಟ್ಟ ವೃದ್ಧ ರೈತರಿಬ್ಬರು ಆರೋಪಿಗಳು! ಬೇರೆ ಕೆಲವರೆಷ್ಟೋ ಜನ ಆಗ ಇದ್ದದ್ದು ತಮ್ಮ ಗುಡಿಸಲುಗಳಲ್ಲಿ, ಶಾಂತವಾಗಿ ಮೆರವಣಿಗೆ ಹೋದುದೇ ಉಳಿದವರ ತಪ್ಪು! ಇಷ್ಟೇ ಅಲ್ಲ, ಪೋಲೀಸರ ಪ್ರಕಾರ ಇನ್ನೂ ಸೆರೆಸಿಗದೇ ಇರುವ ಇಬ್ಬರು ಆರೋಪಿಗಳಿದ್ದಾರೆ. ಶೇಖರ ಉರುಫ್ ಪಂಡಿತ-ಮಾಧವನ್ ಉರುಫ್ ವರ್ಮ. ಇಂಥ ಹೆಸರಿನ ವ್ಯಕ್ತಿಗಳಾದರೂ ಇದ್ದಾರೇನು? ಈ ಹೆಸರಿನ ರೈತರು ಯಾವ ಕಾಲದಲ್ಲೂ ಕಯ್ಯೂರಿನಲ್ಲಿ ಇರಲಿಲ್ಲ ಎಂದರೆ ಖಾವಂದರಿಗೂ ಆಶ್ಚರ್ಯವಾದೀತು! ಪಂಡಿತ ಎಂಬವರೊಬ್ಬರು ಮಲಬಾರಿನ ರೈತ ಮುಖಂಡರೆಂದು ನಾನು ಕೇಳಿದ್ದೇನೆ. ಅವರು ಯಾವ ಊರಿನವರೋ ಯಾರಿಗೂ ತಿಳಿಯದು. ಅವರನ್ನು ಕಂಡವರೂ ಇಲ್ಲಿ ಇಲ್ಲ. ಇನ್ನು ವರ್ಮ ಎಂಬುವರು ಯಾರೋ? ಯಾವ ವರ್ಮ? ಯಾವ ರಾಜಮನೆತನದವರು? ಒಬ್ಬರಿಗೂ ತಿಳಿಯದು. ಆದರೆ ಸರ್ವಜ್ಞರಾದ ಪೋಲೀಸರು ಅಂಥ ಇಬ್ಬರನ್ನು ಈ ಮೊಕದ್ದಮೆಯಲ್ಲಿ ಆರೋಪಿಗಳಾಗಿ ಮಾಡಿದ್ದಾರೆ! ಇಲ್ಲಿ ರಾಜದ್ರೋಹದ ಒಳಸಂಚಿನ ಮಾತಾದರೂ ಯಾಕೆ ಬಂದಿದೆ? ನಾನು ಬಲ್ಲೆ. ರಾಜ್ಯಯಂತ್ರದ ಸಹಾಯವಿದ್ದೂ, ರೈತರು ಪೋಲೀಸನ ಕೊಲೆ ಮಾಡಿದರೆಂದು ರುಜುಪಡಿಸುವುದು ದುಸ್ಸಾಧ್ಯ ಎಂದು ಸರ್ಕಾರಿ ವಕೀಲರಿಗೆ ಗೊತ್ತಿದೆ. ಆ ಕಾರಣದಿಂದ ಸರ್ಕಾರವನ್ನು ಉರುಳಿಸಲು ಈ ಬಡ ರೈತರು ಗುಪ್ತವಾಗಿ ಸಂಚು ನಡೆಸಿದರೆಂಬ ವಾದ! ಈ ರೀತಿ ಪ್ರಕರಣಕ್ಕೆ ಅತ್ಯಂತ ಗಂಭೀರ ಸ್ವರೂಪ ಕೊಡಲು ಯತ್ನಿಸಿದ್ದಾರೆ... ಈ ವ್ಯವಹರಣೆ ನಡೆದಿರುವ ರೀತಿಯನ್ನಾದರೂ ನೋಡಿ. ತಪಾಸಣೆಯ ಹೆಸರಿನಲ್ಲಿ ದಬ್ಬಾಳಿಕೆ ನಡೆಯಿತು. ಯಾವ ವಿವೇಚನೆಯೂ ಇಲ್ಲದೆ ಬಂಧನಗಳಾದುವು. ಮೊದಮೊದಲು ರೈತರನ್ನು ಹೆದರಿಸಿ ಬೆದರಿಸಿ ಆರೋಪಿಗಳ ಪರ ಯಾರೂ ಸಾಕ್ಷ್ಯ ಕೊಡದಂತೆ ಮಾಡಿದರು. ಹಾವು ಹದ್ದುಗಳನ್ನು ಯಾವಾಗಲೂ ವಿರೋಧಿಸುವ ಗುಬ್ಬಚ್ಚಿ ತನ್ನ ಗೂಡಿನಲ್ಲಿ

ನೆಮ್ಮದಿಯಿಂದ ಇರಬೇಕೂಂತ ಬಯಸಿದರೆ, ಸೂರ್ಯ ಮುಳುಗದ ಸಾಮ್ರಾಜ್ಯವನ್ನೇ ಆಳುವ ಸರಕಾರ ಅದರ ಮೇಲೆ ಪ್ರಯೋಗಿಸಿದ್ದು ಬ್ರಹ್ಮಾಸ್ತ್ರ....!"

ಅಲೆಯಲೆಯಾಗಿ ಹೊರಟ ಆ ಮಾತುಗಳೆಲ್ಲ ನ್ಯಾಯಸ್ಥಾನವನ್ನು ವ್ಯಾಪಿಸಿದುವು. ಅಲ್ಲಿ ಸ್ಥಳ ಸಾಲದೆ ಬಾಗಿಲು ಕಿಟಕಿಗಳಿಂದ ಹೊರಕ್ಕೆ ಹರಿದುವು. ಮಾತು ತುಂಬಿದ ವಾತಾವರಣದಿಂದ ಉಸಿರು ಕಟ್ಟಿದ ನ್ಯಾಯಾಧೀಶರು ತಾವು ಕುಗ್ಗಿದೆವೆಂದು ಭ್ರಮೆಗೊಂಡು, ಮತ್ತೂ ನೇರವಾಗಿ ಕುಳಿತರು.

... ಆ ದಿನ ಕಳೆದು ಮತ್ತೊಂದು ದಿನ.

ಪಿಳ್ಳೆ ಮತ್ತು ರಾಜಾರಾವ್ ಕೈದಿಗಳತ್ತ ಬಂದು ಮಾತನಾಡಿದರು:

"ನಮ್ಮಿಂದ ಸಾಧ್ಯವಿರೋದೆಲ್ಲ ನಾವು ಮಾಡಿದ್ದೇವೆ."

ಚಿರುಕಂಡ ಕೇಳಿದ: "ತೀರ್ಪು ಯಾವತ್ತು? ಇನ್ನೇನಿದೆ?"

"ಯಾವತ್ತೂಂತ ನಾಳೆ ತಿಳಿಸ್ಬಹುದು. ವ್ಯವಹರಣೆಯನ್ನೆಲ್ಲ ಜ್ಯೂರಿಗಳಿಗೋಸ್ಕರ ಇವತ್ತು ನ್ಯಾಯಾಧೀಶರು ಸೂಕ್ಷ್ಮಾವಲೋಕನ ಮಾಡ್ತಾರೆ" ಎಂದರು ಪಿಳ್ಳೆ.

ಮಾಸ್ತರು ಮಾತನಾಡಿದರು:

"ಜ್ಯೂರಿ ಅಭಿಪ್ರಾಯ ಹ್ಯಾಗಿದ್ದೀತು?"

"ಅದರಿಂದೇನೂ ಪ್ರಯೋಜನವಿಲ್ಲ ಮಾಸ್ತರೆ. ಅವರ ಅಭಿಪ್ರಾಯದ ಮೇಲೆ ನ್ಯಾಯಾಧೀಶರು ತೀರ್ಪು ಕೊಡ್ತಾರೇಂತ ತಿಳಿದಿರಾ?"

"ಹಾಗಲ್ಲ ಆದರೂ—"

"ಅವರಲ್ಲಿ ಒಬ್ಬಿಬ್ಬರನ್ನು ಬಿಟ್ಟು ಉಳಿದವರೆಲ್ಲಾ 'ದೋಷಿಗಳು' ಅಂತಲೇ ಅಂದಾರು."

ರಾಜಾರಾವ್ ಹೇಳಿದರು:

"ತೀರ್ಪಿನ ದಿವಸ ಕಯ್ಯೂರಿನ ನಿಮ್ಮವರಿಗೆಲ್ಲ ಬರೋದಕ್ಕೆ ಹೇಳೋಣವೇನು?"

'ಹೂಂ' ಎನ್ನಬೇಕೆಂದು ತೋರಿತು ಅಪ್ಪು ಮತ್ತಿತರ ಹಲವರಿಗೆ. ಬಿಡುಗಡೆಯಾದರೆ ಆ ಕ್ಷಣವೆ ಬಾಂಧವರ ತೋಳತೆಕ್ಕೆಗೆ ಬೀಳುವುದು ಎಷ್ಟು ಸುಖಕರ! ಮಾಸ್ತರು, ಸುಮ್ಮನಿದ್ದ ಚಿರುಕಂಡನ ಅಭಿಪ್ರಾಯವನ್ನೂ ಕೇಳಿದರು; ಅಪ್ಪುವನ್ನೂ ವಿಚಾರಿಸಿದರು. ಬಳಿಕ ಇಳಿದನಿಯಲ್ಲಿ ಅವರೆಂದರು:

"ಬೇಡ. ಅವರಿಗೆ ದಿನ ತಿಳಿಯಬಾರದು. ತೀರ್ಪು ಹ್ಯಾಗಿರುತ್ತೋ ಯಾರು ಬಲ್ಲರು?"

....ತೀರ್ಪು ಕೊಡುವ ದಿನ ಗೊತ್ತಾಯಿತು.

ಆ ದಿನ ಸಮೀಪಿಸಿದಂತೆ, ಕೈದಿಗಳ ಮನಸ್ಸಿಗೆ ನೆಮ್ಮದಿ ಇರಲಿಲ್ಲ. ತನ್ನ ನಗೆಮಾತುಗಳು ಈಗೀಗ ವಿಫಲವಾಗುತ್ತ ಬಂದುವೆಂದು ಧಾಂಡಿಗನೂ ಮುಖ ಬಿಳಿಗಿಸಿಕೊಂಡು ಸಿಳ್ಳು ಹಾಕುತ್ತ ಕುಳಿತ.

ಮನಸಿನ ದುಗುಡ ತಡೆಯಲಾರದೆ ಅಪ್ಪು ಕೇಳಿದ:

"ತೀರ್ಪು ಕೊಡೋದಕ್ಕೆ ಅವರು ಇಷ್ಟು ದಿನ ಯಾಕೆ ತಗೋಬೇಕು? ಇನ್ನೂ ಅವರು ತೀರ್ಮಾನ ಮಾಡಿಲ್ಲ—ಅಂತಲೆ?"

ಪ್ರಭು ಮಾತನಾಡಿದ:

"ತೀರ್ಪು ಬರೀಬೇಕಲ್ಲ ! ಅದಿನ್ನೇನು ನೂರು ಪುಟವಿರ್ತ್ತದೋ ಸಾವಿರ ಪುಟ ಇರ್ತದೋ!"

ಆ ಪರಿಸ್ಥಿತಿಯಲ್ಲೂ ತಿಳಿವಳಿಕೆಯ ಮಾತನ್ನು ಮಾಸ್ತರು ಆಡಿದರು:

"ಇಂಥ ಸಂದರ್ಭಗಳಲ್ಲಿ ನ್ಯಾಯಸ್ಥಾನದಲ್ಲಿ ನಡೆಯೋದೇ ಹೀಗೆ. ಈ ಮೊಕದ್ದಮೆ ಹ್ಯಾಗಿರ್ಬೇಕು? ಏನು ತೀರ್ಪು ಕೊಡಬೇಕು?—ಅನ್ನೋದೆಲ್ಲಾ ಮೊದಲೇ ತೀರ್ಮಾನವಾಗಿರ್ತದೆ. ವಿಚಾರಣೆಯ ನಾಟಕವೆಲ್ಲ ಪೂರ್ತಿಯಾದ್ಮೇಲೆ ತೀರ್ಪು ಹೇಳ್ತಾರೆ..."

ಒಬ್ಬ ರೈತನೆಂದ:

"ಈ ನ್ಯಾಯಸ್ಥಾನವೇ ಕೊನೇದೇನೂ ಅಲ್ಲವಲ್ಲ!"

ಕೋರ ಧ್ವನಿ ತೆಗೆದ.

"ಏನು? ಬೇರೊಂದು ಕೋರ್ಟಿನಲ್ಲಿ ಇನ್ನೊಂದ್ಸಾರ ಇದೇ ನಾಟಕ ಆಗಬೇಕು ಅಂತೀರಾ?"

ಮಾಸ್ತರು ನಕ್ಕು ಹೇಳಿದರು:

"ಉಚ್ಚ ನ್ಯಾಯಸ್ಥಾನದಲ್ಲಿ ಬಹಳ ಸುಲಭ. ಅಲ್ಲಿ ಆರೋಪಿಗಳ ಮುಖ ನೋಡದೆಯೇ ತೀರ್ಪು ಕೊಡ್ತಾರೆ."

.....ತೀರ್ಪು ಕೊಡುವ ದಿನ ಕಯ್ಯೂರಿನಿಂದ ಯಾರೂ ಬಂದಿರಲಿಲ್ಲ. ಆದರೆ ಮಂಗಳೂರಿನವರೇ ನ್ಯಾಯಸ್ಥಾನದಲ್ಲಿ ಕಿಕ್ಕಿರಿದು ನೆರೆದಿದ್ದರು.

ನ್ಯಾಯಾಧೀಶರು ತಡವಾಗಿ ಬಂದರು. ಬಂದವರೇ ಬರೆದು ತಂದಿದ್ದುದನ್ನು ಅವಸರ ಅವಸರವಾಗಿ ಓದತೊಡಗಿದರು—ಅದು ನೂರು ಪುಟಗಳಷ್ಟಿದ್ದ ತೀರ್ಪು. ಪೂರ್ತಿ ಓದಿದರೆ ಸಂಜೆಯ ಹೊತ್ತಿಗೂ ಮುಗಿಯುತ್ತಿತ್ತೋ ಇಲ್ಲವೊ. ಅವರು ಏನು ಓದುತ್ತಿದ್ದರೆಂಬುದು ಸ್ಪಷ್ಟವಾಗದಹಾಗಿತ್ತು ಓದಿನ ವೇಗ. ನಡುನಡುವೆ,

ಓದದೆಯೇ ಪುಟಗಳನ್ನು ಅವರು ತಿರುವಿದರು. ಅಲ್ಲಿ ನೆಲೆಸಿದ್ದ ನೀರವತೆಯಲ್ಲಿ ಹಾಗೆ ಹಾಳೆ ತಿರುವಿದ ಸದ್ದು ಕೂಡ ಕೇಳಿಸಿತು.... ಅವರು ನಿಧಾನಿಸಿದುದು ಕೊನೆಯ ಭಾಗ ಬಂದಾಗ ಮಾತ್ರ. ಅದು ಶಿಕ್ಷೆಯ ವಿವರ.

ನ್ಯಾಯಸ್ಥಾನದ ಹಿರಿ ಗುಮಾಸ್ತೆ ಆ ಭಾಗವನ್ನು ಮಲೆಯಾಳಿ ಭಾಷೆಯಲ್ಲಿ ಕೈದಿಗಳಿಗೆ ತಿಳಿಸಿ ಹೇಳಿದ. ಒಟ್ಟಿನಲ್ಲಿ ಹೀಗಿತ್ತು ಶಿಕ್ಷೆ:

ರಾಜದ್ರೋಹದ ಚಟುವಟಿಕೆಯ ಅಪರಾಧಕ್ಕಾಗಿ ಮಾಸ್ತರು, ಅಪ್ಪು, ಚಿರುಕಂಡ, ಕಣ್ಣ, ಅಬೂಬಕರ್, ಕುಂಞಂಬು ಮತ್ತಿತರ ಇಪ್ಪತ್ತು ಜನರಿಗೆ ಐದೈದು ವರ್ಷಗಳ ಕಠಿಣ ಕಾರಾಗೃಹವಾಸ. ಕೃಷ್ಣನ್ ನಾಯರ್, ಮತ್ತಿತರ ಹದಿನೆಂಟು ಜನರಿಗೆ ಎರಡೆರಡು ವರ್ಷದ ಕಠಿಣ ಸಜೆ. ಪ್ರಭು, ಕೇಳು ನಾಯರ್, ಧಾಂಡಿಗ, ಚಂದು, ಅಪ್ಪುವಿನ ತಂದೆ, ಚಿರುಕಂಡನ ತಂದೆ, ಮತ್ತಿತರರಿಗೆ ಬಿಡುಗಡೆ. ಪೋಲೀಸನನ್ನು ಕೊಲೆಮಾಡಿದ ಅಪರಾಧಕ್ಕಾಗಿ ಅಪ್ಪು, ಚಿರುಕಂಡ, ಕುಂಞಂಬು, ಅಬೂಬಕರ್ ಮತ್ತು ಕುಟ್ಟಿಕೃಷ್ಣನಿಗೆ ಮರಣದಂಡನೆ. ಕೊನೆಯವನು ಅಪ್ರಾಯಸ್ಥನಾದುದರಿಂದ ಮರಣ ದಂಡನೆಯ ಬದಲು, ಕೈದಿಗಳ ಶಿಕ್ಷಣ ಶಾಲೆಗೆ ಆತನ ರವಾನೆ.

'ಪ್ರಾಣಾಂತಿಕವಾದ ಪೆಟ್ಟನ್ನು ಪೋಲೀಸನಿಗೆ ಯಾರು ಕೊಟ್ಟರೋ ಹೇಳುವುದು ಕಷ್ಟ' ಎಂಬ ಅಭಿಪ್ರಾಯ ತೀರ್ಪಿನಲ್ಲಿತ್ತು. ಹಾಗಿದ್ದರೂ ಪ್ರಾಣದಂಡನೆಯ ಶಿಕ್ಷೆ ನಾಲ್ವರಿಗೆ ದೊರೆತೇ ದೊರೆಯಿತು.

೮

ತೀರ್ಪನ್ನೋದಿದ ನ್ಯಾಯಾಧೀಶರು, ಕೋರ್ಟಿನ ಕಾರ್ಯಕಲಾಪ ಆ ದಿನಕ್ಕೆ ಮುಕ್ತಾಯವಾಯಿತೆಂದರು. ಬಿಡುಗಡೆಯಾದ ಇಪ್ಪತ್ತೆರಡು ಜನರ ಕೈಕೋಳಗಳನ್ನು ಬಿಚ್ಚಿದುದಾಯಿತು. ಆದರೂ, ಹೊರಡಿರೆಂದರೂ ಸರಿಯದೆ, ಅವರು ಅಲ್ಲೇ ನಿಂತರು. ಸದಾಕಾಲವೂ ನಗುತ್ತಲಿದ್ದ ರಾಜಾರಾಯರು ಆಗ ಮಾತ್ರ ನಗಲಿಲ್ಲ. ಕೆಂಪಗಿನ ಅವರ ದುಂಡುಮುಖ ಜೋತುಕೊಂಡು ಕಪ್ಪಿಟ್ಟಿತು. ಆ ಕಾಲಿನಿಂದ ಈ ಕಾಲಿಗೆ ದೇಹದ ಭಾರವನ್ನು ದಾಟಿಸುತ್ತ ಅವರು ನಿಂತರು."ನ್ಯಾಯದ ಕೊಲೆ ಈ ರೀತಿ ಆದೀತೂಂತ ನನಗೆ ಗೊತ್ತೇ ಇತ್ತು" ಎಂದು ಪಿಳ್ಳೆ ಗೊಣಗಿದರು. "ಅಪೀಲಿಗೆ ಏರ್ಪಾಟು ಮಾಡೋಣ. ನಿರಾಶರಾಗ್ಬೇಡಿ" ಎಂದು ಹೇಳಿ ಅವರು ವಸತಿಗೃಹಕ್ಕೆ ತೆರಳಿದರು.

ಆ ದಿನ ಬೆಳಗ್ಗೆ ಕೈದಿಗಳು ನಡೆದುಬಂದೊಡನೆ ಅವರ ಹಿಂದಿನಿಂದ ಪೋಲೀಸ್

ವ್ಯಾನೂ ಬಂದಿತ್ತು. ಹೆಚ್ಚು ಜನ ಸಶಸ್ತ್ರ ಪೋಲೀಸರು ಬಂದಿದ್ದರು. ಆದರೆ, ತೀರ್ಪಿನ ವಿಷಯ ಅಧಿಕಾರಿಗಳಿಗೆ ಮೊದಲೇ ತಿಳಿದಿದ್ದು ಮುಂಜಾಗ್ರತೆಗಾಗಿ ಈ ಏರ್ಪಾಟು ಆಗಿತ್ತೆಂದು ಊಹಿಸುವುದು ಮಾತ್ರ ಮಾಸ್ತರಿಂದಲೂ ಸಾಧ್ಯವಾಗಿರಲಿಲ್ಲ.

ಜನ ಚೆದರತೊಡಗಿದ್ದರೂ ಉಳಿದವರ ಸಂದಣಿ ದಟ್ಟವಾಗಿತ್ತು. ಅವರು ಗುಜುಗುಜು ಮಾತನಾಡುತ್ತ ಕೈದಿಗಳು ಹೊರಬರುವುದನ್ನು ಕಾದಿದ್ದರು. ಮರಣ ದಂಡನೆಗೆ ಗುರಿಯಾದ ನಾಲ್ವರನ್ನೂ ಇನ್ನೊಬ್ಬನಾದ ಕುಟ್ಟಿಕೃಷ್ಣನನ್ನೂ ಬೇರ್ಪಡಿಸಬೇಕು. ಆದರೆ ಆ ಕೆಲಸ ಅಂಟಿಕೊಂಡಿದ್ದ ಅವಳಿ ಮಕ್ಕಳ ಮೇಲಿನ ಶಸ್ತ್ರಕ್ರಿಯೆಗಿಂತಲೂ ಅದು ಕಷ್ಟಕರವಾಗಿತ್ತು. ಹಾಗೆ ವಿಂಗಡಿಸಿ ತಮ್ಮ ಐಕ್ಯವನ್ನೇ ಮುರಿಯುತ್ತಿರುವರೇನೋ ಎಂದು ಕೈದಿಗಳು ಒಬ್ಬರಿಗೊಬ್ಬರು ಒತ್ತಿಕೊಂಡೇ ನಿಂತರು. ಕುಟ್ಟಿಕೃಷ್ಣನಿಗೂ ಅಬೂಬಕರನಿಗೂ ಜತೆಯಾಗಿಯೇ ಬೇಡಿಹಾಕಿತ್ತು. ಸ್ವಯಂಸೇವಕ ದಳದ ನಾಯಕ ಅಬೂಬಕರ್; ಬಾಲಸಂಘದ ನಾಯಕ ಕುಟ್ಟಿಕೃಷ್ಣ. ಇವರಿಬ್ಬರಿಗೂ ಮರಣದಂಡನೆಯಾಗಿದ್ದರೂ ಅವರಿನ್ನು ಜತೆಯಾಗಿ ಇರುವಂತಿಲ್ಲ. ಉರುಳು ಕತ್ತನ್ನು ಬಿಗಿಯುವಷ್ಟು ಪ್ರಾಯಸ್ಥನಾಗಿರಲಿಲ್ಲ ಕುಟ್ಟಿಕೃಷ್ಣ. ಅವರಿಬ್ಬರನ್ನು ಬೇರ್ಪಡಿಸಲು ಪೋಲೀಸರು ಬಂದರು. ಕುಟ್ಟಿಕೃಷ್ಣ, "ಅಣ್ಣಾ ಅಣ್ಣಾ!" ಎನ್ನುತ್ತ ಅಬೂಬಕರನ ತೋಳನ್ನು ಬಿಗಿಹಿಡಿದ. ಬಲಶಾಲಿಗಳಾದ ಪೋಲೀಸರು ಜೋಡಿಸಿದ್ದ ಬೇಡಿಗಳನ್ನು ಕಳಚಿ ಬೇರೊಂದನ್ನು ತೊಡಿಸಿದರು. ಕುಟ್ಟಿಕೃಷ್ಣ ಧ್ವನಿತೆಗೆದು ಅತ್ತ : "ಅಣ್ಣಾ! ಅಣ್ಣಾ! ನಾನು ನಿನ್ನ ಜತೇಲೆ ಬರ್ತೇನೆ!" ಅಸಹಾಯನಾದ ಅಬೂಬಕರ್ ಶೂನ್ಯವನ್ನು ನೋಡುತ್ತ ನಿಂತ. ಕಂಬನಿಯ ಧಾರೆಗಳೆರಡು ಅವನ ಗಲ್ಲದ ಮೇಲಿನಿಂದ ಹಾದು ಎದೆಗೆ ಧುಮ್ಮಿಕ್ಕಿದುವು. ವಜ್ರಹೃದಯಿ ಎಂದೇ ಎಲ್ಲರೂ ನಂಬಿದ್ದ ಧಾಂಡಿಗ ಗೋಡೆಗೊರಗಿ ತೋಳಲ್ಲಿ ಮುಖ ಮರೆಸಿಕೊಂಡು ಅತ್ತ. ಮಾಸ್ತರು ಈಗಲೂ ಶಾಂತವಾಗಿದ್ದು ಮುಗುಳುನಗಲು ಯತ್ನಿಸಿದರು. ತಾಯಿಯ ಜತೆಯಲ್ಲಿ ಅಲೆಯಲು ಹೋಗಿದ್ದ ಮಕ್ಕಳು, ಕತ್ತಲಾಯಿತೆಂದು ಯೋಚನೆಗೊಳಗಾಗಿ ಹೆತ್ತವಳನ್ನು ನೋಡಿದ ಹಾಗೆ, ಅಪ್ಪು ಮತ್ತು ಚಿರುಕಂಡ ಬೊಂಬೆಯ ಹಾಗೆ ನಿಂತಿದ್ದ ಮಾಸ್ತರನ್ನೆ ದಿಟ್ಟಿಸುತ್ತ ಕೇಳಿದರು:

"ನಮ್ಮನ್ನು ಈಗಲೆ ಒಯ್ತಾರಾ ಸರ್?"

ತನ್ನಿದುರು ಸದಾ ವಿದ್ಯಾರ್ಥಿಗಳೇ ಆದ ಹುಡುಗರು—ಆತ್ಮೀಯ ಭಾವವನ್ನುಂಟುಮಾಡುತ್ತಿದ್ದ 'ಸರ್' ಸಂಬೋಧನೆ .... ಮಾಸ್ತರ ಕಣ್ಣಿಗೆ ಬಿದ್ದುದು

ಹತ್ತು ವರ್ಷಗಳ ಹಿಂದಿನ ಎಳೆಯರಾದ ಅಪ್ಪು ಚಿರುಕಂಡರು.... ಏನೆಂದರು ಅವರು? 'ನೀವು ಜಾಸ್ತಿ ಬೀಡಿ ಸೇದ್ತೀರಿ, ಅಲ್ವ ಸರ್' ಎಂದೆ? 'ಇಲ್ಲ ಅಪ್ಪು—ಇಲ್ಲ ಚಿರುಕಂಡ—ನಾನೀಗ ಬೀಡಿ ಸೇದೋದೆ ಇಲ್ಲ! 'ಏನು? ಅದಲ್ಲವೆ?

ಪ್ರಶ್ನೆ ಮತ್ತೊಮ್ಮೆ ಬಂತು:

"ನಾವು ನಾಲ್ಕು ಜನರನ್ನು ಈಗಲೆ ಒಯ್ತಾರಾ ಸರ್?"

ಎದೆಯಿಂದ ಅಳಲಿನ ಮುದ್ದೆ ಎದ್ದು ಗಂಟಲಿನ ಮೇಲಕ್ಕೆ ಬರಲು ಯತ್ನಿಸಿತು. ಆದರೆ ಗಂಟಲು ಚಿಕ್ಕದು. ಉಗುಳು ನುಂಗಿ ಆ ಮುದ್ದೆಯನ್ನು ಕೆಳಕ್ಕೆ ತಳ್ಳುತ್ತ ಮಾಸ್ತರೆಂದರು:

"ಇಲ್ಲವಪ್ಪ. ಇನ್ನೂ ನಾವು ಜತೇಲೇ ಇರ್ತೇವೆ."

ಯಾರೋ ಕೇಳಿದರು:

"ಇವರಿಗೆ ಐದು ವರ್ಷ ಶಿಕ್ಷೆ ಆದ್ಮೇಲೆ ಮರಣದಂಡನೆಯೋ ವಕೀಲರೆ?"

ಹಾಗಲ್ಲವೆಂದರು ರಾಜಾರಾಯರು. ಒಂದೊಂದು ಅಪರಾಧಕ್ಕೆ ಒಂದೊಂದು ಬಗೆಯ ಶಿಕ್ಷೆ. ಮರಣದಂಡನೆಯ ಜತೆಗೆ ಬೇರೆ ಶಿಕ್ಷೆ ಇದ್ದಾಗ, ಮರಣದಂಡನೆಯ ಬಸಿರಲ್ಲಿ ಆ ಶಿಕ್ಷೆ.

ಚಿರುಕಂಡ ಮಾಸ್ತರನ್ನು ಕೇಳಿದ: "ಬಿಡುಗಡೆಯಾದೋರು ಅವತ್ತೇ ಕಯ್ಯೂರಿಗೆ ಹೋಗೋದು ಮೇಲು, ಅಲ್ವ ಸರ್?"

ಆತ ಯಾವಾಗಲೂ ಕಾರ್ಯದರ್ಶಿಯೇ—ಯಾವಾಗಲೂ ಮುಂದಿನ ಕ್ರಮದ ಯೋಚನೆಯೇ ಆತನಿಗೆ.

"ಹೂಂ ಹೌದು."

"ಅವರ ಖರ್ಚಿಗೆ? —"

ಅಲ್ಲೇ ನಿಂತಿದ್ದ ರಾಜಾರಾವ್ ಹೇಳಿದರು:

"ಹೊರಗೆ ನಿಮ್ಮವರು ಕೆಲವರಿದ್ದಾರೆ. ಎಲ್ಲಾ ನೋಡಿಕೊಳ್ತಾರೆ. ಆ ಯೋಚನೆ ಮಾಡ್ಬೇಡಿ."

ಅಷ್ಟರಲ್ಲಿ ಪೋಲೀಸರ ಸ್ವರ ಕೇಳಿಸಿತು:

"ಮುಂದೆ ನಡೀರಿ!"

ಇವತ್ತು ಇನ್ನುಳಿದ ಮೂವತ್ತೆಂಟು ಜನ ಬೀದಿಯಲ್ಲಿ ನಡೆಯಬೇಕಾದುದಿಲ್ಲ. ಈ ನ್ಯಾಯಸ್ಥಾನದ ಕೊನೆಯ ದರ್ಶನದ ಬಳಿಕ ಈಗ ಅವರಿಗೆ ಮೋಟಾರು ವಾಹನವಿದೆ.

ಜನ ಹತ್ತಿರ ಹತ್ತಿರಕ್ಕೆ ಬಂದರು. ಇವರು ರೈತರಲ್ಲ. ಕಯ್ಯೂರು ಬಲು ದೂರ

ಇಲ್ಲಿಂದ. ಇವರು ಪಟ್ಟಣವಾಸಿಗಳು... ಬಡವರ ಸಂಕಟವೇನೆಂದು ಬಲ್ಲವರು.. ಅವರ ನಡುವೆ ಗೂಢಚಾರರೂ ಇರಬಹುದು. ಹೂವಿನ ದಂಟಿಗೆ ಅಂಟಿಕೊಂಡೇ ಮುಳ್ಳು....

ಮೊದಲು ನಾಲ್ವರು—ಅಪ್ಪು, ಚಿರುಕಂಡ, ಕುಂಞಂಬು ಮತ್ತು ಅಬೂಬಕರ್. ಬಳಿಕ—ಕುಟ್ಟಿಕೃಷ್ಣ. ಅವನ ಹಿಂದೆ ಶಿಕ್ಷೆಗೆ ಗುರಿಯಾದ ಮಾಸ್ತರು ಮತ್ತಿತರರು. ಅವರ ಹಿಂದೆಯೇ ಮೋಟಾರನ್ನೇರಿ ಬರಲೆತ್ನಿಸಿದ ಬಂಧಮುಕ್ತರು.

"ನೀವು ಬರಬೇಡಿ! ಬುದ್ಧಿ ಇಲ್ಲ ನಿಮಗೆ? ಹಾಕಿ ಬಾಗಿಲು!"

ಉದ್ವೇಗ ತುಂಬಿದ್ದ ಧ್ವನಿಯಲ್ಲಿ ಯಾರೋ ಕೂಗಿದರು:

"ಇಂಕ್ವಿಲಾಬ್—"

ಅದು ಅನಿರೀಕ್ಷಿತವಾಗಿತ್ತು. ಅಂಜುತ್ತ ಉತ್ತರವಿತ್ತುದೊಂದೇ ಸ್ವರ:

"ಜಿಂದಾಬಾದ್!"

ಮತ್ತೆ ಮೊದಲಿನ ಧ್ವನಿಯೇ ಹೆಚ್ಚು ಗಟ್ಟಿಯಾಗಿ ಕೂಗಿತ್ತು:

"ಇಂಕ್ವಿಲಾಬ್..."

ಈಗ ಧೈರ್ಯದಿಂದ ಉತ್ತರಕೊಟ್ಟ ಸ್ವರಗಳು ನೂರು.

"ಜಿಂದಾಬಾದ್!"

ಹಳ್ಳಿಯವರೂ ಪಟ್ಟಣದವರೂ ವಾಹನದೊಳಗಿದ್ದವರೂ ಹೊರಗಿದ್ದವರೂ ನೂರಾರು ಜನ ಈಗ ಕೂಗಿದರು:

"ದಬ್ಬಾಳಿಕೆಗೆ—"

"ಧಿಕ್ಕಾರ!"

"ಸಾಮ್ರಾಜ್ಯಶಾಹಿ—"

"ನಾಶವಾಗಲಿ!"

"ಕ್ರಾಂತಿಗೆ—"

"ಜಯವಾಗಲಿ!"

ನೆರೆದವರನ್ನು ಚೆದರಿಸಲೆಂದು ಪೋಲೀಸರು ದಂಡವೆತ್ತುತ್ತಿದ್ದಂತೆ ವಾಹನ ಹೊರಟಿತು.

ಕೊನೆಯದಾಗಿ ಹಲವು ಕಂಠಗಳಿಂದ ವಂದನೆ:

"ಕಯ್ಯೂರು ಬಾಂಧವರಿಗೆ ರಕ್ತ ನಮಸ್ಕಾರ!"

ಅದಕ್ಕೆ, ಧಾವಿಸುತ್ತಿದ್ದ ವಾಹನದೊಳಗಿಂದ ಹಲವು ಧ್ವನಿಗಳ ಮರುವಂದನೆ:

"ಸಂಗಾತಿಗಳೇ ರಕ್ತನಮಸ್ಕಾರ!"

...ಮತ್ತೆ ಸೆರೆಮನೆಯ ಎತ್ತರದ ಪ್ರಾಕಾರಗಳ ಹಿಂದೆ ವಿರಾಮ. ಜೇಲರು ಬಂದು ಮಾತನಾಡಿಸಿದರು:

"ಅಪೀಲು ಹೋಗಿಯೇ ಹೋಗ್ತೀರಿ. ಅಲ್ಲ?"

"ಹೌದು."

"ಸಹಜವೇ, ಬೇರೆ ಸಮಯವಾಗಿದ್ದರೆ ಇಷ್ಟು ತೊಂದರೆಯಾಗ್ತಿರ್ಲಿಲ್ಲ; ಆದರೆ ಇದು ಯುದ್ಧಕಾಲ ನೋಡಿ. ಅದಕ್ಕೇ ಹೀಗೆ...."

ಆ ಮಾತಿಗೆ ಉತ್ತರದ ಅಗತ್ಯವಿರಲಿಲ್ಲ, ಯುದ್ಧವೇ. ಯುದ್ಧವಲ್ಲದೆ ಇನ್ನೇನು? ಉಳಿವಿಗಾಗಿ ಹೊಸ ಬದುಕಿಗಾಗಿ ಜನಯುದ್ಧ. ಅದಕ್ಕಿದಿರಾಗಿ ಆಳುವವರ ಪೈಶಾಚಿಕ ದಮನದಂಡ.

ಮರಣದಂಡನೆಗೆ ಗುರಿಯಾದ ನಾಲ್ವರನ್ನು ಬೇರೆ ಕೊಠಡಿಯಲ್ಲಿಟ್ಟು ಬೀಗ ಹಾಕಿದರು. ಕುಟ್ಟಿಕೃಷ್ಣ ಬೇರೆ ಕಡೆ. ಅವರಿಂದ ಪ್ರತ್ಯೇಕವಾಗಿ ಉಳಿದವರಿಗೆ ಜಾಗ

ಮಾಸ್ತರು ಜೇಲರನ್ನು ಕೇಳಿದರು:

"ಹೇಗೂ ಇನ್ನು ಕೆಲವೇ ದಿವಸ. ಜತೆಯಾಗೇ ಇರಬಾರ್ದಾ?"

"ಸಾರಿ. ಇದು ನಿಯಮ. ನಾನೇನೂ ಮಾಡೋಹಾಗಿಲ್ಲ."

ಕತ್ತಲಾಯಿತು. ಮಾತು ಕಡಮೆಯಾಗಿ ಮಂಪರು ಬಂತು. ಮಾಸ್ತರ ಜತೆಯಲ್ಲಿದ್ದ ಕಣ್ಣ, ಮಕ್ಕಳಾಗಲಿಲ್ಲವೆಂದು ಹರಕೆ ಹೊತ್ತು, ಕೊನೆಗೆ ಮಗುವನ್ನು ಪಡೆದ ರೈತ ತಾಯಿಯ ಹಾಡನ್ನು ಮೆಲುದನಿಯಲ್ಲಿ ಹಾಡಿದ. ಆ ಧ್ವನಿ ಅಡ್ಡವಾಗಿದ್ದ ಗೋಡೆಯನ್ನು ದಾಟಿ ಅಪ್ಪು ಚಿರುಕಂಡ ಮತ್ತಿತರರನ್ನು ಹೋಗಿ ತಲಪಿತು.

ಕಾವಲುಗಾರ ಬಂದು ಪಿಸುದನಿಯಲ್ಲಿ ಕೇಳಿದ:

"ಬೀಡಿ ಬೇಡವಾ ಇವತ್ತು?"

ಅದನ್ನು ಪಡೆದು ಹಂಚಲು ಧಾಂಡಿಗ ಅಲ್ಲಿರಲಿಲ್ಲ. ಉತ್ತರವೇ ಸಿಗಲಿಲ್ಲ ಕಾವಲುಗಾರನಿಗೆ. ಮಾಸ್ತರು ಅಂಗೈ ಆಡಿಸಿ ಬೇಡವೆಂದು ಸನ್ನೆ ಮಾಡಿದಂತಾಗಿ ಕಾವಲುಗಾರ ಸುಮ್ಮನಾದ.

...ಇನ್ನೊಂದು ವಾರವಾದರೂ ಈ ಸೆರೆಮನೆಯಲ್ಲೇ ಇರಬೇಕಾದೀತೆಂದು ಮಾಸ್ತರು ಭಾವಿಸಿದರು. ಕಯ್ಯೂರಿನಿಂದ ಎಲ್ಲರ ಸಂಬಂಧಿಕರೂ ಭೇಟಿಗೆ ಬರುವಂತೆ ಹೇಳಿಕಳುಹಬೇಕೆಂದು ಅವರು ಯೋಚಿಸಿದರು.

ಆದರೆ ಮಾರನೆಯ ಮುಂಜಾವದ ರೈಲುಗಾಡಿಯಲ್ಲಿ ಭದ್ರವಾದ ಸಶಸ್ತ್ರ ಕಾವಲಿನೊಂದಿಗೆ ಅವರನ್ನೆಲ್ಲ ಕಣ್ಣಾನೂರಿಗೆ ಒಯ್ಯಲಾಯಿತು.

ಹೊಸದುರ್ಗ, ನೀಲೇಶ್ವರ, ತೇಜಸ್ವಿನಿ ನದಿ, ಚೆರ್ವತ್ತೂರು ನಿಲ್ದಾಣ, ತ್ರಿಕರಪುರ..... ಇವರ ಪ್ರಯಾಣದ ಸುದ್ದಿ ಹಬ್ಬುವುದಕ್ಕೂ ಅವಕಾಶವಿಲ್ಲದ ಹಾಗೆ ಗಾಡಿ ಚಲಿಸಿತು.

.... ಅದು ದೊಡ್ಡ ಸೆರೆಮನೆ. ಅದರ ಪ್ರಾಕಾರದೊಳಗಿದ್ದ ಕಳ್ಳಕಾಕರ ಸಂಖ್ಯೆ ಹೆಚ್ಚೋ ದೇಶಪ್ರೇಮಿಗಳ ಸಂಖ್ಯೆ ಹೆಚ್ಚೋ ಹೇಳುವುದು ಕಷ್ಟ. ಹಿಂದೆ ತಳಿಪರಂಬ ರೈತಸಮ್ಮೇಳನದಲ್ಲಿ ಕಯ್ಯೂರಿನವರು ಸಂಧಿಸಿದ್ದ ಹಲವರು ಅಲ್ಲಿದ್ದರು. 'ಓಹೋ! ಏನು ಸಮಾಚಾರ?' ಎಂದು ಹೊರಗಿನಿಂದ ಬಂದವರನ್ನು ಆದರದಿಂದ ಮಾತನಾಡಿಸುವ ಸಂಬಂಧಿಕರ ವಿಶಾಲ ಕುಟುಂಬದ ಹಾಗಿತ್ತು ಆ ಸೆರೆಮನೆ....

ಆದರೆ ಅಲ್ಲಿಯೂ ನಿಯಮ ನಿಬಂಧನೆಗಳಿದ್ದುವು. ಮರಣದಂಡನೆಗೆ ಗುರಿಯಾದ ನಾಲ್ವರನ್ನಂತೂ ಪ್ರತ್ಯೇಕವಾಗಿಟ್ಟರು. ಅದು ಇಪ್ಪತ್ತನಾಲ್ಕು ಘಂಟೆಗಳ ಕಾಲವೂ ಬಂಧನ. ಉಳಿದವರು ಹಳೆಯ ಕೈದಿಗಳೊಡನೆ ಬೆರೆಯಲು ಅವಕಾಶವಿದ್ದುದು ಪೆರೇಡಿನ ಕಾಲದಲ್ಲಿ, ಇಲ್ಲವೆ ದುಡಿಮೆಯ ಅವಧಿಯಲ್ಲಿ.

ಪಹರೆ ಹೀಗಿದ್ದರೂ ಅಲ್ಲಿ ಗೋಡೆಗಳ ನಾಲಿಗೆಗಳು ಪಿಸುಮಾತನಾಡುತ್ತಿದ್ದುವು. ಮೂಕರಂತಿದ್ದ ಕಾವಲುಗಾರರೂ ಕೆಲವೊಮ್ಮೆ ಸರಕ್ಕನೆ ಕೊಠಡಿಗಳತ್ತ ತಿರುಗಿ ಏನಾದರೂ ಸುದ್ದಿ ಹೇಳುತ್ತಿದ್ದರು. ಚೀಟಿಗಳು ಬರುತ್ತಿದ್ದುವು....

ಅನಂತರ ಉಳಿದುದು ಮದರಾಸಿನ ಉಚ್ಚ ನ್ಯಾಯಸ್ಥಾನದಲ್ಲಿ ಅಪೀಲಿನ ವಿಚಾರಣೆ. ವಿಚಾರಣೆಯ ದಿನ ನಿರ್ಧಾರವಾಗುವುದು ತಡವಾಯಿತೇ ಹೊರತು ಒಮ್ಮೆ ನ್ಯಾಯಮೂರ್ತಿಗಳು ಆ ವಿಷಯವನ್ನೆತ್ತಿಕೊಂಡಮೇಲೆ ಅವರು ತೀರ್ಪುಕೊಡುವುದು ತಡವಾಗಲಿಲ್ಲ.

ಅದು ಒಮ್ಮತದ ತೀರ್ಪು.

ಅವರ ಘನ ಅಭಿಪ್ರಾಯದಂತೆ ಸೆಷನ್ಸ್ ನ್ಯಾಯಾಧೀಶರ ತೀರ್ಮಾನ ಸಮರ್ಪಕವಾಗಿತ್ತು.

.... ಆ ಸುದ್ದಿ ಬಂದಾಗ ಅಪ್ಪು ಪಕ್ಕದ ಕೊಠಡಿಯ ಚಿರುಕಂಡನನ್ನು ಕೇಳಿದ:

"ಇನ್ನಾದರೂ ಈ ವಿಚಾರಣೆಗಳ ತೊಂದರೆ ಮುಗಿಯಿತೋ ಇಲ್ಲವೋ?"

ಅದು ಮುಗಿದಿರಲಿಲ್ಲ. ರಕ್ಷಣಾ ಸಮಿತಿಯವರು ಲಂಡನಿನ ಪ್ರಿವಿಕೌನ್ಸಿಲಿಗೆ ಹೋದರು. ಆದರೆ ಯುದ್ಧ ಕಾಲದಲ್ಲಿ ವ್ಯವಹರಣೆಗಳೆಲ್ಲ ಭಾರತದ ಫೆಡರಲ್ ನ್ಯಾಯಸ್ಥಾನಕ್ಕೆ ಸ್ಥಳಾಂತರವಾಗಿದ್ದುವು.

ಫೆಡರಲ್ ನ್ಯಾಯಸ್ಥಾನದ ದೃಷ್ಟಿಯಲ್ಲಿ ಮದರಾಸು ಹೈಕೋರ್ಟಿನ ತೀರ್ಪಿನ ಬಗ್ಗೆ ಟೀಕಿಸುವಂಥದೇನೂ ಇರಲಿಲ್ಲ.

"ಈಗಾದರೂ ಮುಗಿಯಿತಲ್ಲ!" ಎಂದ ಅಪ್ಪು, ಹೃದಯದೊಳಗಿನ ಬೇಗುದಿಯನ್ನು ಅಂಕೆಯೊಳಗಿಡಲು ಯತ್ನಿಸುತ್ತ.

ಆಗಲೂ ಮುಗಿದಿರಲಿಲ್ಲ. ರಕ್ಷಣಾ ಸಮಿತಿಯ ಕಡೆಯಿಂದ ವಕೀಲರೊಬ್ಬರು ಬಂದು ಆ ನಾಲ್ವರ ಸಹಿ ಕೇಳಿದರು.

"ಇನ್ನು ಯಾವ ಕ್ರಮ ಕೈಗೊಳ್ತೀರಿ?" ಎಂದ ಚಿರುಕಂಡ.

"ಜೀವದಾನಕ್ಕೆ ಅರ್ಜಿ ಹಾಕ್ಬೇಕಲ್ಲ?"

ಅಪ್ಪು ಗುಡುಗಿದ:

"ಎಂಥ ಜೀವದಾನ? ಯಾರ ಜೀವವನ್ನು ಯಾರು ದಾನ ಮಾಡೋದು? ಒಂದೂ ಬೇಡ. ಹೋಗಿ ನೀವು !"

"ಹಾಗಲ್ಲ ಸಂಗಾತಿ!"

"ಗೌರವದಿಂದ ನಾವು ಸಾಯೋದಕ್ಕಾದರೂ ಬಿಡ್ತೀರೊ ಇಲ್ಲವೊ?"

ವಕೀಲರು ವಿಫಲರಾಗಿ ಹಿಂತಿರುಗಿದರು. ಆದರೆ ಆ ಬಳಿಕ, ಮಾಸ್ತರು ಮತ್ತು ಇತರರ ನಡುವೆ ರಹಸ್ಯವಾಗಿ ಚೀಟಿ ಕಾಗದಗಳೋಡಿದುವು. ಸಂದೇಶಗಳು ಅತ್ತಿತ್ತ ಹೋಗಿ ಬಂದುವು.

ಮಾಸ್ತರು ಸ್ಥಿರಚಿತ್ತದಿಂದ ವಾದಿಸಿದರು:

"ಹಾಗೆ ನೋಡಿದರೆ ಆ ನ್ಯಾಯಸ್ಥಾನದಲ್ಲಿ ನಮಗೆ ನಂಬಿಕೆ ಇತ್ತೆ? ಆದರೂ ನಾವು ಅವರೆದುರು ಕೈಕಟ್ಟಿ ನಿಂತು ವಿಚಾರಣೆಗೆ ಒಳಗಾದೆವು. ಇದೆಲ್ಲ ಒಂದು ಪದ್ಧತಿ ಅಪ್ಪು. ನಮ್ಮ ಗುರಿ ಏನು? ಆ ಗುರಿಯ ಸಾಧನೆಗಾಗಿ ನೀವು ನಾಲ್ಕು ಜೀವಿಗಳು ಉಳಿಯೋದು ಬೇಡವೆ? ಜೀವದಾನ ಕೇಳುವದರಲ್ಲಿ ಅವಮಾನವಾದದ್ದೇನೂ ಇಲ್ಲ. ನಮ್ಮ ಉದ್ದೇಶವನ್ನು ನೆನಪಿನಲ್ಲಿಟ್ಟುಕೊಂಡು ಸಹಿಮಾಡಿ. ದೇಶದ ಎಲ್ಲ ಕಡೆ ನಿಮ್ಮನ್ನು ಉಳಿಸಬೇಕೂಂತ ಚಳವಳಿಯೇ ಆಗ್ತಿದೆ ಅನ್ನೋದನ್ನು ಮರೀಬೇಡಿ."

ಮಾಸ್ತರು ಗೆದ್ದರು. ಅರ್ಜಿಗೆ ಆ ನಾಲ್ವರ ಸಹಿ ಬಿತ್ತು.

ಕುಟ್ಟಿಕೃಷ್ಣನನ್ನು ದೂರದ ಬೆಜವಾಡದ ಸೆರೆಮನೆಗೊಯ್ದರು. ಉಳಿದವರು ಶಿಕ್ಷೆ ಅನುಭವಿಸುತ್ತ ದಿನ ಕಳೆದರು. ನಾಲ್ವರ ಪ್ರಾಣ ಉಳಿಸಲು ಮಾತ್ರ ರಾಷ್ಟ್ರದಾದ್ಯಂತ ಚಳವಳಿ ನಡೆಯಿತು. ಲೋಕದ ಇತರ ಪ್ರಮುಖ ನಗರಗಳಲ್ಲೂ ಕಯ್ಯೂರಿನ ಹೆಸರು ಪ್ರತಿಧ್ವನಿಸಿತು.

ಆದರೂ ಆಳುವವರು ಮಿಸುಕಲಿಲ್ಲ. ವಿಷಮಿಸುತ್ತಿದ್ದ ವಿಶ್ವಸಮರದ ಬೇಗೆಯಲ್ಲಿ ಸಿಲುಕಿದ್ದ ಆ ಸರಕಾರ, ಜನಾಭಿಪ್ರಾಯಕ್ಕೆ ಮನ್ನಣೆ ಕೊಟ್ಟು ತಲೆ

ಬಾಗುವುದು ದೌರ್ಬಲ್ಯದ ಸಂಕೇತವಾದೀತೆಂದು, ಮೌನ ತಳೆಯಿತು.

ರಕ್ಷಣಾ ಸಮಿತಿಯವರು, ರಾಷ್ಟ್ರದ ಎಲ್ಲ ಕಡೆಗಳ ದೇಶಪ್ರೇಮಿಗಳು, ಕಯ್ಯೂರಿನ ಕುಟುಂಬಗಳು, ಗವರ್ನರ ಆಜ್ಞೆ ಏನೆಂದು ಬರುವುದೋ ಎಂದು ಇನ್ನೂ ಕಾದರು.

...............

ಆ ಅವಧಿಯಲ್ಲಿ ಭಾರತದ ರಾಜಕೀಯ ಆಕಾಶ ಕರಿಮೋಡಗಳಿಂದ ತುಂಬಿತು. ನಾಲ್ಕು ದಿಕ್ಕುಗಳಿಂದ ಬಿರುಗಾಳಿ ಬೀಸಿತು. ಕೋಲ್ಮಿಂಚು ಕಣ್ಣು ಕೋರೈಸಿತು. ಗುಡುಗುಗಳಿಂದ ಕಿವಿಯೊಡೆಯಿತು. ಮತ್ತೆ ಒಮ್ಮೆಲೆ, ಆಗಸ್ಟ್ ಒಂಭತ್ತರ ಮುಂಜಾನೆ, ಆಕಾಶವೆ ಬಿರುಕು ಬಿಟ್ಟು ನೀರು ಸೋರಿದಂತೆ, ಸಾಗರವೇ ಕಟ್ಟೆಯೊಡೆದಂತೆ, ಧೋಧೋ ಎಂದು ಮಳೆ ಸುರಿಯಿತು. ಬೀದಿ ಬೀದಿಗಳಲ್ಲಿ ಕೇರಿಕೇರಿಗಳಲ್ಲಿ ಆಗ ಹರಿದುದು ಜಲಪ್ರವಾಹದಂತೆ ಕಂಡ ಜನಪ್ರವಾಹ. ಅ ಹಿಂಸೆಯ ಮಾಯಾಬಲೆಯನ್ನು ಹರಿದು, ಜನರ ಬಡತೋಳುಗಳು ಭೀಮಬಾಹುಗಳಾದುವು. ಸಿಡಿದೆದ್ದ ಗುಲಾಮರ ನಡಿಗೆಯ ಸದ್ದು ಗಿರಿಕಂದರಗಳಲ್ಲಿ ಪ್ರತಿಧ್ವನಿಸಿತು.

ತತ್ತರಿಸಿದ ಸರಕಾರ ಆಗ, ನ್ಯಾಯಸ್ಥಾನಗಳ ಕಾನೂನಿನ ಕ್ರಮಬದ್ಧತೆಯ ಸೋಗನ್ನು ಬಿಟ್ಟು, ತನ್ನ ನಗ್ನರೂಪವನ್ನು ತೋರಿತು.

ಆ ಸ್ವಾತಂತ್ರ್ಯ ಹೋರಾಟದ ಮಹಾ ತೆರೆಗಳು ಸೆರೆಮನೆಯ ಪ್ರಾಕಾರಗಳಿಗೆ ಬಡೆದೇ ಬಡೆದುವು. ಒಳಗಿದ್ದವರು ಕಿವಿನಿಗುರಿಸಿ ಕೇಳಿದರು.... ಜೈಲು ಜನರಿಂದ ತುಂಬಿತು.

ಅಂಥ ಒಂದು ದಿನ, ಕಯ್ಯೂರಿನ ನಾಲ್ವರ ಮೇಲಿನ ಫಾಶೀ ಶಿಕ್ಷೆಯನ್ನು ರದ್ದುಗೊಳಿಸಲು ನಿರಾಕರಿಸಿ ಮದರಾಸಿನ ಆಂಗ್ಲ ಗವರ್ನರು ಆಜ್ಞೆ ಮಾಡಿದ ಸುದ್ದಿ ಸೆರೆಮನೆ ತಲಪಿತು.

ಆಗ ಅಪ್ಪು ಚಿರುಕಂಡನನ್ನು ಕೇಳಿದ:

"ಈ ಸಲವಾದರೂ ಮುಗಿದುದು ನಿಜವಷ್ಟೆ?"

ಚಿರುಕಂಡ ನಕ್ಕು ನುಡಿದ: "ಹೂಂ ಇನ್ನು ಸಮಾಧಾನದಿಂದ ಒಬ್ಬರು ಇನ್ನೊಬ್ಬರ ಕೈಹಿಡಿದು ನಗುತ್ತಲೇ ಗಲ್ಲಿಗೇರೋಣ ಅಪ್ಪು!"

.....ಆದರೆ ಸರಕಾರಕ್ಕಿನ್ನೂ ಬಿಡುವಿರಲಿಲ್ಲ. ಆ ನಾಲ್ವರು ಫಾಶೀಶಿಕ್ಷೆ ಅನುಭವಿಸಬೇಕಾದ ದಿನವನ್ನು ಆಮೇಲೂ ಬಹಳ ಕಾಲ ಅದು ಗೊತ್ತು ಮಾಡಲಿಲ್ಲ.

ಅಪ್ಪುವಿಗೆ ಒಂದು ರಾತ್ರಿ ವಿಚಿತ್ರವಾದ ಕನಸು ಬಿತ್ತು: ಕ್ರಾಂತಿಕಾರರ ಪಡೆ ಸೆರೆಮನೆಯ ಪ್ರಾಕಾರಗಳನ್ನು ಭೇದಿಸಿ ಒಳಗಿದ್ದವರ ಬೇಡಿಗಳನ್ನು ಕಳಚಿದ ಹಾಗೆ. ದೇಶದ ಉದ್ದಗಲಕ್ಕೂ ಬಂಧ ವಿಮೋಚನೆಯ ಜನಸೇನೆ ಚೈತ್ರಯಾತ್ರೆ ಮಾಡುತ್ತ, ಆಂಗ್ಲ ಅಧಿಕಾರಿಗಳನ್ನೂ ಅವರಿಗೆ ಆತ್ಮವನ್ನು ಮಾರಿದ್ದ ದೇಶೀಯ ಚಾಕರರನ್ನೂ ಅಳರಸರು-ಜಮೀನ್ದಾರರು-ಬಂಡವಾಳಗಾರರನ್ನೂ ಬಂಧಿಸಿದ ಹಾಗೆ....

ಕನಸನ್ನು ಚಿರುಕಂಡನಿಗೆ ಬಾಗಿಲ ಸರಳುಗಳೆಡೆಯಿಂದ ವಿವರಿಸುತ್ತ ಅಪ್ಪು ಹೇಳಿದ:

"ಹಾಗೆ ಬಂಧಿಸಿ ಸೆರೆಹಿಡಿದವರಲ್ಲಿ ನಂಬಿಯಾರ್ ಇದ್ದ ಕಣೋ. ಆತ ಗೋಳಾಡ್ತಾ, 'ಅಪ್ಪು, ರಾತ್ರಿ ಶಾಲೆ ನಡೆಸೋದಕ್ಕೆ ನಾನು ಸಮ್ಮತಿ ಕೊಟ್ಟಿರ್ಲಿಲ್ವ? ನನ್ನನ್ನು ಬಿಡಿಸಪ್ಪ' ಅನ್ತಿದ್ದ. ಆದರೆ ನಾನು, ನೀನು, ಕುಞಂಬು, ಅಬೂಬಕರ್ ನಾಲ್ಕು ಜನ ಭುಜದ ಮೇಲೆ ಬಂದೂಕು ಏರಿಸಿ ಕೈ ಕೈ ಹಿಡಿದು ಹಾಡ್ತಾ ನಗ್ತಾ ಮುಂದೆ ಹೋದೆವು. ಕಣ್ಣ ಎಲ್ಲರಿಗಿಂತ ಮುಂದೆ, ಸ್ವರ ಕೇಳಿಸದಷ್ಟು ದೂರ, ಬಾವುಟ ಹಿಡಿದುಕೊಂಡಿದ್ದ. ಮಾಸ್ತರೂ ಪಂಡಿತರೂ ನಮಗಿಂತ ಬಹಳ ಹಿಂದಿದ್ರು. ಪಂಡಿತರು ಮೀಸೆ ಬಿಟ್ಟಿದ್ರು ಕಣೋ... ಮಾಸ್ತರು, 'ಓಡಬೇಡ್ರೋ.... ನಿಧಾನವಾಗಿ ಹೋಗ್ರೋ' ಅಂತ ಕೂಗಿ ಹೇಳ್ತಿದ್ರು.... ಆದರೆ ಅಷ್ಟರಲ್ಲೆ ಎಚ್ಚರವಾಯ್ತು!"

ಸ್ವಾರಸ್ಯವಾಗಿದ್ದ ಆ ವಿವರಣೆಯನ್ನು ಚಿರುಕಂಡ ಆಸಕ್ತಿಯಿಂದ ಕೇಳಿ, "ಕನಸು ಅನ್ನೋದು ಯಾವಾಗ್ಲೂ ಮನಸ್ಸಿನೊಳಗಿರೋ ಯಾವುದೋ ಆಸೆಯ ಇನ್ನೊಂದು ರೂಪ" ಎಂದ.

ಅಲ್ಲಿಂದ ಇನ್ನೊಂದು ಗೋಡೆಯಾಚೆಗೆ ಕುಞಂಬುವಿಗೆ ಆ ವಿವರ ಹೋಯಿತು. ಆತ ಅಬೂಬಕರ್‌ಗೆ ಅದನ್ನು ತಿಳಿಸಿದ. ಅದು ಬರೇ ಕನಸಿನ ವಿವರಣೆಯಾದರೂ ಎಲ್ಲರೂ ಉಲ್ಲಾಸಗೊಂಡರು.

ಅಬೂಬಕರ್ ಹೇಳಿದ:

"ನಾವು ನಾಲ್ಕು ಜನ ಇರದೇ ಹೋಗ್ಬಹುದು. ಆದರೆ ಒಂದು ದಿವಸ ಆ ರೀತಿ ಆಗೋದು, ನಂಬಿಯಾರಿಗೆ ಆ ಸ್ಥಿತಿ ಒದಗೋದೂ ಖಂಡಿತ."

ಕುಞಂಬು, ಅಬೂಬಕರ್‌ನ ಮಾತನ್ನು ಚಿರುಕಂಡನಿಗೆ ದಾಟಿಸಿದ. ಆತ ಅದನ್ನು ಅಪ್ಪುವಿಗೆ ಮುಟ್ಟಿಸಿದ.

ಹೀಗೆ ಸರಪಣಿ ನೆಯ್ದು ಆ ನಾಲ್ವರು ಮಾತುಕತೆಯಲ್ಲಿ ನಿರತರಾದರು.

ಆದರೆ, ಕನಸಿಗಿಂತ ದೂರವಾಗಿತ್ತು ವಾಸ್ತವತೆ. ಮಳೆ ನಿಂತಿತು. ಜನ ಪ್ರವಾಹ ಇಳಿದುಹೋಯಿತು. ಒಗ್ಗಟ್ಟಿಲ್ಲದ ನಾಯಕರಿಲ್ಲದ ಹೋರಾಟವನ್ನು ಸರಕಾರ ಮುರಿದಿಕ್ಕಿತು..... .

ಕಯ್ಯೂರಿನ ನಾಲ್ವರನ್ನು ಗಲ್ಲಿಗೇರಿಸಲು ಆಳುವವರು ದಿನ ಗೊತ್ತು ಮಾಡಿದರು. ಅದು ಮತ್ತೆ ಮುಂದಕ್ಕೆ ಹೋಯಿತು. ದಿನವನ್ನು ಮೊದಲೇ ಜಾಹೀರು ಮಾಡುವುದು ಮೂರ್ಖತನವಾದೀತೆಂದು, ಕಣ್ಣಾನೂರಿನ ಜನ ಕೆರಳಿ ಪರಿಸ್ಥಿತಿ ವಿಕೋಪಕ್ಕೆ ಹೋದೀತೆಂದು, ಸರಕಾರ ಅಳುಕಿತು.

ಅಪ್ಪು ರೇಗಿ ನುಡಿದ:

"ಎಂಥ ಹಿಂಸೆ! ಒಂದೇ ಸಾರಿ ಮುಗಿಸಬಾರದೆ?"

ಪೆಟ್ಟು ತಿಂದು ಮಲಗಿದ ಹೆಬ್ಬಾವಿನ ಹಾಗೆ ಮನಸ್ಸು ರೋಸಿದ್ದ ಆ ಸ್ಥಿತಿ ಯಲ್ಲೂ ದಿನವೂ ಮಾಸ್ತರು ಯಾವನಾದರೂ ಕಾವಲುಗಾರನನ್ನು ಆ ನಾಲ್ವರೆಡೆಗೆ ಕಳುಹಿಸಿ ಸುಖದುಃಖ ವಿಚಾರಿಸುತ್ತಿದ್ದರು.

ಕುಂಞಂಬುವಿನ ದೇಹಪ್ರಕೃತಿ ಅಷ್ಟೊಂದು ಚೆನ್ನಾಗಿರಲಿಲ್ಲ. ಆತ ಏಳುವುದು ತಡವಾದರೆ, ಎಡಬಲಗಳಿಂದ ಅಬೂಬಕರ್ ಮತ್ತು ಚಿರುಕಂಡ ಕಾತರಗೊಂಡು "ಮೈಚೆನ್ನಾಗಿಲ್ವ ಕುಂಞಂಬು?" ಎಂದು ಕೇಳುತ್ತಿದ್ದರು. ಚಿರುಕಂಡ ನಿದ್ದೆಯಲ್ಲಿ ನರಳಿದರೆ, ಅಪ್ಪು ಎಚ್ಚರಗೊಂಡು ಕರೆದು ಕೇಳುತ್ತಿದ್ದ:

"ಚಿರುಕಂಡ.... ಯಾಕೆ ಹಾಗ್ಮಾಡ್ತೀಯಾ?"

ಒಬ್ಬರಿಂದೊಬ್ಬರನ್ನು ಪ್ರತ್ಯೇಕಿಸಿದ ಗೋಡೆಗಳಿದ್ದರೂ ಒಬ್ಬರ ಮುಖ ಇನ್ನೊಬ್ಬರಿಗೆ ಕಾಣಿಸದಿದ್ದರೂ, ಸದಾ ಕಾಲವೂ ಅನ್ಯೋನ್ಯ ನೋಡುತ್ತ ಮಾತನಾಡುತ್ತ ಜತೆಯಲ್ಲೆ ಇರುವೆವೆನೋ ಎನ್ನುವಹಾಗೆ , ಅವರು ದಿನ ಕಳೆದರು.

ಗಲ್ಲಿಗೇರಿಸುವ ದಿನವನ್ನು ಕೊನೆಯವರೆಗೂ ಗೋಪ್ಯವಾಗಿಡುವರೆಂದೂ ತಿಂಗಳ ಕೊನೆಯಲ್ಲಿ ಮರಣದಂಡನೆ ಜಾರಿಯಾಗಬಹುದೆಂದೂ ಖಚಿತ ವಾರ್ತೆ ಅಧಿಕಾರಗಳ ಕಣ್ಣು ತಪ್ಪಿಸಿ ನುಸುಳಿಕೊಂಡು ಸೆರೆಮನೆಯೊಳಗೆ ಬಂತು.

ಅಪ್ಪು ಮತ್ತು ಆ ಮೂವರು ಸಂಗಾತಿಗಳ ಸಂಬಂಧಿಕರನ್ನು ಕೊನೆಯ ಭೇಟಿಗೆ ಕರೆಸುವ ವಿಷಯದಲ್ಲಿ ವಿಳಂಬವಾಗಬಾರದೆಂದು ಮಾಸ್ತರು ಕಾರ್ಯೋನ್ಮುಖರಾದರು.

.... ಆ ನಾಲ್ವರು ಕಯ್ಯೂರು ಯೋಧರ ಸಂಬಂಧಿಕರು ಕಣ್ಣಾನೂರು ಸೇರಿ ಭೇಟಿಗೆಂದು ಬಂದುದು ಒಂದು ಮಧ್ಯಾಹ್ನ.

ಸೆಕೆಯ ಕಾರಣದಿಂದ ಅಪ್ಪುವಿಗೆ ಮಂಪರುಬಂದಿತ್ತು. ಕಣ್ಣುಗಳನ್ನು ಅರೆತೆರೆದು

ಹಾಗೆಯೇ ಗೋಡೆಗೊರಗಿ ಕುಳಿತ ಸ್ಥಿತಿ. ಯಾರೋ ಮಸಕು ಮಸಕಾಗಿ ಎದುರು ನಿಂತಂತೆ ಕಂಡಿತು. ಎಲ್ಲವೂ ಬಿಳಿ. ಹೆಂಗಸು, ಮಗು.

"ಜಾನಕಿ!" ಎನ್ನುತ್ತ ಅಪ್ಪು ಧಿಗ್ಗನೆದ್ದು ಕುಳಿತ.

ಅದು ಕನಸಾಗಿರಲಿಲ್ಲ. ಪುಟ್ಟ ಮಗನನ್ನು ಕೈಹಿಡಿದು ನಿಲ್ಲಿಸಿಕೊಂಡು ಜಾನಕಿಯೇ ಅಲ್ಲಿದ್ದಳು.

"ಅಪ್ಪಾ! ಅಮ್ಮಾ!"

ಮಗನ ಜತೆಯಲ್ಲಿ ಸೆರೆಮನೆಯ ಸುಖ ಅನುಭವಿಸಿ ಹಿಂತಿರುಗಿದ್ದ ತಂದೆ ತಾಯಿಯೊಡನೆ ಇಲ್ಲಿಗೆ ಬಂದಿದ್ದ.

ಎದ್ದು ನಿಂತು ಅಪ್ಪು ಬಾಗಿಲ ಬಳಿಗೆ ಬಂದ, ತೆಳುಮೀಸೆ, ಕೆನ್ನೆಗಲ್ಲಗಳನ್ನು ಆವರಿಸಿದ್ದ ತೆಳುಗಡ್ಡ—

ಮಗನನ್ನು ನೋಡುತ್ತ ತಾಯಿ ಬಿಕ್ಕಿಬಿಕ್ಕಿ ಅತ್ತಳು.

"ಯಾಕಮ್ಮ ಅಳ್ತೀಯಾ?"

ತಂದೆಯೆಂದ—ನಿನಗಿನ್ನೂ ಅನುಭವ ಸಾಲದು ಎನ್ನುವ ಧ್ವನಿಯಲ್ಲಿ.

"ನೀನು ಸುಮ್ನಿರು ಅಪ್ಪು. ಅಳಲಿ."

ಆ ತಾಯಿ ಅಂದಳು:

"ಹೆತ್ತ ತಾಯಿ ಹತ್ತಿರ ಯಾವತ್ತಾದರೂ ಕಣ್ಣೀರು ಕಡಿಮೆಯಾಗ್ತದಾ ಮಗಾ?"

ಜಾನಕಿ ಮಗುವನ್ನೆತ್ತಿಕೊಂಡಳು. ಮೂರು ವರ್ಷದ ಪುಟ್ಟ ಹುಡುಗ ತಂದೆಯ ಮುಖ ನೋಡಿದ. ಪರಿಚಿತನಲ್ಲ. ಅಜ್ಜಿಯ ಅಜ್ಜನ ಮುಖ ನೋಡಿದ. ಆ ಮುಖಭಾವಗಳು ಇಷ್ಟವಾಗಲಿಲ್ಲ. ತಾಯಿಯನ್ನು ನೋಡಿದ. ಅಲ್ಲಿಯೂ ಕಣ್ಣುಗಳು ತುಂಬಿ ಬಂದಿದ್ದುವು. ಇದೊಂದನ್ನೂ ತಾನು ಸಹಿಸೆನೆಂಬಂತೆ ಗಟ್ಟಿಯಾಗಿ ಅತ್ತ. ಅಪ್ಪುವಿಗೂ ಅಳುವ ಹಾಗಾಯಿತು.

ಅಲ್ಲಿಯೇ ದೂರದಲ್ಲಿ ಕುಳಿತಿದ್ದ ಜೇಲಿನೊಬ್ಬ ಅಧಿಕಾರಿಯನ್ನೂ ನಿಂತಿದ್ದ ಪಹರೆಯವನನ್ನೂ ಅಪ್ಪು ನೋಡಿದ. ತಾನು ಕ್ರಾಂತಿಕಾರನೆಂಬುದನ್ನು ನೆನಪಿಗೆ ತಂದುಕೊಳ್ಳುತ್ತ ಅಪ್ಪು ಮನಸ್ಸು ಬಿಗಿಹಿಡಿದು, ಹೆಂಡತಿಯನ್ನು ಕೇಳಿದ :

"ಮಗೂಗೆ ಏನು ಹೆಸರಿಡ್ಬೇಕೂಂತ ಕೊನೆಗೂ ತೀರ್ಮಾನ ಮಾಡಿದಿರಿ ಜಾನಕಿ?"

"ಅಪ್ಪು ಕುಟ್ಟಿ ಅಂತಲೇ."

"ನಿನ್ನ ಮಗೂಗೆ ಇನ್ನೇನು ಹೆಸರಪ್ಪಾ ಇಡೋದು?" ಎಂದು ತಾಯಿ ಕಂಬನಿಯೊರೆಸಿಕೊಳ್ಳುತ್ತಾ, ಸೊಸೆಯ ಮಾತನ್ನು ಸಮರ್ಥಿಸಿ ಅಂದಳು.

ಅಪ್ಪು ನಕ್ಕ. ಆ ನಗುವನ್ನು ಕಂಡು ಅಪ್ಪು ಕುಟ್ಟಿಯೂ ಅಳು ನಿಲ್ಲಿಸಿ ಹಲ್ಲು ಕಿರಿದು "ಇಹ್ಹಿ!" ಅಂದ.

ಇಂತಹ ಭೇಟಿಯಲ್ಲಿ ಸಮಯದ ಮಹತ್ವವೆಷ್ಟೆಂಬುದನ್ನು ತಿಳಿದಿದ್ದ ಅಪ್ಪುವಿನ ತಂದೆ ಹೇಳಿದ :

"ಸುಮ್ನೆ ನಿಂತಿರ್ಬೇಡಿ, ಮಾತಾಡಿ."

ಆದರೆ ಏನನ್ನು?....ಯಾವ ವಿಷಯ? ಹಿರಿಯ ಹಾಗಂದರೂ ಅವರು ಮೌನವಾಗಿಯೇ ಇದ್ದರು.

ಬಳಿಕ ವಿಷಯಗಳಿಗಾಗಿ ತಡವರಿಸುತ್ತ ಅಪ್ಪು ನುಡಿದ:

"ಅಕ್ಕನನ್ನ ಇತ್ತೀಚೆಗೆ ನೋಡಿದ್ಯಾ?"

ಜಾನಕಿ ಅಂದಳು: "ಹೂಂ."

"ಮಗು ಚೆನ್ನಾಗಿದ್ಯಾ?"

"ಹೂಂ. ಚೇತನಾಗೆ ಆಗಲೆ ಐದು ತುಂಬಿತು. ಮುಂದಿನ ಸಲ ಶಾಲೆಗೆ ಹಾಕ್ಬೇಕೂಂತಿದ್ದಾಳೆ ಅಕ್ಕ."

"ಒಳ್ಳೇದೆ?"

ಹಿಂದೆ ಕಯ್ಯೂರಿನಲ್ಲಿ ಹೆಣ್ಣುಮಕ್ಕಳು ಶಾಲೆಗೆ ಹೋಗುತ್ತಿರಲಿಲ್ಲ. ಈಗ ಹುಡುಗಿಯರನ್ನು ಕಳುಹಿಸುವ ಮಾತು ಕೇಳಿಸುತ್ತಿತ್ತು. ಒಳ್ಳೆಯದೇ.

ಅಮ್ಮನತ್ತ ನೋಡಿ ಅಪ್ಪು ಕೇಳಿದ:

"ಅಜ್ಜಿ ಆರೋಗ್ಯವಾಗಿದ್ದಾಳಾ ಅಮ್ಮಾ?"

"ಹೂಂ ಕಣೋ."

"ತಮ್ಮ?"

"ಹೊಲದ ಎಲ್ಲ ಕೆಲಸ ಅವನೇ ಈಗ ನೋಡ್ಕೊಳ್ತಾನೆ."

ಕಿರಿಯ ತಮ್ಮನ ನೆನಪು ಕಾಡುತ್ತ ಬಂದು ಅಪ್ಪು ಕೇಳಿದ:

"ಕುಟ್ಟಿ ಈಗ ದೊಡ್ಡೋನಾಗಿರ್ಬೇಕು ಅಲ್ವಾ? ಅವನನ್ನು ಚೆನ್ನಾಗಿ ನೋಡ್ಕೊ ಅಮ್ಮ. ಅವನಿಗೆ ತುಂಬಾ ಓದಿಸ್ಬೇಕು."

ಓದಿಸುವ ಮಾತು ಹಳೆಯದೊಂದು ನೆನಪನ್ನು ಕೆದರಿತು.

"ಅಪ್ಪಾ, ನಾನು ಪೋಲಿ ಸಹವಾಸಕ್ಕೆ ಬೀಳ್ತಹುದೂಂತ ಹಿಂದೆ ಭಾವಿಸಿದ್ದೆ. ಅಲ್ವ ಅಪ್ಪಾ? ನಾನು ಪೋಲಿಯಾಗಲಿಲ್ಲ. ಆದರೆ ಹೆತ್ತವರಿಗೆ ಸುಖಾನೂ ಕೊಡಲಿಲ್ಲ."

"ಹಾಗೆಲ್ಲಾ ಅನ್ಬಾರ್ದು ಅಪ್ಪು"

ಅಲ್ಲೇ ಇದ್ದ ಪಹರೆಯವನು ಗಟ್ಟಿಯಾಗಿ ಹೇಳಿದ:

"ಹೊತ್ತಾಯ್ತು. ಹೊರಡಿ!"

ಆ ಸೂಚನೆ ಕೇಳಿ, ಎಲ್ಲರ ಕಸಿವಿಸಿಯೂ ಹೆಚ್ಚಿತು. ಆವರೆಗಿನ ಗಾಂಭೀರ್ಯವೆಲ್ಲ ಕರಗಿ ಜಾನಕಿಯ ಕತ್ತಿನ ಸೆರೆಗಳು ಬಿಗಿದು ಬಂದುವು. ತುಟಿಗಳು ಕಂಪಿಸಿದುವು.

ಅಪ್ಪುವೆಂದ:

"ಪಕ್ಕದ ಕೊಠಡೀಲೇ ಚಿರುಕಂಡ ಇದ್ದಾನಮ್ಮಾ. ನಾವು ಚಿಕ್ಕೋರಾಗಿದ್ದಾಗ ನೀನು ನೇಂದ್ರ ಬಾಳೆಹಣ್ಣು ಕೊಟ್ಟಿದ್ದನ್ನ ಯಾವಾಗಲೂ ನೆನಸ್ಕೊಳ್ತಾನೆ. ಮಾತಾಡಿಸಿ ಹೋಗಮ್ಮಾ."

ತಾಯಿಯೂ ತಂದೆಯೂ ಚಿರುಕಂಡನತ್ತ ಚಲಿಸಿದರು.

ಅಪ್ಪು ಎರಡೂ ಕೈಗಳನ್ನೂ ಹೊರ ಹಾಕಿ ಜಾನಕಿಯ ತೋಳುಗಳನ್ನು ಹಿಡಿದುಕೊಂಡ.

ಬಲು ಪ್ರಯಾಸಪಡುತ್ತ ಆಕೆ ಕೇಳಿದಳು:

"ಯಾವಾಗ?"

"ಗೊತ್ತಿಲ್ಲ ಜಾನೂ... ಭೇಟಿ ಪ್ರಾಯಶಃ ಇದೇ ಕೊನೇದು."

"ಅಯ್ಯೋ!"

"ಅಳಬೇಡ ಜಾನೂ."

ಆಕೆಯ ಕೈಗಳನ್ನು ಬಿಟ್ಟು ಮಗುವಿನ ಮುಖವನ್ನು ಬರಸೆಳೆದು ಅಪ್ಪು ಮುದ್ದಿಸಿದ.

"ಮಗೂನ ನೋಡ್ಕೊ ಜಾನೂ."

"ಹೂಂ...."

ಹೇಳಬೇಕೆಂದಿದ್ದ ಒಂದು ವಿಷಯವನ್ನು ಹೇಳಲಾಗದೆ ಸಂಕಟಪಡುತ್ತ ಅಪ್ಪುವೆಂದ:

"ಒಂದು ವಿಷಯ ಜಾನೂ—"

ಪಹರೆಯವನ ಸ್ವರ ಮತ್ತೂ ಜೋರಾಗಿ ಕೇಳಿಸಿತು:

"ಹೊರಡ್ರಿ. ಹೊತ್ತಾಯ್ತು! ಬೇರೆಯವರ ಹತ್ತಿರ ಯಾಕ್ರಿ ಮಾತಾಡ್ತೀರಾ ಅಲ್ಲಿ?"

ಜಾನಕಿಯೆಂದಳು:

"ಹೇಳಿ—ಹೇಳಿ!"

"ನೀನು ಮುಂದೆ ಬೇರೆ ಯಾರನ್ನಾದರೂ—"

ಜಾನಕಿ ತನ್ನ ಅಂಗೈಯಿಂದ ಆತನ ಬಾಯಿ ಮುಚ್ಚಿದಳು. ಉದ್ವೇಗದಿಂದ ಆತ ಅದನ್ನು ತೇವಗೊಳಿಸಿದ.

ತಂದೆ—ತಾಯಿ ಚಿರುಕಂಡನನ್ನು ಮಾತನಾಡಿಸಿ ಬಂದರು.

"ಅವನ ಮನೆಯವರೂ ಬಂದಿದ್ದಾರೆ. ಎಲ್ಲರೂ ಬಂದಿದ್ದಾರೆ. ಜತೆಯಾಗೇ ಬಂದ್ವಿ" ಎಂದ ಅಪ್ಪುವಿನ ತಂದೆ.

ಮತ್ತೆ ಅಳತೊಡಗಿದ ತಾಯಿಯನ್ನು ಕುರಿತು ಅಪ್ಪು ಹೇಳಿದ:

"ಅಮ್ಮಾ! ಅಳಬೇಡಮ್ಮಾ! ಮುಂದೆ ಒಂದು ದಿನ ನಮ್ಮ ರಾಜ್ಯ ಬರ್ತದೆ. ಆಗ, ಹಿರೇ ಮಗನ್ನ ಕಾಣಿಕೆ ಕೊಟ್ಟ ವೀರಮಾತೇಂತ ನಿನ್ನನ್ನ ಪೂಜಿಸ್ತಾರೆ!"

"ಅಯ್ಯೋ!"

ಮತ್ತೆ ಪಹರೆಯವನ ಧ್ವನಿ:

"ಬುದ್ದಿ ಇಲ್ಲ ನಿಮಗೆ ?—ನಡೀರಿ!"

ತಂದೆಯ ಸ್ವರ: "ಬರ್ತೇವೆ ಅಪ್ಪು..."

ಅವರು ಒಲ್ಲದ ಪಾದಗಳನ್ನೆಳೆದುಕೊಂಡು ಹೋದರು. ಬರಲಾರದ ದೃಷ್ಟಿಗಳನ್ನು ಕೀಳುತ್ತ ನಡೆದರು, ಅಪ್ಪು ನಿಂತಲ್ಲೆ ನಿಂತ...

......ಬೆನ್ನು ಬಾಗಿದ್ದ ಬೂಬಮ್ಮ "ಎಲ್ಲಿದ್ದೀಯೋ?" ಎಂದು ಕರೆಯುತ್ತ ಅಳುತ್ತ ಕಿರಿಯ ಮಗನೊಡನೆ ಬಂದಳು. ಆಕೆ ಅಪ್ಪುವನ್ನು ನೋಡಿದಳು ಮುಂದೆ ಚಿರುಕಂಡನನ್ನು, ಬಳಿಕ ಕುಞಂಬುವನ್ನು.

"ಬಾ ಅಮ್ಮ, ಬಾ" ಎಂದು ಅಬೂಬಕರ್ ಕರೆದ.

ರೋದಿಸುತ್ತಲೇ ಆಕೆ ಕಂಬಿಗಳೆಡೆಯಿಂದ ಕೈಹಾಕಿ ಮಗನ ಮೈದಡವಿದಳು. ಮುಖವನ್ನು, ಮೂಗನ್ನು, ತೋಳುಗಳನ್ನು ಮುಟ್ಟಿ ನೋಡಿದಳು.

"ನಿನ್ನ ತಂದೆ ಹಾಗೆ ಮಾಡ್ದಾಂತ ನೀನು ಹೀಗೆ ಮಾಡಿಟ್ಟು ಹೋಗ್ತೀಯಲ್ಲೊ."

"ಅಳಬೇಡಮ್ಮ. ಅಬ್ದುಲ್ಲ ನಿನ್ನ ಸಾಕ್ತಾನೆ."

ಒಮ್ಮೆಲೆ ಕಿರಿಮಗನತ್ತ ತಿರುಗಿ ಬೂಬಮ್ಮ ಅಂದಳು:

"ಅವನು ನನ್ನನ್ನೇನು ಸಾಕ್ತಾನೆ, ಮಣ್ಣು! ನನ್ನ ಮಾತು ಒಂದಾದರೂ ಕೇಳ್ತಾನಾ ಅಂತ ನೀನೇ ವಿಚಾರಿಸು!"

"ಯಾಕೆ ಅಬ್ದುಲ್ಲ? ಅಮ್ಮನ ಮಾತು ಕೇಳೋದಿಲ್ವೇನೋ?"

ಆ ತಮ್ಮ ಒಲವು ತುಂಬಿದ ದೃಷ್ಟಿಯಿಂದ ಅಣ್ಣನನ್ನು ನೋಡುತ್ತ ರಾಗ ಎಳೆದ:

"ಕೇಳ್ತೇನಣ್ಣ. ಆದರೆ ನಾನು ಪುಸ್ತಕ ಓದೋದು ನೋಡಿದ್ರೆ ಅಮ್ಮ ಬೈತಾಳೆ."

ಆ ಪರಿಸ್ಥಿತಿಯಲ್ಲೂ ಅಬೂಬಕರ್‌ಗೆ ನಗು ಬಂತು.

"ಒಳ್ಳೇ ಅಮ್ಮ! ಓದಿದರೆ ಬಯ್ಬಹುದಾ?"

ತನಗೆ ಅವಮಾನವಾಯಿತೆಂದು ಬೂಬಮ್ಮನೆಂದಳು:

"ಓದಿದರೆ ಯಾಕೆ ಬಯ್ತೇನೆ ನಾನು? ಓದಿ ಓದಿ ಊರು ಬಿಡಬಾರ್ದೂಂತ ಹೊಟ್ಟೆ ಸಂಕಟಕ್ಕೆ ಏನಾದರೂ ಅನ್ತೇನೆ ಒಮ್ಮೊಮ್ಮೆ."

"ಅದೇನೋ ಸರೀನೆ ಅಮ್ಮ. ಅಬ್ದುಲ್ಲನಿಗೂ ಅಷ್ಟು ಗೊತ್ತಾಗೋದಿಲ್ವ?"

ಬೂಬಮ್ಮ ಅಬ್ದುಲನನ್ನ ಬರಸೆಳೆದು ಹಿರಿಯ ಮಗನತ್ತ ನೋಡಿ ಅಂದಳು:

"ನಿನಗೆ ತಿಂಡಿ ತಂದಿದ್ದೆ. ಆದರೆ ಅವನ್ನು ಒಳಗೆ ಬಿಡಲಿಲ್ಲ."

"ನೀನು ಬಂದೆಯಲ್ಲಮ್ಮ. ಅದೇ ಸಾಕು!"

ಆ ಮಾತು ಕೇಳಿದೊಡನೆಯೆ ತಾನು ಬಂದ ಸಂದರ್ಭ ನೆನಪಾಗಿ ಬೂಬಮ್ಮ ಸಂಕಟ ತಡೆಯಲಾರದೆ ಅಳತೊಡಗಿ ಸರಕಾರವನ್ನು ಶಪಿಸಿದಳು.

ಅಬೂಬಕರ್ ತಾಯಿಯನ್ನು ಸಂತವಿಸುತ್ತ ಹೇಳಿದ:

"ನಾಳೆ ದಿನ ಯಾರಾದರೂ ನಿನ್ನ ದೊಡ್ಡ ಮಗ ಏನಾಗಿದ್ದಾಂತ ಕೇಳಿದರೆ ಏನ್ಹೇಳ್ತೀಯಾ?"

"ನನಗೆ ಗೊತ್ತಿಲ್ವ? ಬೀಡಿ ಕೆಲಸಗಾರನಾಗಿದ್ದಾಂತ ಹೇಳ್ತೇನೆ..."

ಹಾಗೆ ಅನ್ನುತ್ತಿದ್ದಂತೆಯೇ, ಮಗ ಎಷ್ಟೋ ಸಾರೆ ಹೇಳಿದ್ದುದು ನೆನಪಾಗಿ ಆಕೆಯೆಂದಳು:

"ಸಂಘದ ದಳಕ್ಕೆ ನಾಯಕನಾಗಿದ್ದಾಂತಲೂ ಹೇಳ್ತೇನೆ."

"ಭೇಷ್ ಅಮ್ಮ ! ಆಗ ನಿನಗೆ ಜನರು ಗೌರವ ಕೊಡ್ತಾರೆ."

ತಾಯಿ ಮಗನಿಗೊಂದು ಗುಟ್ಟು ಹೇಳಿದಳು:

"ಈಗಲೂ ಹಾಗೆ ಕಣೋ. ಮೊದಲು ಬೂಬಮ್ಮನ್ನ ಯಾರು ಮಾತಾಡಿಸ್ತಿದ್ರು? ಈಗ ಎಲ್ರೂ ಸುಖದುಃಖ ವಿಚಾರಿಸೋರೆ.... ಆದರೂ ನೀನು ಅವರ ಕೈಗೆ ಸಿಗಬಾರ್ದಿತ್ತು ಮಗ...."

"ನಾನು ಯಾವಾಗ್ಲೂ ನಿನ್ನ ಪಕ್ಕದಲ್ಲೆ ಇರ್‍ತೇನೇಂತ ಯೋಚಿಸ್ಕೊಮ್ಮ

"ಅಬ್ದುಲ್ಲ ಅಣ್ಣನಿಗೆ ಹೇಳಿದ:

"ಅಮ್ಮ ಎಷ್ಟೋ ಸಲ ನನ್ನನ್ನೇ ಅಬೂಬಕರ್ ಅಂತ ಕೂಗ್ತಾಳೆ."

"ಹೌದಾ! ನೀನು ಜಾಣ. ಅಮ್ಮನ್ನ ಬಿಟ್ಟಿರ್ಬೇಡ."

"ಹೂಂ ಅಣ್ಣ."

ಮತ್ತೆ ಹೊತ್ತಾಯಿತೆಂಬ ಆಕ್ರೋಶ.

"ಹೋಗ್ತಾ ಅಪ್ಪು ಕುಂಞಾಂಬು, ಚಿರುಕಂಡ ಎಲ್ಲರನ್ನೂ ಮಾತಾಡಿಸ್ಕೊಂಡು ಹೋಗಮ್ಮ."

"ಹೂಂ. ನನಗೀ ಗತಿ ತಂದಿಟ್ಟೆಯಲ್ಲೋ....!"

.....ಅಳುತ್ತ ಬೂಬಮ್ಮ ಕುಂಞಾಂಬುವನ್ನು ನೋಡಿದಳು, ಚಿರುಕಂಡನ ಗುರುತು ಹಿಡಿದಳು, ಅಪ್ಪುವಿನ ಬಳಿ ನಿಂತು ಅಂದಳು:

"ನನ್ನ ಮಗ ಇನ್ನೂ ಚಿಕ್ಕೋನು. ಅವನಿಗೇನೂ ತಿಳೀದು. ಅವನನ್ನು ಯಾವ ಹೊತ್ತಿನಲ್ಲೂ ಬಿಟ್ಟಿರ್ಬೇಡೀಪ್ಪಾ...."

ಆಕೆ ಹೋಗುತ್ತಿದ್ದಂತೆ ಕಂಪಿಸುತ್ತಿದ್ದ ಧ್ವನಿಯಲ್ಲಿ ಅಪ್ಪು ಚಿರುಕಂಡನಿಗೆ ಹೇಳಿದ: "ಒಬ್ಬೊಬ್ಬರ್ನ ಬಿಡ್ತಾರೆ, ಸರ್ಕಸ್ನಲ್ಲಿ ಮಾಡೋಹಾಗೆ. ಒಂದೇ ಸಲ ಅವರ್ನೆಲ್ಲ ಕಳಿಸಿದ್ರೆ ಏನಾಗ್ತಿತ್ತೊ?"

ಬರುತ್ತಿದ್ದವರು ಯಾರೆಂಬುದನ್ನು ನೋಡುತ್ತ ಚಿರುಕಂಡ ಹೇಳಿದ.

"ನನ್ನ ತಾಯಿಯನ್ನೊಮ್ಮೆ ಸಮಾಧಾನಪಡಿಸಿ ಕಳಿಸಿದರೆ ಸಾಕು. ಇವರು ಅಳೋದನ್ನು ನೋಡ್ತಿರೋದು ಎಂಥ ಹಿಂಸೆ!"

ಬಂದವರು ಕುಂಞಾಂಬುವಿನ ತಂದೆ ತಾಯಿ ಮತ್ತು ಹೆಂಡತಿ ಶ್ರೀದೇವಿಯಮ್ಮ.

ಮತ್ತೆ ಅದೇ ರೋದನ—ಮೌನವಾಗಿ ಮತ್ತು ಗಟ್ಟಿಯಾಗಿ.

"ಅಣ್ಣ ಚೆನ್ನಾಗಿದ್ದಾನ ಅಪ್ಪ?"

"ಹೂಂ ಕುಂಞಾಂಬು. ನಿನ್ನಣ್ಣ ಬಂದ ಸ್ವಲ್ಪ ದಿವಸ ಸಪ್ಪಗಿದ್ದ. ಈಗ ಹುಷಾರಾಗಿದ್ದಾನೆ. ನಿನ್ನ ತಮ್ಮನಿಗೆ ಮುಂದಿನ ತಿಂಗಳು ಪರೀಕ್ಷೆ."

"ನಾರಾಯಣನನ್ನೂ ನೀಲೇಶ್ವರಕ್ಕೆ ಕಳಿಸ್ಬೇಕಪ್ಪ. ಅವನು ತುಂಬಾ ಚುರುಕು. ಅವನನ್ನು ಹೇಗಾದರೂ ಮಾಡಿ ಕಾಲೇಜಿನಲ್ಲೂ ಓದಿಸ್ಬೇಕು."

ಅಳುತ್ತಲಿದ್ದ ತಾಯಿ ಅಂದಳು:

"ನಿನ್ನ ಹೆಂಡತಿಗಿಷ್ಟು ಹೇಳು ಮಗ. ಒಂದು ದಿನವಾದರೂ ಸರಿಯಾಗಿ ಊಟ ಮಾಡಿದ್ದರೆ....."

ಶ್ರೀದೇವಿ ಭೂಮಿ ನೋಡುತ್ತ, ಕಾಲಿನ ಉಗುರಿನಿಂದ ನೆಲದ ಮೇಲೆ ಗೆರೆ ಎಳೆಯುತ್ತ, ಸೆರಗು ಕಚ್ಚಿಕೊಂಡು ಮೌನವಾಗಿ ಅಳುತ್ತಿದ್ದಳು.

ಭಾವವಿಕಾರಗಳನ್ನೆಂದೂ ತೋರಗೊಡದಿದ್ದ ಕುಂಞಾಂಬು ನುಡಿದ:

"ಅತ್ತೆಯ ಮನಸ್ಸು ನೋಯಿಸ್ಬೇಡ ಶ್ರೀದೇವಿ."

ಬೇರೇನೋ ಸಂಕಟ ಬಾಧಿಸುತ್ತಿದ್ದಂತೆ ತಂದೆ ಹೇಳಿದ:

"ಆಕೆ ಇನ್ನೂ ಚಿಕ್ಕವಳು...."

ಹಾಗೆಯೇ ಅತ್ತಿಗೆ ಮತ್ತಿತರರಿಗೆ ಸಂಬಂಧಿಸಿದ ಮಾತುಗಳು, ಹೊಲದ ವಿಷಯ, ಹೋರಿಗಳ ವಿಷಯ.

.... ಕಣ್ಣೀರೊರೆಸಿಕೊಂಡು ಹೊರಡುತ್ತ ಅವರೂ ಉಳಿದವರನ್ನು ಮಾತನಾಡಿಸಿ ಹೋದರು.

..... ಕೊನೆಯದಾಗಿ ಬಂದುದು ಚಿರುಕಂಡನ ತಂದೆ ತಾಯಿ ಮತ್ತು ಕೈಹಿಡಿದಾಕೆ.

ಆ ತಾಯಿ ಮಗನ ಕೈಬೆರಳುಗಳನ್ನು ಬಿಗಿಹಿಡಿದಳು, ಕೂದಲ ಮೇಲೆ ಕೈಯಾಡಿಸಿದಳು. ತನ್ನದೇ ಆದ ಆ ಮಾಂಸದ ತುಣುಕನ್ನು ಮುಟ್ಟಿನೋಡಿದಳು. ಆಕೆಯ ಆಕ್ರಂದನವನ್ನು ಚಿರುಕಂಡನಿಗೇನು, ಬಳಿಯಲ್ಲಿದ್ದ ಅಪ್ಪು-ಕುಂಞಾಂಬು ಯಾರೂ ಸಹಿಸದೆಹೋದರು. ಅವರೆಗೂ ವಿಗ್ರಹದಂತೆ ಎತ್ತಲೋ ದೂರ ನೋಡುತ್ತ ಕುಳಿತಿದ್ದ ಅಧಿಕಾರಿಯೂ ಮಿಸುಕಾಡಿದ. ಪಹರೆಯವನು ಮುಖ ತಿರುಗಿಸಿಕೊಂಡ.

ಅವರಿಗೆಲ್ಲ ಬೇರೆ ಮಕ್ಕಳಿದ್ದಾರೆ. ನನಗೆ ಯಾರಿದ್ದಾರೆ ಚಿರೂ? ಅಯ್ಯೋ! ನನಗೆ ಯಾರಿದ್ದಾರೆ ಇನ್ನು?"

ವಂಶದ ಕುಡಿಯಾಗಿ ಉಳಿದಿದ್ದುದೊಂದೇ ತುಣುಕು. ಆ ಕುಡಿಯನ್ನೇ ಚಿವುಟಲು ದುಷ್ಟ ಕೈಗಳು ಮುಂದೆ ಬಂದಿದ್ದುವು.

"ಅಳಬೇಡ ಅಮ್ಮ, ನನ್ನ ಬದಲು, ಮಕ್ಕಳು ತೋರಿಸ್ಬೇಕಾದ ಪ್ರೀತೀನ ಇನ್ನೂ ನೂರು ಜನ ನಿನಗೆ ತೋರಿಸ್ತಾರೆ."

ಆ ಎರಡು ವರ್ಷಗಳ ಅವಧಿಯಲ್ಲಿ ತಲೆಯ ಕೂದಲೆಲ್ಲ ನರೆತಿದ್ದ ತಂದೆಯೂ ಸಂತೈಸುತ್ತ ಹೇಳಿದ:

"ಅಳಬಾರದು ಕಲ್ಯಾಣಿ. ಈ ಮಗುವನ್ನು ಕೂಡ ದೇವರು ಕೊಟ್ಟೇ ಇರ್ಲಿಲ್ಲಾಂತ ತಿಳ್ಕೊ."

"ಕಟುಕರು! ಕಲ್ಲೆದೆಯವರು! ಹೆತ್ತಕರುಳಿನ ಸಂಕಟ ಗಂಡಸರಾದ ನಿಮಗೆ ಏನು ಗೊತ್ತಾದೀತು!"

"ಅಮ್ಮಾ....."

ವರುಷಗಳ ಹಿಂದೆ ತಾನು ಬರೆದ ಕರಪತ್ರಗಳನ್ನೋದುತ್ತಿದ್ದ ಹೆಣ್ಣು. 'ಅಪ್ಪು ಅಣ್ಣನ ಕೈಲಿ ಅವತ್ತು ಸೀರೆ ಕಳಿಸಿರ್ಲಿಲ್ವ?' ತನ್ನ ಹೆಂಡತಿ. ತನ್ನನ್ನೇ ನೋಡುತ್ತಿದ್ದ ಎರಡು ಕಣ್ಣುಗಳು.

ಆಕೆಯೆಂದಳು:

"ಅಣ್ಣ ನಿಮಗೆ ನಮಸ್ಕಾರ ತಿಳಿಸಿದ್ದಾನೆ."

ಆಕೆಯೇ ಅಲ್ಲವೆ ಆ ಮಾತನಾಡಿದ್ದು? ತನ್ನ ಹೆಂಡತಿ ಬರೇ ಮುಗ್ಧೆ ಎಂದು ಒಂದೊಂದು ಸಾರೆ ಅಂದುಕೊಂಡಿದ್ದ ಚಿರುಕಂಡ... ಅದು ತಪ್ಪು ಕಲ್ಪನೆ. ಇಲ್ಲಿ, ಆಕೆಯನ್ನು ತಾನು ಸಮಾಧಾನಪಡಿಸುತ್ತಿರಲಿಲ್ಲ. ಅವಳು ತನಗೆ ಹೊಸ ಶಕ್ತಿ ನೀಡುತ್ತಿದ್ದಳು....

"ಚಂದು ಪುನಃ ಅಂಗಡಿ ಇಟ್ಟಿದ್ದಾನಾ?"

"ಹೂಂ. ಮೊದಲಿನ ಹಾಗೇ...."

ಮೊದಲಿನ ಹಾಗೆಯೆ! ಆಃ! ತನ್ನಾಕೆ ಆಡಿದ ಮಾತು. ನಿಜವಾಗಿಯೂ ಈಕೆಯ ಜತೆಗಾರನಾಗುವ ಯೋಗ್ಯತೆ ತನಗಿತ್ತೆ? ಬದುಕಿನ ಉದ್ದಕ್ಕೂ ಇಂತಹ ಜತೆಗಾತಿಯನ್ನು ಪಡೆಯುವಾತ ಎಷ್ಟು ಸುಖಿ!

ತಾಯಿ ರೋದಿಸುತ್ತಲೇ ಇದ್ದಳು:

"ಅಯ್ಯೊ! ಅಯ್ಯೊ ಚಿರೂ! ಅಯ್ಯೋ ಕಂದಾ!"

"ಅಮ್ಮಾ, ಅಳಬಾರದು! ನನಗೆ ಸಂಕಟವಾಗ್ತದೆ. ನಾನೂ ಅಳ್ಲೇನು? ಇಕೋ, ಇವತ್ತಿನಿಂದ ಈಕೇನ ನಿನ್ನ ಮಗಳೂಂತ ಭಾವಿಸಿ ನೋಡ್ಕೊ—ಅವಳ ಸುಖವೇ ನಿನ್ನ ಸುಖ ಅಂತ—"

ಮಾತು ಕಡಿಯಿತು. ಎರಡು ವರ್ಷಗಳ ಕಾಲವೆಲ್ಲ 'ಹೀಗಾದರೆ' 'ಹಾಗಾದರೆ' ಎಂದು ಮನಸ್ಸನ್ನು ಕದಡಿದ್ದ ಯೋಚನೆ, ಏನನ್ನು ಹೇಳಬೇಕು ಎಂದು ಮಾಡಿದ್ದ ನಿರ್ಧಾರ, ಯೋಗ್ಯವಾಗಿಯೇ ಇದ್ದುವು. ಆದರೆ ಆಡಬೇಕಾದ ಹೊತ್ತಿನಲ್ಲಿ ಸ್ವರವೇ ಕೈಕೊಟ್ಟಿತು.

ತಂದೆ ಕೇಳಿದ:

"ದಿನ ಗೊತ್ತಾಯ್ತಾ?"

"ಇನ್ನೂ ಇಲ್ಲ."

"ಗೊತ್ತಾದ ತಕ್ಷಣ ಹೇಳಿಕಳಿಸು. ಇನ್ನೊಮ್ಮೆ ಬರ್ತೇವೆ."

ಇನ್ನು ಬರುವುದು ಬೇಡವೆನ್ನಬೇಕೆಂದಿದ್ದ ಚಿರುಕಂಡ. ಆದರೆ, ಹಾಗೆ ಹೇಳಿದರೆ ಅವರಿಗೆಲ್ಲ ನೋವಾಗಬಹುದೆಂದು, ಆತ ಸುಮ್ಮನಾದ.

ಕುಳಿತಿದ್ದ ಅಧಿಕಾರಿ ಎದ್ದು, ನೇರವಾಗಿ ಬೇರೆ ಕಡೆ ನೋಡಿದ. ಪಹರೆಯವನ ಅನುಜ್ಞೆ ಬಂತು:

"ಇನ್ನು ಹೊರಡಿ !"

ಕೈಯನ್ನು ಅದುಮಿದ ಅಂಗೈ. ತಾವರೆ ಹೂವಿನ ಮೇಲೆ ಬೆಳ್ಳಿ ನೀರು ನಿಂತ ಹಾಗೆ ಕಣ್ಣುಗಳಲ್ಲಿ ಕಂಬನಿ.

ಆ ತಾಯಿಗೋ—ಬವಳಿ ಬಂತು. ಆಕೆಯ ಆಜೀವ ಒಡನಾಡಿಯಾದ ಗಂಡನು ಆಧಾರವಾದ. ಸೊಸೆಯೂ ತೋಳಿಗೆ ಭುಜ ಕೊಟ್ಟಳು.

"ಬರ್ತೇವೆ ಚಿರೂ..... ಬರ್ತೇವೆ ಅಪ್ಪೂ. ಕುಂಞಾಂಬು, ಅಬೂಬಕರ್ ಬರ್ತೇವಪ್ಪಾ."

ಕೊನೆಯ ಕೊಠಡಿಯಿಂದ, ಅಬೂಬಕರನ ಬಿರುಕುಬಿಟ್ಟಿದ್ದ ಸ್ವರ:

"ಕಯ್ಯೂರಿನವರಿಗೆಲ್ಲ ನಮ್ಮ ರಕ್ತನಮಸ್ಕಾರ ಹೇಳಿ, ಸಂಗಾತಿ! ನಾವು ಬದುಕಿದ್ದು ಯಾಕೆ, ಸಾಯ್ತಿರೋದು ಯಾಕೆ ಅನ್ನೋದನ್ನು ಯಾರೂ ಮರೀಬಾರದೂಂತ ಹೇಳಿ."

"ಹೇಳ್ತೇವಪ್ಪಾ-"

ಮತ್ತೆ ಚಿರುಕಂಡನಿಗೋಸ್ಕರವೇ ಕೊನೆಯ ನೋಟಗಳು....

..... ಆ ಸಂದರ್ಶನವಾದ ಮೇಲೆ ನೆಲೆಸಿದ ಮೌನ ಕ್ರೂರವಾಗಿತ್ತು. ತಮ್ಮ ಸುತ್ತಲೂ ಕಾಲದ ಜೇಡ ಹೆಣೆಯುತ್ತಿದ್ದ ಕರಿಯ ಬಲೆಗಳನ್ನು ಆ ನಾಲ್ವರೂ ಒಂದಾಗಿ ಮತ್ತೆ ತೊಡೆದರು. ಒಂದೊಂದು ಕೊಠಡಿಯಿಂದಲೂ ಮಾತಿನ ಸ್ವರ ಹೊರಟಿತು.

.... ಆ ದಿನ ಕಳೆದು ಒಂದು ವಾರವಾದಾಗ ಮೇಲಿನ ಅಧಿಕಾರಿಯಿಂದ ಅವರಿಗೆ ಸೂಚನೆ ಬಂತು:

ಮಾರ್ಚ್ 29ರಂದು ಮರಣದಂಡನೆ....

—"ಯಾವ ವಾರ ಇವತ್ತು?"

—"ಓ ! ಇನ್ನು ಎರಡೇ ದಿನ!"

—"ಎರಡು ದಿನ ಎರಡು ನಿಮಿಷದ ಹಾಗೆ ಕಳೀಬಾರದೆ!"

—"ನನ್ನ ಮನಸ್ಸಿಗೆ ಈಗ ಸಮಾಧಾನವಾಗಿದೆ!"

## ೧೦

ಸಂಜೆ ಸೂರ್ಯ ಮುಳುಗುತ್ತಿದ್ದ. ರಾತ್ರಿ ಕಳೆದು ಬೆಳಗಾದರಾಯಿತು.

ಡಿಕ್-ಡಿಕ್-ಡಿಕ್-ಅದು ಜೇಲರನ ಬೂಟುಗಾಲಿನ ಸಪ್ಪಳ.

"ನಿಮ್ಮ ರಾತ್ರಿಯ ಊಟಕ್ಕೆ ಏನು ಬೇಕು ಹೇಳಿ?"

"ರಾತ್ರಿಯ ಊಟಕ್ಕೆ?"

"ನಿಮಗೆ ಏನೇನು ಇಷ್ಟವೋ ಅದನ್ನೆಲ್ಲ ಮಾಡಿಸ್ತೇವೆ."

"ನಮಗೇನೂ ಬೇಕಾಗಿಲ್ಲ."

"ನಿಮ್ಮ ಕೊನೇ ಆಸೆಯೇನು? ನಡೆಸಿಕೊಡ್ತೇವೆ."

"ಏನಪ್ಪ? ಏನು ಕುಂಞಂಬು? ಅಬೂಬಕರ್—? ಹೇಳಿ. ನಮ್ಮ ಕೊನೆ ಆಸೆ ತಿಳಿಸಿದರೆ ನಡೆಸಿಕೊಡ್ತಾರಂತೆ!"

ಅಬೂಬಕರ್‌ನ ನಗೆ. ವ್ಯಂಗ್ಯ ಧ್ವನಿ:

"ಸಾಮ್ರಾಜ್ಯಶಾಹಿ ನಾಶವಾಗೋದನ್ನ ನೋಡಿ ಸಾಯ್ಬೇಕೂಂತ ನಮ್ಮ ಆಸೆ. ನಡೆಸಿಕೊಡ್ತಾರಾ ಕೇಳು ಚಿರುಕಂಡ!"

"ಆಹ್ಹಾ!"

ಆದರೂ ಅಪ್ಪು ಚಿರುಕಂಡನನ್ನು ಒಂದು ವಿಷಯ ಕಾಡುತ್ತಿತ್ತು: ಮಾಸ್ತರು..... ಮಾಸ್ತರನ್ನು ಕಾಣುವುದು ಸಾಧ್ಯವಾದರೆ?

"ಇದೊಂದು ಆಸೆಯಿದೆ ಕುಂಞಂಬು. ಕೇಳೋಣವೇ ಅಬೂಬಕರ್?"

"ಕೇಳು ಸಂಗಾತಿ."

"ಜೇಲರೆ, ನಮಗೆಲ್ಲ ಇರುವುದೊಂದೇ ಆಸೆ. ನಮ್ಮ ಮಾಸ್ತರೊಡನೆ ಭೇಟಿ ಏರ್ಪಾಟು ಮಾಡಿ."

ಸೆರೆಮನೆಯ ನಿಯಮಗಳು....

"ಆತ ಕೈದಿ. ಅದು ಸಾಧ್ಯವಿದೆಯೋ ಇಲ್ಲವೋ... ಸೂಪರಿಂಟೆಂಡೆಂಟರನ್ನು ಕೇಳ್ತೇನೆ"

* * *

ಎರಡು ಜತೆ ಬೂಟುಗಳು ಸದ್ದು. ಮತ್ತೆ ಯಾರು? ಸೂಪರಿಂಟೆಂಡೆಂಟರೆ ಬಂದರೆ?

ಅವರು ಬಂದೂಕುಧಾರಿಗಳಾದ ಪಹರೆಯವರು. ನಡುವೆ ಮಾಸ್ತರು ಒಂದೊಂದು ಕೈಗೂ ಒಂದೊಂದು ಸರಪಳಿ....

ನಾಲ್ವರೂ ಎದ್ದು ನಿಂತರು. ತರಗತಿಯ ವಿದ್ಯಾರ್ಥಿಗಳ ಹಾಗೆ.

ಜೇಲರು ಬಂದು ಹೇಳಿದ:

"ಭೇಟಿಗೆ ಸಮ್ಮತಿ ಕೊಟ್ಟಿದ್ದಾರೆ. ಆದರೆ ಹೆಚ್ಚು ತಡ ಮಾಡ್ಬೇಡಿ!"

ಕಂಪಿಸುತ್ತಿದ್ದ ಧ್ವನಿಯಲ್ಲಿ ಚಿರುಕಂಡನೆಂದ:

"ನೀವೆಲ್ಲಾ ಸ್ವಲ್ಪ ದೂರ ಹೋಗ್ತೀರಾ?"

"Sorry ಭೇಟಿಯ ಸಮಯದಲ್ಲಿ ನಾವಿಲ್ಲೇ ಇರ್ಬೇಕೂಂತ ಆಜ್ಞೆಯಾಗಿದೆ."

ಅಬೂಬಕರ್ ಸಿಡಿದು ನುಡಿದ:

"ಗೋಪ್ಯವಾಗಿ ನಾವು ಇಷ್ಟರಲ್ಲೇ ಇನ್ನೊಂದು ಒಳಸಂಚು ನಡೆಸ್ಬಹುದು ಅಂತ ಭಯ, ಅಲ್ಲ?"

"ಇರಲಿ ಬಿಡು, ಅಬೂಬಕರ್..."

ಮಾಸ್ತರು ಆ ನಾಲ್ಕೂ ಕೊಠಡಿಗಳ ಎದುರು ನಿಂತು ಆ ನಾಲ್ವರನ್ನೂ ನೋಡಿದರು ಮುಗುಳುನಗಲು ಯತ್ನಿಸಿದರು.

ಮಾತು—ಮಾತನಾಡಬೇಕು. ಭೇಟಿಯಿರುವುದು ಸಂಭಾಷಣೆಗೋಸ್ಕರ ಅದರಲ್ಲೂ ಕೊನೆಯ ಭೇಟಿ.

ಆದರೆ ನಿಮಿಷಗಳು ಸದ್ದಿಲ್ಲದೆಯೆ ಉರುಳಿದುವು.

ಮಾಸ್ತರ ಆಪ್ತ ಶಿಷ್ಯನಾಗಿದ್ದ ಚಿರುಕಂಡನೆಂದ:

"ನಾಳೆ ಬೆಳಿಗ್ಗೆ ನಾವೆಲ್ಲ ಹೋಗ್ತೇವೆ ಸರ್."

ಪ್ರಿಯಶಿಷ್ಯನಾದ ಅಪ್ಪುವೆಂದ:

"ನಮ್ಮನ್ನು ಮರೀಬೇಡಿ ಸರ್."

ಆ ಮಾತುಗಳಿಗೆ ಕಿವಿಗೊಡುವುದು ತಡೆಯಲಾಗದ ಸಂಕಟ. ಯಾಕಾದರೂ ಈ ಹುಡುಗರು ಇಂತಹ ಭೇಟಿ ಬೇಕೆಂದರೋ? ಇನ್ನು ಆ ಕುಂಞಂಬು-ಅಬೂಬಕರ್....ಒಬ್ಬರ ಮುಖದಿಂದೊಬ್ಬರ ಮುಖವನ್ನು ಮಾಸ್ತರು ನೋಡುತ್ತಲೇ ನಿಂತರು.

ಇಲ್ಲ, ಮಾತನಾಡುವುದೇನೂ ಇರಲಿಲ್ಲ. ಮಾತು ಸಾಧ್ಯವಿರಲಿಲ್ಲ.

ಇನ್ನೂ ಒಂದು ನಿಮಿಷ ತಡವಾದರೆ ಅಳಲಿನ ಕಟ್ಟೆ ಒಡೆಯಬಹುದು. ಅದು ಸರಿಯಲ್ಲ, ಅಂಥ ಬೀಳ್ಕೊಡುಗೆ ಸರಿಯಲ್ಲ.

ಏನನ್ನೋ ಆಡಬೇಕೆಂದು ಮಾಸ್ತರೆಂದರು:

"ಅಪ್ಪು-ಚಿರುಕಂಡ, ಎಲ್ಲಾ ಜತೇಲೇ ಇರಿ.... ಕುಂಞಂಬು-ಅಬೂಬಕರ್."

"ಇರ್ತೇವೆ, ಜತೆಯಾಗೇ ಇರ್ತೇವೆ."

ಇನ್ನು ಅಲ್ಲಿಂದ ಹೊರಡುವುದೇ ಮೇಲೆಂದು ಸರಪಳಿ ಬಿಗಿದಿದ್ದ ಬಲಗೈಯನ್ನೆತ್ತಿ ಬಿಗಿಮುಷ್ಟಿಯ ವಂದನೆ ಕೊಡುತ್ತ ಮಾಸ್ತರೆಂದರು:

"ರಕ್ತನಮಸ್ಕಾರ ಬಾಂಧವರೇ!"

"ರಕ್ತನಮಸ್ಕಾರ ಸರ್! ರಕ್ತನಮಸ್ಕಾರ ಸಂಗಾತಿ!"

ಕೊನೆಯ ಆಸೆಯ ಭೇಟಿ ಹಾಗೆ ಮುಗಿಯಿತು.

* * *

ಕಾರಿರುಳು. ಕೊಠಡಿಗಳ ಹೊರಗೆ ನಕ್ಷತ್ರ ರಾಶಿ ಬೀರಿದ ಮಬ್ಬುಬೆಳಕು ಆಗಾಗ್ಗೆ 'ಆಲ್-ಬೇಲ್' ಕೂಗು. ಪಹರಿ ಗಂಟೆ ಹೊಡೆಯುತ್ತಿದ್ದಾನೆ. ಎಂಟು, ಒಂಭತ್ತು, ಹತ್ತು...

ನಿದ್ದೆಗೆ ಆ ರಾತ್ರಿ ಅಲ್ಲಿ ಕೆಲಸವಿರಲಿಲ್ಲ. ಘಳಿಗೆ ಬಟ್ಟಲು ಸ್ವಲ್ಪ ಸ್ವಲ್ಪವಾಗಿಯೇ ಬರಿದಾಗುತ್ತಿದೆ. ಆದರೂ ಅವರ ವಿಚಾರಗಳು ಲೋಕ ಸಂಚಾರ ಮಾಡುತ್ತಿವೆ. ಕಯ್ಯೂರು-ಕಯ್ಯೂರಿನಿಂದ ಸ್ಟಲಿನ್ ಗ್ರಾಡಿಗೆ; ಅಲ್ಲಿಂದ ಲಂಡನಿಗೆ.... ದಿಲ್ಲಿಗೆ....

—"ಚಿರುಕಂಡ, ಕುಂಞಂಬು ಏನ್ಮಾಡ್ತಿದ್ದಾನೆ? ಮಾತಾಡು ಅನ್ನು ಅಬೂಬಕರ್‌ಗೆ"

—"ಏನನ್ನ ಮಾತಾಡ್ಬೇಕಂತೆ?"

—"ಏನಾದರೂ....

ಬಾಲ್ಯಕ್ಕೆ ಸಂಬಂಧಿಸಿದ ಯಾವುದೋ ವಿಷಯ. ಯಾವುದೋ ನೆನಪು.

ಚಿರುಕಂಡನ ಮೆದುಳು, ರೈತ ಸಮ್ಮೇಳನ ಏರ್ಪಡಿಸಲು ತಾವು ಸಿದ್ಧತೆ ಮಾಡುತ್ತಿದ್ದ ದಿನಗಳನ್ನು ಕುರಿತು ಯೋಚಿಸುತ್ತಿದೆ. ಆ ಸುಬ್ಬಯ್ಯ.... ಆತನಿಗೂ ಹೆಂಡತಿ ಮಕ್ಕಳಿದ್ದರಂತೆ. ಆದರೆ ಆತ ಪರಕೀಯ ಸರಕಾರದ ಕಾವಲುನಾಯಿಯಾಗಿದ್ದ. ನಾಯಿಯಂತೆ ಸತ್ತ. ತಾವು ಆತನನ್ನು ಕೊಲ್ಲಲಿಲ್ಲ. ಆದರೆ ಆ ಸಾವಿನ ನೆಪ ಹೇಳಿ ತಮ್ಮ ಕೊಲೆಗೆ ಏರ್ಪಾಟಾಗಿದೆ.... ಕುಂಞಂಬು— ಸಂಘದ ಕಟ್ಟಡಕ್ಕೆ ಆತ ಹಿಂದೆ ಜಾಗ ಕೊಟ್ಟುದಕ್ಕೆ ಈಗ ತೆರಬೇಕಾಗಿ ಬಂದಿರುವ ಬೆಲೆ ಎಂಥದು! ಅಬೂಬಕರ್-ತನ್ನ ಸ್ವಂತದ ವಿಷಯ ಒಮ್ಮೆಯಾದರೂ ಆತ ಯೋಚಿಸಿದ್ದನೋ ಇಲ್ಲವೋ.....

ನರಳುವ ಹಾಗೆ ಆಗುತ್ತಿದೆ ಅಪ್ಪುವಿಗೆ.

"ಯಾಕೆ ಅಪ್ಪು? ಏನಾಗ್ತಿದೆ ಅಪ್ಪು?"

"ಏನೂ ಇಲ್ಲ.... ಏನೂ ಇಲ್ಲ...."

ತಾವು ಯಾರೂ ಇನ್ನು ಸಪ್ಪೆ ಮುಖ ಹಾಕಬಾರದು. 'ವೀರರ ಹಾಗೆ ಗಲ್ಲಿಗೆ ಏರಿದರು' ಎಂದು ನಾಳೆಯ ಇತಿಹಾಸಕಾರ ಬರೆಯಬೇಕು.

"ನನಗೊಂದು ಕೊರಗು ಚಿರುಕಂಡ."

"ಏನಪ್ಪು?"

"ನಾವು ನಾಲ್ಕು ಜನರಲ್ಲಿ ಹಾಡೋರು ಒಬ್ಬರೂ ಇಲ್ಲ ... ಇದ್ದಿದ್ದರೆ ಹಾಡು ಹೇಳ್ತಾ ಗಲ್ಲಿಗೇರಿಸುವಲ್ಲಿಗೆ ಹೋಗ್ಬಹುದಿತ್ತು...."

"ಈಗ ಜಯಘೋಷ ಮಾಡ್ತಾ ಹೋಗೋಣವಂತೆ."

ಕುಂಞಂಬುವಿಗೆ ಒಡಹುಟ್ಟಿದವರ ನೆನಪಾಗುತ್ತಿದೆ. ಬಹಳ ಸಹಸ್ರ ಸೋದರರ

—ರಾಷ್ಟ್ರದ ಕೋಟಿ ಸೋದರರ—ನೆನಪು. ಇನ್ನೊಮ್ಮೆ ಅವಕಾಶ ದೊರೆತರೆ ಇದನ್ನೇ ತಾನು ಮಾಡುವುದು; ಮತ್ತೂ ಇದೇ ಹಾದಿಯನ್ನೇ ತಾನು ತುಳಿಯುವುದು.

ಅಬೂಬಕರ್‌ಗೆ ಕುಟ್ಟಿಕೃಷ್ಣನ ಚಿತ್ರ ಕಣ್ಣೆದುರಿಗೆ ಕುಟ್ಟಿತ್ತಿದೆ. 'ಸಂಗಾತಿ' ಎನ್ನುವುದು ಸಾಲದೆಂದು , 'ಅಣ್ಣಾ' ಎಂದೂ ಆತ ತನ್ನನ್ನು ಕರೆಯುತ್ತಿದ್ದ.... ನಾಳೆ ದೇಶ ಸ್ವತಂತ್ರವಾದಾಗ ಜನರಾಜ್ಯ ಬಂದಾಗ ಆತ ಬಿಡುಗಡೆ ಹೊಂದಿ ಕಯ್ಯೂರಿಗೆ ಮರಳುವ; ಬಾಲಸಂಘದ ಬದಲು ಸ್ವಯಂ ಸೇವಕ ಪಡೆಗೇ ಆತ ನಾಯಕನಾಗುವ.

"ಚಿರುಕಂಡ, ಮೀನು ಕಚ್ಚದೇಂತ ನೀನು ನೀರಿಗಿಳೀದೆ ದಡದ ಮೇಲೇ ಕೂತಿರ್ತಿದ್ದೆ—ನೆನಪಿದೆಯಾ?"

"ಹೂಂ."

....ನಡುರಾತ್ರಿ ಕಳೆದಿದೆ. ಪಹರೆಯವರು ಅತ್ತಿತ್ತ ಕಂದೀಲು ಹಿಡಿದು ಹೋಗಿ ಬರುತ್ತಿದ್ದಾರೆ. ಸುಂಯ್‌ಗುಡುತ್ತಿದೆಯಲ್ಲ ಗಾಳಿ ? ಯಾಕೆ, ಯಾರೂ ನಿದ್ರಿಸಿಲ್ಲವೆ? ಮಾಸ್ತರು, ಕಣ್ಣ, ಯಾರೂ ನಿದ್ರಿಸಿಲ್ಲವೆ?

ಹಾಡು! ಅವರಿಗೆಲ್ಲ ಪ್ರಿಯವಾದ ಹಾಡು! ಅವರಿಗೆಲ್ಲ ಪ್ರಿಯನಾದ ಕಣ್ಣ ಹಾಡುತ್ತಿದ್ದಾನೆ! ಗಾಳಿಯಲ್ಲಿ ತೇಲುತ್ತ ಬಂದು ಕೊಠಡಿಯೊಳಕ್ಕೆ ಅದು ನುಸುಳುತ್ತಿದೆ.

ಅಗೋ, ಬೇರೆ ಕಡೆಗಳಿಂದ! ಎಲ್ಲರೂ ಹಾಡುವವರೇ. ಯಾಕೆ, ಅದು ಕಳ್ಳಕಾಕರಿರುವ ಬರಾಕು ಅಲ್ಲವೆ? ಎಂಥ ಕಳ್ಳರು? ಅವರಿಗೆ ಇದೊಂದು ಅರ್ಥವಾಗುತ್ತಿಲ್ಲವೆಂದೆ? ಅವರಿಗೇನು ಹಾಡಲು ಬರದೆಂದೆ?

ಅದು ಯಾರ ಸ್ವರವೊ? ಅದು ಯಾರದೊ? ಯಾರದೊ ಅದು?

"ಅಪ್ಪು, ಕೇಳಿಸ್ತಿದೆಯಾ? ಯಾರೂ ಮಲಗಿಲ್ಲ. ನಾವು ಹೊರಡುವ ಹೊತ್ತಿಗೆ ಮುಂಚೆ ಎಲ್ಲರೂ ಎಚ್ಚರವಿದ್ದು ವಿದಾಯ ಹೇಳ್ತಿದ್ದಾರೆ..."

"ಹೂಂ."

ಕುಂಞಂಬುವಿಗೆ ಭಾವೋದ್ವೇಗದಿಂದ ಸಂಕಟವಾಗುತ್ತಿದೆ. ಆತ, ಕತ್ತಲನ್ನು ಬೆದರಿಸಿ ಗುಡುಗುತ್ತಿದ್ದಾನೆ:

"ದಲಿತಕೋಟಿಯ ಎಲುಬುಗೂಡಿನ ಮೇಲೆ ಕಟ್ಟಿದ ಈ ಸಾಮ್ರಾಜ್ಯ ಖಂಡಿತ ಪುಡಿಪುಡಿಯಾಗ್ತದೆ ! ಲೋಕದೆಲ್ಲ ದುಡಿಯುವ ಜನ ವಿಜಯಪತಾಕೆ ಹಾರಿಸಿಯೇ ಹಾರಿಸ್ತಾರೆ!"

ಗೊಗ್ಗರಸ್ವರದಲ್ಲಿ ಅದೇನನ್ನೋ ಅಬೂಬಕರ್ ಹಾಡತೊಡಗುತ್ತಾನೆ. ಅದು

ಗದ್ಯವೊ ಪದ್ಯವೊ? ಲೆಫ್ಟ್ ರೈಟ್ ನಿರ್ದೇಶವೊ? ನಾಭಿಯಿಂದ ಹೊರಟು ಗಗನವೇರಿದ ಆಲಾಪನೆಯೊ?

ತನ್ನ ಕೊಠಡಿಯೊಳಗಿಂದಲೆ ಯಾರೊ ಹಾಡಿದಂತಾಗುತ್ತಿದೆ ಅಪ್ಪುವಿಗೆ, ಹೆಣ್ಣು ಧ್ವನಿ. ಮಂಜುಳ ಕಂಠ.....

"ಓಮನ ಕಿಡಾವೇ..."

ತಾಯಿ!

"ಅಮ್ಮಾ-ಅಮ್ಮಾ..."

"ಅಪ್ಪು—ಏ ಅಪ್ಪು...."

..... ಢಣ್, ಢಣ್, ಢಣ್, ಢಣ್..... ಇನ್ನೆರಡು ಘಂಟೆ ಹೊತ್ತು .

ಎಚ್ಚತ್ತೇ ಇದೆ ಸೆರೆಮನೆ. ಕೋಳಿ ಕೂಗುತ್ತಿದೆ. ಸರಿಯಾದ ಹೊತ್ತು ಹೌದೋ ಅಲ್ಲವೋ—ಆದರೂ ವಾತಾವರಣದ ಪ್ರಭಾವಕ್ಕೊಳಗಾಗಿ ಪ್ರಾಕಾರದಾಚೆಗಿನ ಮರಗಳಿಂದ ಕಾಗೆಗಳು ಕಾಕಾ ಎನ್ನುತ್ತಿವೆ....

ಮತ್ತೆ ಅದೊಂದೂ ಕೇಳಿಸದ ಹಾಗೆ ಸಹಸ್ರ ಕಂಠಗಳಿಂದ ಹಾಡು, ಎಂದೂ ಮುಗಿಯದ ಹಾಡು.

ತಣ್ಣನೆಯ ಗಾಳಿ. ಉಷೆ ಬರುತ್ತಿದ್ದಾಳೆ, ಅವರ ಪಾಲಿಗೆ, ಕೊನೆಯ ಬಾರಿಗೆ. ಆದರೆ ಅದೇಕೋ ಆಕೆ ಅವಕುಂಠನವತಿ ಈಗ. ಉಟ್ಟಿರುವುದು ಕರಿಯ ಸೀರೆ.

ಚಿರುಕಂಡ ಎದ್ದು ನಿಂತು ಹೇಳಿದ:

"ಸಂಗಾತಿಗಳೇ ! ಏಳಿ! ಬೆಳಗಾಯ್ತು....!"

ಸಶಸ್ತ್ರದಳ ಬೆಂಗಾವಲಿಗೆ. ಜೇಲರು, ಮೇಲಧಿಕಾರಿ; ಜಿಲ್ಲೆಯ ಕಲೆಕ್ಟರು.

"ಮಾರ್ಚ್ !"

ಆ ನಾಲ್ವರನ್ನು ಮುಂದಕ್ಕೆ ನಡೆಸಿದರು. ದೃಢವಾಗಿತ್ತು ಅವರೆಲ್ಲರ ನಡಿಗೆ.

"ಹಾಲ್ಟ್!"

ಜೇಲಿನ ಅಧಿಕಾರಿ ಕೈಗಡಿಯಾರ ನೋಡಿದ. ಇನ್ನೈದು ನಿಮಿಷ.

ಬೇಡಿಗಳನ್ನು ಬಿಚ್ಚಿದರು. ಕೆಳಗಿನಿಂದ ಅವರನ್ನು ವಧಾಸ್ಥಾನಕ್ಕೆ ಒಯ್ಯಬೇಕಿನ್ನು.

ಆಗ ಚಿರುಕಂಡ ನಿರ್ಭೀತವಾದ ಏಕಪ್ರಕಾರವಾದ ಧ್ವನಿಯಲ್ಲಿ ಹೇಳಿದ:

"ಮೈ ಮುಟ್ಟಬೇಡಿ. ನಾವೇ ಮೇಲಕ್ಕೆ ಹೋಗ್ತೇವೆ!"

"ಹೋಗಲಿ ಬಿಡಿ" ಎಂದರು ಕಲೆಕ್ಟರು.

ಸಂದರ್ಭ ಬಂದರೆ ಸಿದ್ಧರಾಗುವುದೇ ಮೇಲೆಂದು ಸಶಸ್ತ್ರ ದಳದೊಂದು ಸಾಲಿನವರು ಬಂದೂಕು ಗುರಿ ಇಟ್ಟು ನಿಂತರು.

ಇನ್ನೂ ಎರಡು ನಿಮಿಷ.

ಸೆರೆಮನೆಯೊಳಗಿಂದ ಜನಯೋಧರ ಗೀತ ಹೆಚ್ಚು ಹೆಚ್ಚು ಸ್ಪಷ್ಟವಾಗುತ್ತ ಕೇಳಿ ಬಂತು.

* * *

ಕಲೆಕ್ಟರ್ ಮುಖದ ಮೇಲೆ ಸಿಡುಕು ಭಾವ ತೋರಿದರು. ಅಧಿಕಾರಿ ಕೈಗಡಿಯಾರವನ್ನೇ ನೋಡಿದ:

ಕೆಳಗೆ ಕಂದಕ. ಅದಕ್ಕೆ ಅನಿಸಿ ನಾಲ್ಕು ಹಲಿಗೆಗಳು. ಮೇಲುಗಡೆ ತೂಗಾಡುತ್ತಿದ್ದ ಉರುಳುಗಳು.

"ಮುಖಗಳಿಗೆ ಮುಸುಕು ಹಾಕಿ!"

"ಇಲ್ಲ, ನಮಗೆ ಮುಸುಕು ಬೇಕಾಗಿಲ್ಲ!"

ಉರುಳು ಒಂದೊಂದು ಕೊರಳಿಗೂ ಆಭರಣವಾಯಿತು.

ಉಚ್ಚಕಂಠದಿಂದ ಚಿರುಕಂಡ ಕೂಗಿದ :

"ಇಂಕ್ವಿಲಾಬ್—"

ಅಪ್ಪು, ಕುಂಞಾಂಬು, ಅಬೂಬಕರ್ ಉತ್ತರವಿತ್ತರು:

"ಜಿಂದಾಬಾದ್!"

"ಸಾಮ್ರಾಜ್ಯಶಾಹಿ—"

"ನಾಶವಾಗಲಿ!"

"ಕ್ರಾಂತಿಗೆ—"

"ಜಯವಾಗಲಿ!"

ಅಧಿಕಾರಿ ಸನ್ನೆ ಮಾಡಿದ. ಉರುಳುಗಳು ಕತ್ತನ್ನು ಹಿಸುಕಿದುವು; ಹೊರಡಲು ಸಿದ್ಧವಾಗಿದ್ದ ಸ್ವರಗಳನ್ನು ತಡೆದುವು. ಹಲಿಗೆಗಳನ್ನು ಅರೆಕ್ಷಣದಲ್ಲಿ ತಪ್ಪಿಸಿದ್ದಾಯಿತು. ಆ ನಾಲ್ಕು ದೇಹಗಳೂ ಕಂದಕದಲ್ಲಿ ತೂಗಾಡಿದುವು. ಉರುಳು ಮತ್ತಷ್ಟು ಮತ್ತಷ್ಟು ಬಿಗಿಯಾಯಿತು.

'ಸಾಯುವವರೆಗೂ ನೇಣು...'

ತೂಗಾಡುತ್ತಿದ್ದ ಜೀವಗಳಿಂದ ಸ್ವರ ಹೊರಡುತ್ತಿಲ್ಲ, ಆದರೆ ಸೆರೆಮನೆಗೆ ಸೆರೆಮನೆಯೇ ಘೋಷಗಳಿಂದ ಪ್ರತಿಧ್ವನಿಸುತ್ತಿದೆ.

ಬೆಳಗಾಗಿತ್ತು. ಸೂರ್ಯ ತೋರಿಸಿಕೊಳ್ಳಬೇಕಾದ ಹೊತ್ತು. ಆದರೂ ಯಾಕೋ ಅವನ ಸುಳಿವಿಲ್ಲ.

"ಹೊರಗೆ ಜನ ನೆರೆದಿದ್ದಾರೆ. ಶವಗಳು ಬೇಕಂತೆ."

"ಅವರಿಗೆ ಹ್ಯಾಗೆ ತಿಳೀತು?"

"ಹ್ಯಾಗೋ ಗೊತ್ತಿಲ್ಲ. ಬಂದಿದ್ದಾರೆ."

"ಏನ್ಮಾಡ್ತಾರಂತೆ? ಮೆರವಣಿಗೇನೋ? ಸಾಧ್ಯವಿಲ್ಲ. ಶವಗಳನ್ನು ಕೊಡಬೇಡಿ. ಇಲ್ಲೇ ದಫನ ಮಾಡಿ!"

ಕರಿಯ ಗೋಡೆಗಳನ್ನು ಏರಿ ಬಂದ ಜಯಘೋಷಗಳೂ, ಶೋಕಗೀತದ ಕ್ರಾಂತಿಗೀತದ ಅಲೆಗಳೂ, ಜನ ಎಷ್ಟೋ ದಿನಗಳಿಂದ ನಿರೀಕ್ಷಿಸಿದ್ದ ಮರಣದ ಸುದ್ದಿಯನ್ನು—ಕಯ್ಯೂರು ವೀರರ ಮರಣದ ಸುದ್ದಿಯನ್ನು—ನಾಲ್ಕು ದಿಕ್ಕುಗಳಿಗೆ ಒಯ್ದುವು.

* * *

ಕಯ್ಯೂರಿನಲ್ಲಿ ತಡವಾಗಿ ಊಟಮಾಡಿ ವಿರಮಿಸಿದ್ದ ಜಮೀನ್ದಾರ ನಂಬಿಯಾರರು ಏನು ಮಾಡಿದರೂ ನಿದ್ದೆ ಬಾರದೆ, ಬಹಳ ದಿನಗಳಿಂದ ಯೋಚಿಸಿದ್ದೊಂದು ಕೆಲಸ ಮುಗಿಸಲೆಂದು, ಕೊಡಲಿ ಹಿಡಿದ ಆಳುಗಳೊಡನೆ ಸಂಜೆಯ ಹೊತ್ತು ಶಾಲೆಯ ಬಳಿ ಬಂದರು.

ಅಲ್ಲಿ ಮಾಸ್ತರು ನೆಟ್ಟುಹೋಗಿದ್ದ ಕಾಡುಮಾವಿನ ಎರಡು ಮರಗಳು ಇಪ್ಪತ್ತೈದರ ಜವ್ವನಿಗರಂತೆ ಸೆಟೆದು ನಿಂತು ಫಲ ಬಿಟ್ಟಿದ್ದುವು.

"ಇವನ್ನು ಕಡಿದು ಉರುಳಿಸಿ!" ಎಂದು ನಂಬಿಯಾರರು ಆಜ್ಞಾಪಿಸಿದರು.

ಅವು ಬಲಿಷ್ಠವಾಗಿದ್ದುವು. ಎರಡಲ್ಲ ನಾಲ್ಕು ಮರಗಳ ಶಕ್ತಿ ಇದ್ದಂತೆ ತೋರಿದ ಆ ಮರಗಳನ್ನು ಜಮೀನ್ದಾರರ ಊಳಿಗದ ಆಳುಗಳು ಪ್ರಯಾಸ ಪಟ್ಟು ಕಡಿದು ಕೆಡವಿದರು.

..................

ಆ ಬಳಿಕ ಸ್ವಲ್ಪ ಹೊತ್ತಿನಲ್ಲಿ ಕತ್ತಲಾಗುತ್ತಿದ್ದಂತೆ ಕಣ್ಣಾನೂರಿನಿಂದ ಸುದ್ದಿ ಬಂತು...

... ಮಳೆಯನ್ನು ಇದಿರುನೋಡಿ ಒಣಗಿ ಬಿಸಿಯಾಗಿದ್ದ ನೆಲ ತಣ್ಣಗಾಯಿತು. ಗಾಳಿ ಅತ್ತ ಸುಳಿಯಲು ನಿರಾಕರಿಸಿ ಮರಗಿಡಗಳು ಸ್ತಬ್ಧವಾದುವು. ನೀರವವಾಯಿತು ಪ್ರಕೃತಿ.

ಗುಡಿಸಲುಗಳಲ್ಲಿ ಸೊಡರು ಹಚ್ಚಲಾರದೆ ಕತ್ತಲಲ್ಲೆ ಕುಳಿತು, ಅಳಿದ ಆ ನಾಲ್ವರನ್ನು ನೆನೆದು ಜನ ಅತ್ತರು.

"ಅಪ್ಪು ಕುಟ್ಟಿಯನ್ನೆತ್ತಿಕೊಂಡು ಜಾನಕಿ ಹೊರಗೆ ಅಂಗಳದಲ್ಲಿ ಕುಳಿತಳು. ಹುಡುಗ ಒಂದೇ ಸಮನೆ ಅಳುತ್ತಿದ್ದ. ಅವನನ್ನು ಸಂತೈಸಲಾಗದೆ ಸೋತು ಜಾನಕಿ ಆಕಾಶವನ್ನು ದಿಟ್ಟಿಸಿದಳು. ಅಲ್ಲಿ ಕೋಟಿ ಚಿಕ್ಕೆಗಳು ಮಿನುಗುತ್ತಿದ್ದುವು. ಪಶ್ಚಿಮದಲ್ಲೊಂದೆಡೆ ನಾಲ್ಕು ನಕ್ಷತ್ರಗಳು ಒಂದೇ ಸಮನಾದ ಪ್ರಭೆಯಿಂದ ಬೆಳಗುತ್ತಿದ್ದಂತೆ ಕಂಡಿತು.

ಜಾನಕಿ ಆ ನಾಲ್ವರಲ್ಲಿ ಮೊದಲ ನಕ್ಷತ್ರದತ್ತ ಬೊಟ್ಟುಮಾಡಿ ಮಗುವಿಗೆ ಹೇಳಿದಳು:

"ಅಪ್ಪು ಕುಟ್ಟಿ, ಅಲ್ಲಿ ನೋಡಿದ್ಯಾ? ಅಪ್ಪ ಅಲ್ಲಿದ್ದಾರೆ, ನೀನು ಅಳಬಾರ್ದು. ಅತ್ತರೆ ಅವರಿಗೆ ದುಃಖವಾಗ್ತದೆ."

.....ಬಲು ದೀರ್ಘವಾಗಿತ್ತು ಕಯ್ಯೂರಿನಲ್ಲಿ ಆ ರಾತ್ರಿ.

ಹಾಗಿದ್ದರೂ ಇರುಳು ಕಳೆದು ಮೆಲ್ಲಮೆಲ್ಲನೆ ಬೆಳಗಾಯಿತು.

## ಕೊನೆಯ ಅಧ್ಯಾಯದ ಬಳಿಕ

ಠಣಂ ಠಣಕ್ ಠಣಂ....

ಮಂಗಳ ಹಾಡುತ್ತಿದ್ದಾರೆ. 'ಕಯ್ಯೂರು ವೀರಗಾಥಾ' ಇಲ್ಲಿಗಾಯಿತು, ಬಾಂಧವ! ಜನ ಏಳುತ್ತಿದ್ದಾರೆ. ಏಳಿ ನೀವೂ...

ಆ ಹೆಂಗಸರು ಗಂಡಸರೆಲ್ಲರ ಮುಖಗಳನ್ನೇನು ನೋಡುತ್ತಿದ್ದೀರಿ? ಕಪೋಲಗಳು ತೋಯ್ದಿವೆಯೆಂದೆ? ಭಾರವಾದ ಹೃದಯಗಳನ್ನು ಹೊತ್ತು ಅವರು ನಿಂತಿರುವರೆಂದೆ?

ಇದೇನು? ನನ್ನನ್ನು ಯಾಕೆ ಹೀಗೆ ನೋಡುತ್ತಿದ್ದೀರಿ?

ತಿಳಿಯಿತು! ಎಲ್ಲಿ—ಸ್ವಲ್ಪ ನಿಮ್ಮ ಕಪೋಲಗಳನ್ನೇ ನೀವು ಮುಟ್ಟಿಕೊಳ್ಳಿ!

ನಾನು ಬಲ್ಲೆ. ಅದು ತಪ್ಪಲ್ಲ. ಹಾಗೆ ಮಿಡಿಯುವ ಮನಸ್ಸೇ ನಿರ್ಮಲ ಹೃದಯಕ್ಕೆ ಕನ್ನಡಿ ಅಲ್ಲದೆ, ಈ ವೀರಕಥೆಯನ್ನು ಕೇಳಿ ಕರಗದ ಕಲ್ಲೆದೆಯಾದರೂ ಯಾವುದು?

ಜನ ಸಾಲುಕಟ್ಟಿ ನಿಂತು ಹುತಾತ್ಮರ ಸ್ಮಾರಕಸ್ತೂಪದೆದುರು ಶ್ರದ್ಧಾಂಜಲಿ ಅರ್ಪಿಸುತ್ತಿದ್ದಾರೆ ಬನ್ನಿ. ನಾವೂ ನಿಂತೂ ನಮ್ಮ ಸರದಿಗಾಗಿ ಕಾಯೋಣ.

.... ಆ ಅಮೃತಶಿಲೆಯ ಸ್ತೂಪ.... ಆ ವಾಚನಾಲಯ...

ದೇಶದಾದ್ಯಂತ ನಿಧಿ ಸಂಗ್ರಹಿಸಿ ಈ ಸ್ಮಾರಕದ ನಿರ್ಮಾಣ ಮಾಡಿದ್ದೇವೆ.

ಅಗೋ, ಸ್ವಯಂಸೇವಕರು ಕೆಂಪು ಗುಲಾಬಿ ಕೊಡುತ್ತಿದ್ದಾರೆ. ಬನ್ನಿ, ತೆಗೆದುಕೊಳ್ಳೋಣ.

ಈ ಚೆಂಗುಲಾಬಿ ಅಳಿದ ಹುತಾತ್ಮರ ನೆನಪಿಗೆ ಅರ್ಪಣೆ....

ಶಿಲೆಯ ಮೇಲೆ ರಕ್ತಾಕ್ಷರಗಳಲ್ಲಿ ಕೊರೆದಿರುವುದನ್ನು ಓದಿದಿರಾ?

**ಬದುಕನ್ನು ಪ್ರೀತಿಸಿದ ಈ ಬಾಂಧವರು ಒಳ್ಳೆಯ ಬದುಕಿಗೋಸ್ಕರ ದುಡಿದರು, ಮಡಿದರು.**

ಅಗಲಿದ ಸೋದರರರೇ! ಇಗೋ ನಮ್ಮ ವಿಪ್ಲವ ವಂದನೆ! ಇಗೋ ನಮ್ಮ ರಕ್ತ ನಮಸ್ಕಾರ!

ನಿಮ್ಮ ಕನಸೆಲ್ಲ ನನಸಾಗಿಲ್ಲ ಎಂದು ನಾವು ಬಲ್ಲೆವು. ನಮ್ಮ ನಾಡೇನೋ ಸ್ವತಂತ್ರವಾಗಿದೆ. ಆದರೆ ಇದಿನ್ನೂ ಸಮತೆಯ ಸೋದರತ್ವದ ಸುಖಶಾಂತಿಯ ಬೀಡಾಗಿಲ್ಲ. ಕಲ್ಲುಮುಳ್ಳಿನ ಹಾದಿ ನಡೆದು ಒಂದು ಘಟ್ಟವನ್ನೀಗ ನಾವು ತಲಪಿದ್ದೇವೆ. ಇಲ್ಲಿಂದ ಇನ್ನೊಂದು ಘಟ್ಟಕ್ಕೆ ಇನ್ನು ಪಯಣ. ಅದನ್ನೂ ಯಶಸ್ವಿಯಾಗಿಯೆ ಮುಗಿಸಿ ಗುರಿ ಸೇರುವ ವಿಷಯದಲ್ಲಿ ನಮಗೆ ಸಂದೇಹವಿಲ್ಲ. ವೀರಪರಂಪರೆಯುಳ್ಳ ನಿರ್ಮಲ ಚಾರಿತ್ರ್ಯವುಳ್ಳ ನಮ್ಮ ಜನತೆಗೆ ಆ ಶಕ್ತಿಯಿದೆ, ಹೇರಳವಾಗಿ ಇದೆ.

ಭಾಷಣ....

ಈ ನಾಡಿನ ವೃದ್ಧ ರೈತನಾಯಕ ಮಾತನಾಡುತ್ತಿದ್ದಾರೆ:

"ದೇಶಬಾಂಧವರೇ! ಆ ವೀರ ಬದುಕಿನ ಅಮರ ಸಂದೇಶಕ್ಕಿಂತ ಹೆಚ್ಚಿನ ಯಾವ ಮಾತನ್ನು ತಾನೇ ನಾನು ಆಡಬಲ್ಲೆ? ಅವರ ಕನಸನ್ನು ಪೂರ್ತಿಯಾಗಿ ನನಸುಗೊಳಿಸುವ ಭಾರ ನಿಮ್ಮದು. ನಿಮ್ಮ ಸ್ಮೃತಿಪಟಲದಲ್ಲಿ ಕಯ್ಯೂರು ವೀರರ ಸ್ಮರಣೆ ಚಿರಕಾಲ ಹಸುರಾಗಿರಲಿ! ಬದುಕಿನ ಹಾದಿಯಲ್ಲಿ ಮುಂದಕ್ಕೆ ಸಾಗುವ ನಿಮಗೆಲ್ಲ ಆ ಸ್ಮರಣೆ ತಿಳಿವು ನೀಡುವ ಬೆಳಕಾಗಲಿ!"

—ಕನ್ನಡನಾಡಿನ ಓ ಬಾಂಧವ! ಬನ್ನಿ! ಜನ ಜಯಘೋಷ ಮಾಡುತ್ತಿದ್ದಾರೆ. ನಾವೂ ಸ್ವರ ಸೇರಿಸೋಣ:

"ಕಯ್ಯೂರು ಹುತಾತ್ಮರ ವೀರಸ್ಮರಣೆಗೆ

—ರಕ್ತನಮಸ್ಕಾರ!"

ಕಯ್ಯೂರು ವೀರಯೋಧರ ಚಿರಸ್ಮರಣೆಗೆ

—ರಕ್ತನಮಸ್ಕಾರ!"

---



ಕಯ್ಯೂರು ಹೋರಾಟಕ್ಕೆ ಸಂಬಂಧಿಸಿದಂತೆ 60 ಜನರನ್ನು ಬಂಧಿಸಿ ಮಂಗಳೂರಿಗೆ ತಂದಿದ್ದರು ವಿಚಾರಣೆಗಾಗಿ .... ಸೆರೆಮನೆಯಲ್ಲಿ ಆ ಕೈದಿಗಳನ್ನು ಭೇಟಿಯಾದೆ. ಧೀರ್ಘ ವಿಚಾರಣೆಯ ವೇಳೆ ವರದಿಗಾರನಾಗಿ ಪ್ರತಿದಿನವೂ ಅವರು ಸಾಮೀಪ್ಯದ ಸವಿಯುಂಡೆ.

ಆ ವಿಚಾರಣೆ ಭಾರೀ ನಾಟಕ. ಅದರ ಭೀಕರತೆ ಸ್ಪಷ್ಟವಾದದ್ದು ನ್ಯಾಯಮೂರ್ತಿ ತೀರ್ಪು ನೀಡಿದ ದಿನ. ನಾಲ್ವರಿಗೆ ಮರಣದಂಡನೆ.

ನಾನು ನೋಡನೋಡುತ್ತಿದ್ದಂತೆಯೇ ಕಯ್ಯೂರಿನ ಶೋಷಿತರು ಇತಿಹಾಸ ರಚಿಸಿದ್ದರು, ಕಥೆಯಾಗಿದ್ದರು, ದಂತಕಥೆಯಾಗಿದ್ದರು.

'ಚಿರಸ್ಮರಣೆ' ಒಂದು ಕಾದಂಬರಿ, ಚರಿತ್ರೆಯಲ್ಲ, ಈ ಕೃತಿಯಲ್ಲಿ ನಾನು ಮಾಡಿರುವುದು, ಕಯ್ಯೂರಿನ ಹೋರಾಟದ ಅಂತಸ್ಸತ್ವವನ್ನು ಆ ಕಾಲಾವಧಿಯ ಚೇತನವನ್ನು-ಕಲೆಯಲ್ಲಿ ಸೆರೆಹಿಡಿಯುವ ಯತ್ನ.

'ಚಿರಸ್ಮರಣೆ'ಯ ಅನೇಕ ಪಾತ್ರಗಳು ನಿಜಜೀವನದಿಂದಲೇ ಕಾದಂಬರಿಯ ಪುಟಗಳಿಗೆ ನಡೆದುಬಂದಿವೆ. ಆದರೆ ಇಲ್ಲಿನ ಪಾತ್ರ ನಿರ್ವಹಣೆಗಾಗಿ ರಂಗ ಸಜ್ಜಿಕೆಯ ವೇಷ[illegible] ನಿರಾಕರಿಸಿಲ್ಲ. ಇನ್ನು ಕೆಲ ಪಾತ್ರ ಗಳನ್ನು ನಾನು [illegible] ಮೂಸೆಯಲ್ಲಿ.




ಡಿ. ವಿ. ಕೆ. ಮೂರ್ತಿ ಪ್ರಕಾಶನ : ಮೈಸೂರು ೪